ಅಕ್ಟೋಬರ್ 1997 ರೂ. 10

ಮನೆಯಲ್ಲಿ
ಎಲ್ಲರಿಗೂ
ಇಷ್ಟವಾಗುವ
ವಿಶಿಷ್ಟ ಮಾಸಿಕ

# ಬಿಸಿಲ ಬದುಕು

• ವಾಣಿಜ್ಯ • ವಿಕಾಸ • ಮಾಹಿತಿ • ಸಂಪರ್ಕ



ಐ.ಎಫ್.ಎಸ್.ವಿಜೇತೆ ನಂದಿನಿ

ವಿದ್ಯೆ-ಉದ್ಯೋಗ

ಐ.ಎ.ಎಸ್. ತರಬೇತಿ ಕೇಂದ್ರ
ಹೋಟೆಲ್ ಮ್ಯಾನೇಜ್‌ಮೆಂಟ್
ನೌಕಾದಳದಲ್ಲಿ ಉದ್ಯೋಗ
ಪ್ರತಿಭಾನ್ವೇಷಣೆ ಪರೀಕ್ಷೆ

ಆದಾಯ ತೆರಿಗೆ ಅಧಿಕಾರಿ
ಆಗುವುದು ಹೇಗೆ ?

ನೀರು ಕುಡಿಯುವ ಮುನ್ನ
ಮಗಳನ್ನು ಹೀಗೆ ಬೆಳೆಸಿ
ಲೈಂಗಿಕ ರೋಗದ ತಿಳಿವಳಿಕೆ
ವ್ಯಕ್ತಿತ್ವ ವಿಕಾಸ
ಅಷ್ಟ ಭ್ರಷ್ಟಾಚಾರ್ಯರು

ಅಕ್ಟೋಬರ್ ೧೯೯೭ ಸಂಪುಟ ೧ ಸಂಚಿಕೆ ೪

# ಬಿಸಿಲ ಬದುಕು

• ವಾಣಿಜ್ಯ • ವಿಕಾಸ • ಮಾಹಿತಿ • ಸಂಪರ್ಕ


ಸಂಪಾದಕ
**ಚಂದ್ರಕಾಂತ ವಡ್ಡು**

ನಿರ್ವಹಣೆ
**ಸಿ.ಪಿ. ಸುರೇಶ್**

ಪ್ರಸಾರ
**ವೈ.ಬಿ. ವಿಜಯಕುಮಾರ**

ಅಕ್ಷರ ಜೋಡಣೆ
**ಜಿ. ಸುರೇಶ್**



*ಲೇಖಕರು :*
ಉಷಾ ನವರತ್ನರಾಮ್
ಟಿ.ಆರ್. ಚಂದ್ರಶೇಖರ್
ಎನ್.ಕೆ. ಕುಲಕರ್ಣಿ
ಡಾ. ಎಸ್.ಸಿ. ಶರ್ಮಾ
ಕೋ. ಚೆನ್ನಬಸಪ್ಪ
ಗೋಪಾಲಕೃಷ್ಣ ವಂಡ್ಸೆ
ಎಂ.ಎಸ್. ನರಸಿಂಹಮೂರ್ತಿ
ಡಾ. ಬಿ. ಶೇಷಾದ್ರಿ
ವಿಜಯ್ ಅಂಗಡಿ
ಡಾ. ಟಿ.ಕೆ. ತಾಪಸ್
ಡಾ. ಆರತಿ ವೆಂಕಟೇಶ್
ದೀಪಾ ರವೀಂದ್ರ
ನಾರಾಯಣ ಎಂ. ಭಟ್
ಕೇಶವ ನಾಡಕರ್ಣಿ



ಮುಖಪುಟ ಚಿತ್ರ
**ಎಂ. ವಿಶ್ವನಾಥ**

ಮುಖ ಪುಟ ವಿನ್ಯಾಸ
**ಚಂದ್ರಶೇಖರ ಗುಬ್ಬಿ**

ವಿಳಾಸ
**ಬಿಸಿಲ ಬದುಕು** ಮಾಸ ಪತ್ರಿಕೆ
ಅಂಕುರ ಪ್ರಕಾಶನ, ಅಂಚೆ ಪೆಟ್ಟಿಗೆ : 7951
ಬಸವೇಶ್ವರ ನಗರ, ಬೆಂಗಳೂರು- 560 079






*ಸ್ಥಿರ ಶೀರ್ಷಿಕೆಗಳು*



Edited, Printed, Published and Owned by CHANDRAKANTA VADDU
473, I Cross, I Block, III Stage, Near Water Tank Bus Stop, Basaveshwaranagar,
BANGALORE - 560 079. Tel : 080 3358198 Fax : 080 5091136

   

# ಟಪಾಲು

ನಾನು ಈ ಪತ್ರಿಕೆಯನ್ನು ಮಾರುಕಟ್ಟೆಯಲ್ಲಿ ಆಕಸ್ಮಿಕವಾಗಿ ಕಂಡೆ, ಕೊಂಡೆ. ಚೆನ್ನಾಗಿ ಮೂಡಿ ಬಂದಿದೆ.

**- ಜಿ. ರುದ್ರೇಶ್, ಜೋಡಗಟ್ಟಿ**

♦

ನಾನು ಒಂದು ಮಾಸಿಕದ ಸಕ್ರಿಯ ಪಾಲುದಾರ. ಆದರೂ ಗುಣಕ್ಕೆ ಮತ್ಸರವಿರಬಾರದಲ್ಲವೇ? ನಿಮ್ಮ ವೈಯಕ್ತಿಕ ಚಿತ್ರಣ ನನಗೇನೂ ತಿಳಿದಿಲ್ಲವಾದರೂ ಪತ್ರಿಕೆಯನ್ನು ಓದಿದಾಗ ನಿಮ್ಮ ದಿಟ್ಟತನ, ಪ್ರೌಢಿಮೆ ಮೆಚ್ಚುಗೆಯಾಯಿತು.

**-ಡಾ. ಸಿ. ಎಸ್. ಸೋಮಯಾಜಿ,** ಬೆಂಗಳೂರು

♦

ನಿಮ್ಮದು ಒಳ್ಳೆಯ ಪ್ರಯತ್ನ ಅನ್ನುವುದರಲ್ಲಿ ಸಂದೇಹವಿಲ್ಲ. ಇಂದಿನ ಯುವಕ-ಯುವತಿಯರಿಗೆ ಬೇಕಾದ ಅಷ್ಟೂ ಮಾಹಿತಿಯನ್ನು ಅಚ್ಚುಕಟ್ಟಾಗಿ ಆಕರ್ಷಕವಾಗಿ ಚುಟುಕಾಗಿ ನೀಡಿರುತ್ತೀರಿ. ಕಂಪ್ಯೂಟರ್ ಕುರಿತ ಉಚಿತ ಮಾಹಿತಿ ಪುಸ್ತಕವಂತೂ ಅಪರೂಪದ್ದು.

**- ನಾ. ಡಿಸೋಜ,** ಸಾಗರ

♦

'ಬದುಕು' ಆಕರ್ಷಕವಾಗಿದೆ. ಯುವ ಜನತೆಗೆ ಮಾರ್ಗದರ್ಶಕವಾಗಿದೆ.

**- ಕನಕಾಚಲ ಕನಕಗಿರಿ,** ಸುರಪುರ

♦

'ಬಿಸಿಲ ಬದುಕು' ಒಂದು ಉಪಯುಕ್ತ ಮಾಸಿಕ. ನಾನು ಚಂದಾದಾರನಾಗಲು ಬಯಸುತ್ತೇನೆ. ವಿವರ ಕಳಿಸಿ.

**- ಕೆ.ಶಂಕರ ಭಟ್ಟ,** ಮಂಗಳ ಗಂಗೋತ್ರಿ

ದೀಪಾ ರವೀಂದ್ರ ಅವರ ''ಲೋಕಾಯುಕ್ತ: ಜನರಿಗೆಷ್ಟು ಆಪ್ತ'' ಲೇಖನದಿಂದ ಲಂಚ ಮಟ್ಟ ಹಾಕಲು ಉಪಯುಕ್ತ ಮಾಹಿತಿ ದೊರಕಿತು. ಒಟ್ಟಾರೆ ಮೂರನೇ ಸಂಚಿಕೆ ಉಳಿದೆರಡು ಸಂಚಿಕೆಗಳಿಗಿಂತ ಭಿನ್ನವಾಗಿತ್ತು.

**- ನಿರ್ಮಲಾ,** ಬ. ಬಾಗೇವಾಡಿ

ಪತ್ರಿಕೆಯಲ್ಲಿ ಎಲ್ಲರಿಗೂ ಮೆಚ್ಚುಗೆಯಾಗುವ ಶೀರ್ಷಿಕೆಗಳು ಮೂಡಿಬಂದಿವೆ. ಯಾವ ಕೊರತೆಯೂ ಇಲ್ಲ. ಇದೇ ರೀತಿ ಪತ್ರಿಕೆ ಮುನ್ನಡೆಯಲಿ.

**- ಆರ್. ಕೆ. ಸುಬೇದಾರ,** ಹಿರೇಮನ್ನಾಪುರ

'ಮಾರ್ಗದರ್ಶಿ' ವಿಭಾಗದಲ್ಲಿ ಡಾ.ಎಸ್.ಸಿ. ಶರ್ಮಾರವರು ಉತ್ತರಗಳನ್ನು ತುಂಬಾ ಚುಟುಕಾಗಿ ನೀಡುತ್ತಾರೆ. ಹೀಗಾಗಿ ವಿದ್ಯಾರ್ಥಿಗಳಿಗೆ ಸಂಪೂರ್ಣ ಮಾಹಿತಿ ಸಿಗುತ್ತಿಲ್ಲ. ಇನ್ನು ಮುಂದೆ ವಿದ್ಯಾರ್ಥಿಗಳ ಪ್ರಶ್ನೆಗಳಿಗೆ ಯಾವುದೇ ಗೊಂದಲವಿಲ್ಲದಂತೆ ಉತ್ತರಿಸಬೇಕೆಂದು ವಿನಯಪೂರ್ವಕ ವಿನಂತಿ.

**- ಶಂಕರಗೌಡ ಪಾಟೀಲ,** ಬಾದಾಮಿ

ನಾನು ಕಂಪ್ಯೂಟರ್ ಓದುತ್ತಿರುವುದರಿಂದ ಪತ್ರಿಕೆಯಲ್ಲಿ ಕಂಪ್ಯೂಟರ್ ಬಗ್ಗೆ ಹೆಚ್ಚು ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

**- ಕಿರಣಕುಮಾರ,** ಬೆಂಗಳೂರು

ಮಾರ್ಗದರ್ಶಿ, ಜಿಲ್ಲಾಧಿಕಾರಿಯಾಗುವುದು ಹೇಗೆ?, ನಗೆ ಬರಹ ಚೆನ್ನಾಗಿ ಮೂಡಿ ಬಂದಿವೆ.

**- ಟಿ. ತೇಜಾನಂದ,** ಕೊಟ್ಟೂರು

ಗದಗಿನ ಬಸ್‌ಸ್ಟಾಂಡ್ ಬುಕ್‌ಸ್ಟಾಲ್ ಹಾಗೂ ಇನ್ನಿತರ ಅಂಗಡಿಗಳಲ್ಲಿ 'ಬಿಸಿಲ ಬದುಕು' ಖರೀದಿಸಲು ಹೋದರೆ ಪತ್ರಿಕೆ 'ಖಲಾಸ್' ಆಗಿವೆ ಅಂತ ತಿಳಿಸಿದರು. ಅಬ್ಬಾ! ಈ ಪತ್ರಿಕೆ ಈಗಲೇ ಇಷ್ಟು ಜನಪ್ರಿಯವಾಯಿತೇ ಅಂತ ಅಚ್ಚರಿಯಾಯ್ತು.

**- ದೊಡ್ಡಮನಿ ಸದಾಶಿವ,** ಹುಲಕೋಟಿ

ಖರೇ ಹೇಳಬೇಕಂದ್ರ ನಿಮ್ಮಾಲ ಭಾಳ ಸಿಟ್ಟ ಬಂದಾದ. ನೀವು ಮುತ್ತಿನಂತಹ ವಿಷಯಗಳನ್ನ ಪುಸ್ತಕದೊಳಗ ಮುಚ್ಚಿಟ್ಟು ಬಂಗಾರದಂಥಾ ಹುಡುಗೀರ ಫೋಟೋ ಮ್ಯಾಲ ಹಾಕ್ತೀರಿ!

**- ಮ.ಶಿ. ನಿಂಬರಗಿ,** ಬಳಗಾನೂರ

ಮಕ್ಕಳನ್ನು ಹೇಗೆ ಬೆಳೆಸಬೇಕೆಂಬ ಲೇಖನ ತುಂಬಾ ಉಪಯುಕ್ತವಾಗಿದೆ.

**- ಶಾರದಾ,** ದುಂದೂರ

ನಿಮ್ಮ ಪತ್ರಿಕೆ ಓದದಿದ್ದರೆ ಏನೋ ಕಳೆದುಕೊಂಡಂತೆ ಹಳಹಳಿಯಾಗುತ್ತದೆ.

**- ಆರತಿ ಹೊಸಮನಿ,** ರಬಕವಿ

ಧಾರವಾಡದ ಉತ್ತರಕರ ಸ್ಟಾಲ್‌ನವರು ಕಳೆದ ಬಾರಿಯ ಎಲ್ಲಾ ಪ್ರತಿಗಳನ್ನು ಮಾರಾಟ ಮಾಡಿ ಹೆಚ್ಚಿನ ಪ್ರತಿಗಳಿಗೆ ಆರ್ಡರ್ ಕೊಟ್ಟ ಬಗ್ಗೆ ತಿಳಿಸಿದರು. ಹಂತಹಂತವಾಗಿ ಉನ್ನತಿ ಸಾಧಿಸಿದರೇ ಒಳ್ಳೆಯದು. ಬಗ್ಗ ಎಂಡು ಹೊತ್ತಿಕೊಂಡು ನಂದಿಹೋಗಬಾರದು. ಇಷ್ಟು ಸಂಗತಿಗಳನ್ನು ಹೊತ್ತು ತರುವ ಪತ್ರಿಕೆಗಳು ಕಡಿಮೆ. ಡಾ. ಪಾಪು ಹೇಳುವಂತೆ ಪತ್ರಿಕೆ ಜನರ ಜ್ಞಾನ ಕ್ಷಿತಿಜವನ್ನು ಹೆಚ್ಚಿಸಬೇಕು. ನಿಮ್ಮ ಪತ್ರಿಕೆ ಅತ್ಯಂತ ಸಮರ್ಥ ರೀತಿಯಲ್ಲಿ ಈ ಕೆಲಸ ಮಾಡುತ್ತಿದೆ.

ಡಾ. ಪಾಪು ವಿಷಯದಲ್ಲಿ ಯಾರೋ ಅರೆಬೆಂದ ವ್ಯಕ್ತಿ ವಿಷಯವನ್ನು ಸರಿಯಾಗಿ ತಿಳಿದುಕೊಳ್ಳದೆ ಬರೆದರು. ಕರ್ನಾಟಕ ಇಬ್ಬಾಗ ಇಚ್ಛೆ ಯಾರಿಗೂ ಇಲ್ಲ. ೧೯೫೭ರಿಂದ ನಾನು ಈ ಎಲ್ಲಾ ಧುರೀಣರ ಒಳಹೊರಗನ್ನು ಬಲ್ಲೆ.

**- ನಿರಂಜನ ವಾಲಿಶೆಟ್ಟರ,** ಹುಬ್ಬಳ್ಳಿ

ಬಿಸಿಲ ಬದುಕು ವಿಭಿನ್ನವಾಗಿ ಮೂಡಿ ಬರುತ್ತಿದೆ. ವಿಷಯಗಳ ವೈವಿಧ್ಯದಿಂದ ಲಕ್ಷಾಂತರ ಹೃದಯಗಳನ್ನು ಸೂರೆಗೊಂಡಿದೆ. ಸಕಲರ ಬೆಂಬಲ ನಿಮಗಿದೆ.

**- ಜಿ.ಬಿ. ಶೀಲವಂತರ,** ಬಾದಾಮಿ

ನಾನು ಕೆಲವೊಂದು ಮಾಸ ಪತ್ರಿಕೆ ಹಾಗೂ ವಾರಪತ್ರಿಕೆ ಓದುತ್ತಿದ್ದೆ. ಇತ್ತೀಚೆಗೆ ಬೇಜಾರಾಗಿ ಪತ್ರಿಕೆ ಕೊಳ್ಳುವುದನ್ನೇ ಬಿಟ್ಟಿದ್ದೆ. 'ಬದುಕು' ನೋಡಿ ಮತ್ತೆ

ನಾನು ತಮಗೆ ಪ್ರಕಟಣೆ ಕೃಪೆಗಾಗಿ ''ದೇಹ ನಶ್ವರ ದೃಷ್ಟಿ ಅಮರ'' ಲೇಖನ ಕಳಿಸಿದ್ದೆ. ಸ್ವೀಕೃತಿ/ಅಸ್ವೀಕೃತಿ ಬಗ್ಗೆ ತಿಳಿಸಲು ಮನವಿ.

**- ಎಚ್.ಬಿ. ಹೊರಕೇರಿ,** ಬದಾಮಿ

**ಲೇಖನ ಪ್ರಕಟಣೆಗೆ ಸ್ವೀಕೃತವಾದರೆ ಮಾತ್ರ ಲೇಖಕರಿಗೆ ಪ್ರತ್ಯೇಕವಾಗಿ ತಿಳಿಸಲಾಗುವುದು. ಅಂಚೆ ಲಕೋಟೆ ಇರಿಸಿದ್ದರೆ ಅಸ್ವೀಕೃತ ಲೇಖನ ಹಿಂದಿರುಗಿಸಲು ಸಾಧ್ಯ.**

**- ಸಂಪಾದಕ**

ಓದಲು ಶುರು ಮಾಡಿದ್ದೇನೆ.

**- ದಶರಥ, ಹುಣಶ್ಯಾಳ**

ಇಷ್ಟೊಂದು ಸಮೃದ್ಧ ವಿಷಯಗಳನ್ನೊಳಗೊಂಡ ಸಂಚಿಕೆ ಕಂಡು ಆಶ್ಚರ್ಯವಾಯಿತು. ನಿಜಕ್ಕೂ ಓದುಗರ ಪ್ರೋತ್ಸಾಹವಿಲ್ಲದೆ ಹೋದರೆ ಇಂತಹ ಪತ್ರಿಕೆ ನಡೆಸುವುದು ಕಷ್ಟದ ಮಾತು. ''ಮುನ್ನುಡಿ'' ಯಲ್ಲಿ ಬರೀ ಹೊಗಳುವ ಮಾತುಗಳೇ ಇರುವುದ ರಿಂದ ಅವನ್ನು ಪ್ರಕಟಿಸುವಾಗ ಎಚ್ಚರಿಕೆ ಅಗತ್ಯ.

**- ಶ್ರೀನಿವಾಸ ಜೋಕಟ್ಟೆ, ಮುಂಬೈ**

'ಲೋಕಾಯುಕ್ತ: ಜನರಿಗೆಷ್ಟು ಆಪ್ತ?' ಲೇಖನ ಸಾಮಾನ್ಯ ಜನರಿಗೆ ಎಟಕುವಂತಿದೆ.

**- ಎಸ್.ವಿ. ಮಂಜುನಾಥ, ಶಿವಮೊಗ್ಗ**

'ಐ.ಪಿ.ಎಸ್. ಮಾಡುವುದು ಹೇಗೆ ?' ಓದಿ ನನ್ನ ಸಂಶಯ ನಿವಾರಣೆಯಾಯಿತು. ನಿಮ್ಮದು ವಾರ ಪತ್ರಿಕೆಯಾಗಬಾರದೇ?

**- ಹೇಮಲತಾ ಎಂ.ಬಿ., ಚಿಕ್ಕಮಗಳೂರು**

ನಿಮ್ಮ ಪತ್ರಿಕೆಯನ್ನು ಭಾಲ್ಕಿ ಬಸ್ ನಿಲ್ದಾಣದಲ್ಲಿ ಕೊಂಡು, ಓದಿ ಅಲ್ಲಿಂದಲೇ ಪತ್ರ ಬರೆಯುತ್ತಿದ್ದೇನೆ. ಅಂದರೆ ನನಗೆ ಈ ಪತ್ರಿಕೆ ಎಷ್ಟು ಹಿಡಿಸಿತು ಅಂತ ಅರ್ಥವಾಗಿರಬೇಕು. ನನಗೆ ನಿಮ್ಮ ಹಿಂದಿನ ಸಂಚಿಕೆಗಳ ಬಗ್ಗೆ ಕುತೂಹಲವಾಗಿದೆ. ಹಿಂದಿನ ಎಲ್ಲಾ ಸಂಚಿಕೆ ಕಳಿಸಿಕೊಡಿ.

**- ಲಕ್ಷ್ಮೀಕಾಂತ ಪಾಟೀಲ, ಭಾಲ್ಕಿ**

ವಿದ್ಯೆ-ಉದ್ಯೋಗ ನೀಡುವುದರೊಂದಿಗೆ ವೈಚಾರಿಕತೆ ಯನ್ನು ಬೆಳೆಸುವ ಉತ್ತಮ ಲೇಖನಗಳು ಪ್ರಕಟಗೊಳ್ಳಲಿ. ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಬೇಕಾಗುವ Objective ಜ್ಞಾನದ ಜೊತೆಗೆ Subjective ಜ್ಞಾನವನ್ನು ನೀಡುವುದಾದರೆ ವಿದ್ಯಾರ್ಥಿಗಳಿಗೆ ಇನ್ನೂ ಒಳಿತಲ್ಲವೆ?

**-ಗಂಗಾಧರಯ್ಯ ಹಿರೇಮಠ, ಶಹಾಪುರ.**

ಭಾವಿ ಪ್ರಜೆಗಳಿಗೆ ಮಾರ್ಗದರ್ಶಕವಾಗಲಿ.

**- ಸೊ.ಮ. ನಾಗಭೂಷಣ, ಧಾರವಾಡ**

೩ನೇ ಸಂಚಿಕೆಯೊಂದಿಗೆ ಕೊಟ್ಟಿರುವ ಉಚಿತ ಪುಸ್ತಕ ವಿದ್ಯಾರ್ಥಿಗಳಿಗೆ ಮಾರ್ಗದರ್ಶಕವಾಗಿದೆ.

**-ಅಶ್ವತ್ಥನಾರಾಯಣಸ್ವಾಮಿ, ಗೌರಿಬಿದನೂರು.**

''ಪ್ರಾಥಮಿಕ ಶಿಕ್ಷಣಕ್ಕೆ ಸಂವಿಧಾನ ತಿದ್ದುಪಡಿ!'' ಓದಿ ಬಹಳ ಸಂತೋಷವಾಯಿತು. ಇಂತಹ ನವೀನ ಮಾಹಿತಿ ನೀಡುತ್ತಲೇ ಇರಿ.

**-ಹೂವಪ್ಪ ಬಿಂಗಿ, ಬಂಗಾರಪೇಟೆ**

ಈ ಪತ್ರಿಕೆ ಮನೆ ಜನರಿಗೆಲ್ಲಾ ಸಂತೋಷ ನೀಡಿದೆ.

**-ಎಂ.ಎಂ. ಹೂಲಿ, ಹುಬ್ಬಳ್ಳಿ**

ವೈಜ್ಞಾನಿಕ, ವೈಚಾರಿಕ ಲೇಖನಗಳು ಪ್ರಕಟಗೊಳ್ಳಲಿ.

**-ರಾಮಮೂರ್ತಿ, ಹುಳಿಯಾರು**

ಪರಿಪೂರ್ಣ ಮಾಹಿತಿಗಾಗಿ 'ಬಿಸಿಲ ಬದುಕು' ನೋಡಿರಿ ಎನ್ನುವ ಕಾಲ ದೂರವಿಲ್ಲ.

**-ವಿನೋದಕುಮಾರ ಗುಂಜಾಳ ಗೆಳೆಯರ ಬಳಗ, ಹುಬ್ಬಳ್ಳಿ**

ಸರಿ ಉತ್ತರಗಳ ಕ್ವಿಜ್ ಪ್ರವೇಶ ಪತ್ರಗಳನ್ನೆಲ್ಲಾ ಸೇರಿಸಿ ಲಾಟರಿ ಮೂಲಕ ಬಹುಮಾನ ನಿರ್ಧರಿಸುವ ಬದಲು ಸರಿಯುತ್ತರ ಕಳಿಸಿದವರಿಗೆಲ್ಲಾ ಬಹುಮಾನ ಮೊತ್ತ ಹಂಚಿದರೆ ಹೇಗೆ?

**-ಟಿ. ಪ್ರಭಾಕರ, ಇಳಕಲ್ಲ**

*ನಮ್ಮ ಕಚೇರಿಗೆ ಪ್ರವಾಹದಂತೆ ಹರಿದು ಬರುವ ಸರಿಯುತ್ತರ ಪ್ರವೇಶ ಪತ್ರಗಳ ಸಂಖ್ಯೆ ೪೦೦೦ ಮೀರುತ್ತದೆ. ಎಲ್ಲರಿಗೂ ಬಹುಮಾನ ಹಂಚಿದರೆ ತಲಾ ೨೫ ಪೈಸೆ ಬರುತ್ತದೆ! ಆದ್ದರಿಂದ ನಿಮ್ಮ ಸಲಹೆ ಕಾರ್ಯಸಾಧುವಲ್ಲ.*

***-ಸಂಪಾದಕ***

ನಾನು ಹುಟ್ಟಿ ೨೦ ವರ್ಷಗಳಾದರು ಒಂದು ಬಾರಿಯೂ ದುಡ್ಡು ಕೊಟ್ಟು ಪತ್ರಿಕೆ ಖರೀದಿಸಿದ್ದಿಲ್ಲ. ಆದರೆ ನಿಮ್ಮ ಪತ್ರಿಕೆ ನನ್ನ ಮನಸ್ಸು ಗೆದ್ದುಬಿಟ್ಟಿದೆ..

**-ರೇಣುಕಾ ಜೋಶಿ, ಸೂಡಿ**

ಆಕಸ್ಮಿಕವಾಗಿ ಸ್ನೇಹಿತರೊಬ್ಬರ ಮನೆಯಲ್ಲಿ ತಮ್ಮ ''ಬಿಸಿಲ ಬದುಕು'' ಮಾಸ ಪತ್ರಿಕೆಯನ್ನು ನೋಡುವ ಅವಕಾಶ ಸಿಕ್ಕಿತು. 'ನಾಯಿಕೊಡೆ' ಗಳಂತೆ ಹುಟ್ಟಿಕೊಳ್ಳುತ್ತಿರುವ ಹಲವಾರು ಪತ್ರಿಕೆಗಳಲ್ಲಿ ಇದೂ ಒಂದು ಎಂದು ಉದಾಸೀನವಾಗೇ ಪುಟ ತೆರೆದೆ. ಆದರೆ ನನ್ನ ಊಹೆ ಸುಳ್ಳಾಗಿತ್ತು. ನಿಜಕ್ಕೂ ಬಹಳ ಉತ್ತಮವಾದ, ಉಪಯುಕ್ತವಾದ ಹಲವಾರು ಲೇಖನಗಳು ನನ್ನ ಮನಸೂರೆಗೊಂಡವು. ಈ ಪತ್ರಿಕೆ ನಿಜಕ್ಕೂ ಒಳ್ಳೆಯ ಕೆಲಸ ಮಾಡುತ್ತಿದೆ ಎಂದೆನಿಸಿತು. ಬರೇ ಧಾರಾವಾಹಿಗಳು, ಕಥೆಗಳು, ಸಿನಿಮಾ ಅಂಕಣ ಇಷ್ಟರಲ್ಲೇ ಮುಗಿದು ಹೋಗುವ ಹಲವಾರು ಪತ್ರಿಕೆಗಳಿಗಿಂತ ಜ್ಞಾನದಾಹಿಗಳಿಗೆ ತಿಳಿದುಕೊಳ್ಳಲು ಆಸಕ್ತಿ ಇರುವವರಿಗೆ ನಿಮ್ಮ ಪತ್ರಿಕೆ ನಿಜಕ್ಕೂ ಉತ್ತಮವಾದುದನ್ನು ನೀಡುತ್ತಿದೆ ಎಂದು ಹೇಳಲು ನನಗೆ ಹೆಮ್ಮೆ ಎನಿಸುತ್ತಿದೆ.

**- ಸಿ.ಎಸ್. ಬೋಪಯ್ಯ, ಬೆಂಗಳೂರು**

'ಬಿಸಿಲ ಬದುಕು' ಪತ್ರಿಕೆ ಚೆನ್ನಾಗಿದೆ. ನನಗಿಂತಲೂ ನನ್ನ ಪತ್ನಿ ಪಾರ್ವತಿಗೆ ತುಂಬಾ ಇಷ್ಟವಾಗಿದೆ. ಕೊಟ್ಟೂರಿನಂಥಾ ಊರಿನಲ್ಲಿ ೫೦-೬೦ ಪ್ರತಿ ಖರ್ಚಾಗುತ್ತಿವೆ. ಜನ ಇಷ್ಟಪಡುತ್ತಿದ್ದಾರೆ ಅಂತ ಅಲ್ಲಿನ book-stall ಗಳಲ್ಲಿ ಹೇಳಿದರು.

**- ಎಸ್.ಎಂ. ಶಶಿಧರ, ಬಳ್ಳಾರಿ**

ಕ್ರೀಡೆಗಳ ಬಗ್ಗೆ ಹೆಚ್ಚು ಒಲವು ತೋರಬೇಕೆಂದು ಕೇಳಿಕೊಳ್ಳುತ್ತೇನೆ.

**- ಮರಿಸ್ವಾಮಿಗೌಡ, ಶ್ರೀರಂಗಪಟ್ಟಣ**

◆

ಈ ಪ್ರಕಟಣೆ ವಾಣಿಜ್ಯ, ವಿಕಾಸ, ಮಾಹಿತಿ, ಸಂಪರ್ಕ ಇತ್ಯಾದಿ ವಿಷಯಗಳಿಗೆ ಮೀಸಲಾಗಿದ್ದು ವಿದ್ಯಾರ್ಥಿಗಳಿಗೂ, ಸಾಮಾನ್ಯ ಜನರಿಗೂ ಉಪಯೋಗವಾಗು ತ್ತದೆಂದು ನಂಬಿದ್ದೇನೆ.

**- ಡಾ.ಡಿ.ಎಂ.ನಂಜುಂಡಪ್ಪ, ಬೆಂಗಳೂರು**

◆

ಸೆಪ್ಟೆಂಬರ್ ಮಾಹೆಯ ಸಂಚಿಕೆ ಕೊಂಡು ರಂಗಸಿಂಹ ಮಾಸ್ಟರ್ ಹಿರಣ್ಣಯ್ಯರವರನ್ನು ಕಾಣಲು ಹೋದೆ. ನನ್ನ ವಾಕ್‌ಚಾತುರ್ಯದ ಗುರು ಅಮೆರಿಕಾ ಪ್ರವಾಸಕ್ಕೆ ಹೊರಟು ನಿಂತಿದ್ದರು. ನನ್ನ ಕೈಯಲ್ಲಿದ್ದ 'ಬಿಸಿಲ ಬದುಕು' ಪತ್ರಿಕೆಯನ್ನು ಅವರಿಗೆ ಕೊಟ್ಟು ಅದು ಅವರ ಪ್ರವಾಸದಲ್ಲಿ 'ದಾರಿಬುತ್ತಿ' ಯಾಗಲೆಂದು ಹಾರೈಸಿದೆ. ಅಂತೂ ಬಿಸಿಲ ಬದುಕು ಖಂಡಾಂತರ ಪ್ರಯಾಣ ಬೆಳೆಸಿತು.

**- ಎಂ.ಕೆ.ಕೇಶವಮೂರ್ತಿ, ಬೆಂಗಳೂರು**

◆

ಸೆಪ್ಟೆಂಬರ್ ಸಂಚಿಕೆಯ 'ಲೋಕಾಯುಕ್ತ' ಲೇಖನದಲ್ಲಿನ ಎಸ್.ಎಸ್. ರೋಣದ ಅವರು ರೋಣದವರಲ್ಲ. ಇವರು ನಮ್ಮ ಮುಂಡರಗಿ ತಾಲೂಕಿನ ಎಕಲಾಸಪುರ ಗ್ರಾಮದವರೆಂಬ ಬಗ್ಗೆ ನಮಗೆ ಹೆಮ್ಮೆ.

**-ಡಾ.ಸಿ.ಎಂ.ಚುರ್ಚಿಹಾಳಮಠ, ಮುಂಡರಗಿ**

# ಕರ್ನಾಟಕದಲ್ಲಿ ಸಾಕ್ಷರತೆ: ಪ್ರಾದೇಶಿಕ ಆಯಾಮಗಳು

*ಸಾಕ್ಷರತೆಯಲ್ಲಿನ ಪ್ರಾದೇಶಿಕ ಅಂತರಗಳ ಬಗ್ಗೆ ಸರ್ಕಾರವು ಗಮನವನ್ನೇ ನೀಡದಿರುವುದು ಆಶ್ಚರ್ಯದ ಸಂಗತಿಯಾಗಿದೆ. ಸಾಕ್ಷರತೆಗೆ ಸಂಬಂಧಿಸಿದಂತೆ ಇಡೀ ರಾಜ್ಯದಲ್ಲಿ ಹೈದರಾಬಾದು ಕರ್ನಾಟಕ ಪ್ರದೇಶದ ನಿಕೃಷ್ಟ ಸ್ಥಿತಿಯು ೧೯೬೧ ರಿಂದಲೂ ಅವಿಚ್ಛಿನ್ನವಾಗಿ ಮುಂದುವರಿದಿದೆ. ಕರ್ನಾಟಕವು ಏಕೀಕರಣಗೊಂಡು ೪೦ ವರ್ಷಗಳು ಸಂದರೂ ಸಹ ಸರ್ಕಾರವು ಸಾಕ್ಷರತೆ ಕುರಿತಂತೆ, ಅದರ ಪ್ರಾದೇಶಿಕ ಅಂತರ ಕುರಿತಂತೆ ಸೂಕ್ತ ಕ್ರಮಗಳನ್ನು ಕೈಗೊಳ್ಳದಿರುವುದು ಅಕ್ಷಮ್ಯ. ಇದು ಸರ್ಕಾರದ ವೈಫಲ್ಯವನ್ನು ಸೂಚಿಸುವುದರ ಜೊತೆಗೆ ಸದರಿ ಸಮಸ್ಯೆ ಮಡುಗಟ್ಟಿಕೊಂಡಿರುವ ಪ್ರದೇಶದ ರಾಜಕೀಯ ನಾಯಕತ್ವದ ವೈಫಲ್ಯವನ್ನೂ ಸೂಚಿಸುತ್ತದೆ.*



○ ಡಾ. ಬಿ. ಶೇಷಾದ್ರಿ
○ ಟಿ.ಆರ್. ಚಂದ್ರಶೇಖರ್

ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ, ಕಮಲಾಪುರ-೫೮೩ ೨೨೧

**ಕ**ಳೆದ ೫೦ ವರ್ಷಗಳ ಸ್ವಾತಂತ್ರ್ಯೋತ್ತರ ಕಾಲಾವಧಿಯಲ್ಲಿ ಕರ್ನಾಟಕವು ಅನೇಕ ಮುಖಗಳಲ್ಲಿ ಪ್ರಗತಿ ಸಾಧಿಸಿದೆ. ಆದರೆ ನಾವು ಅನುಭವಿಸಿರುವ ಸೋಲುಗಳು ಕಡಿಮೆಯೇನಲ್ಲ. ಆಧುನಿಕ ಭಾರತದ ರೂವಾರಿ ಪಂ. ನೆಹರೂ ತಮ್ಮ ಪ್ರಸಿದ್ಧ ಆಗಸ್ಟ್ ೧೪, ೧೯೪೭ರಲ್ಲಿ ಮಾಡಿದ 'ವಿಧಿಯೊಂದಿಗೆ ಮಾಡಿಕೊಂಡ ಕಟ್ಟುಪಾಡು' ಎಂಬ ಭಾಷಣದಲ್ಲಿ ಗುರುತಿಸಿದ್ದ 'ಬಡತನ, ಮೌಢ್ಯ, ರೋಗಗಳು ಮತ್ತು ಅವಕಾಶಗಳಲ್ಲಿ ಅಸಮಾನತೆ'ಗಳನ್ನು ನಿವಾರಿಸುವಲ್ಲಿನ ನಮ್ಮ ವೈಫಲ್ಯವು ಇಂದು ಕಣ್ಣಿಗೆ ಕಟ್ಟುವಂತೆ ಢಾಳಾಗಿ ಗೋಚರಿಸುತ್ತಿದೆ. ಈ ನಾಲ್ಕು ಸವಾಲುಗಳನ್ನು ಎದುರಿಸುವಲ್ಲಿ ಸಾಮಾನ್ಯ ಅಸ್ತ್ರವಾದ ಸಾಕ್ಷರತೆ ಹಾಗೂ ಪ್ರಾಥಮಿಕ ಶಿಕ್ಷಣಗಳಲ್ಲಿನ ನಮ್ಮ ವೈಫಲ್ಯವು ಹಿಮಾಲಯ ಸದೃಶವಾದುದಾಗಿದೆ.

ಲಾಗಾಯ್ತಿನಿಂದ ಸಾಕ್ಷರತೆಯನ್ನು ಅಭಿವೃದ್ಧಿಯ ಒಂದು ಸಾಧನವೆಂದು ಪರಿಭಾವಿಸುತ್ತಾ ಬರಲಾಗಿದೆ. ಅದು ನಿಜ ಕೂಡ ಹೌದು! ಆದರೆ ಸಾಕ್ಷರತೆ ಕುರಿತ ಉಪಕರಣವಾದಿ ಸಂಕಥನವು ಇಂದು ತೀವ್ರ ಟೀಕೆಗೆ ಗುರಿಯಾಗಿದೆ. ಸಾಕ್ಷರತೆ ತನ್ನಷ್ಟಕ್ಕೆ ತಾನೆ ಅಂದರೆ ಅಂತಸ್ಥವಾಗಿ ಮಹತ್ವವಾದುದು ಎಂಬ ಸಂಗತಿಯನ್ನು ಅಮರ್ತ್ಯ ಸೇನ್ ಪ್ರತಿಪಾದಿಸುತ್ತಿದ್ದಾರೆ. ಸಾಕ್ಷರತೆಯು ಉತ್ತಮ ಬದುಕಿನ ಒಂದು ಅಂತರ್ಗತ ಗುಣ ಎಂದು ಅವರು ಹೇಳುತ್ತಿದ್ದಾರೆ. ಸಾಕ್ಷರತೆಗೆ ಸಂಬಂಧಿಸಿದ ಲಿಂಗ ಸಂಬಂಧಿ ತಾರತಮ್ಯಗಳೂ ಇದು ಚರ್ಚೆಯ ಮುಂಚೂಣಿಗೆ ಬರುತ್ತಿವೆ. ಲಿಂಗ ಸಂಬಂಧಿ ತಾರತಮ್ಯ ಹಾಗೂ ಮಹಿಳೆಯ ನಿಕೃಷ್ಟೀಕರಣಗಳ ನಿವಾರಣೆಯಲ್ಲಿ ಮಹಿಳೆಯರ ಸಾಕ್ಷರತೆಯು ಪುರುಷರ ಸಾಕ್ಷರತೆಗಿಂತ ಹೆಚ್ಚು ಪರಿಣಾಮಕಾರಿ ಹಾಗೂ ವಿಶ್ವಾಸಾರ್ಹ ಪಾತ್ರ ವಹಿಸುತ್ತದೆ ಎಂಬ ಸಂಗತಿಗಳು ಅಮರ್ತ್ಯ ಸೇನ್‌ರ ಅಧ್ಯಯನಗಳಿಂದ ದೃಢಪಟ್ಟಿವೆ. ಅವರ ಪ್ರಕಾರ ಸಾಕ್ಷರತೆಯು ಉತ್ತಮ ಬದುಕಿನ ಮಾನ ದಂಡ ಹಾಗೂ ಅದರ ಅಂತರ್ಗತ ಗುಣ. ಉತ್ತಮ ಬದುಕು ಎಂದರೆ ಅಪಾರ ವರಮಾನ, ಸಮೃದ್ಧ ಉತ್ಪನ್ನ, ಅಗಾಧವಾದ ಬಂಡವಾಳ ಎಂಬ ಸಂಕಥನಕ್ಕೆ ಪರ್ಯಾಯವಾಗಿ ಉತ್ತಮ ಬದುಕನ್ನು ಸಾಧಿಸಲು ಅಗತ್ಯವಾದ ಸಾಮರ್ಥ್ಯ ಮತ್ತು ಸ್ವಾತಂತ್ರ್ಯಗಳನ್ನು ಒಳಗೊಂಡ 'ಧಾರಣಶಕ್ತಿ' ಎಂಬ ಸಂಕಥನವನ್ನು ಅಮರ್ತ್ಯ ಸೇನ್ ಕಟ್ಟುತ್ತಿದ್ದಾರೆ.

ಈ ಧಾರಣ ಶಕ್ತಿಯ ಮೂಲದಲ್ಲಿರುವ ಚಾಲಕ ಶಕ್ತಿಯೆಂದರೆ ಸಾಕ್ಷರತೆ. ಬದುಕು ಉತ್ತಮಗೊಳ್ಳಲು ವರಮಾನ ಅಪಾರವಾಗಿರಬೇಕು. ಉತ್ಪನ್ನ ಸಮೃದ್ಧವಾಗಿರಬೇಕು. ಬಂಡವಾಳ ದಂಡಿಯಾಗಿರಬೇಕು, ನಿಜ. ಆದರೆ ಅವುಗಳ ಇರುವಿಕೆಯೇ ಅಭಿವೃದ್ಧಿಯಲ್ಲ! ಅವು

ಕೋಷ್ಟಕ -೧

## ಕರ್ನಾಟಕದಲ್ಲಿ ಸಾಕ್ಷರತೆಯ ಬೆಳವಣಿಗೆ : ಪ್ರಾದೇಶಿಕ ಸ್ವರೂಪ

| ಕ್ರಮ ಸಂ. | ವಿಭಾಗಗಳ ಹೆಸರು | ಸಾಕ್ಷರತೆ (ಶೇಕಡ) ದಶಕಗಳು | | | |
|---|---|---|---|---|---|
| | | ೧೯೬೧ | ೧೯೭೧ | ೧೯೮೧ | ೧೯೯೧ |
| ೧ | ಬೆಂಗಳೂರು | ೨೬.೪೪ (+೧.೦೪) | ೩೩.೪೪ (+೨.೦೦) | ೪೦.೯೦ (+೧.೯೦) | ೫೮.೦೪ (+೨.೦೦) |
| ೨ | ಮೈಸೂರು | ೨೬.೩೧ (+೦.೯೧) | ೩೩.೫೪ (+೨.೦೨) | ೪೧.೦೫ (+೨.೫೯) | ೫೯.೫೯ (೩.೫೫) |
| ೩ | ಬೆಳಗಾಂ | ೨೯.೩೧ (+೩.೯೧) | ೩೪.೩೪ (+೨.೮೨) | ೩೯.೮೨ (+೧.೩೨) | ೫೮.೩೮ (೨.೩೪) |
| ೪ | ಗುಲಬರ್ಗಾ (ಹೈದರಾಬಾದ್ ಕರ್ನಾಟಕ) | ೧೬.೪೪ (-೮.೯೬) | ೨೧.೦೨ (-೧೦.೫೦) | ೨೬.೬೮ (-೧೧.೭೮) | ೪೧.೨೯ (-೧೪.೭೫) |
| ೫ | ಕರ್ನಾಟಕ ರಾಜ್ಯ | ೨೫.೪೦ | ೩೧.೫೨ | ೩೮.೪೬ | ೫೬.೦೪ |

ವ್ಯಕ್ತಿಗೆ ದೊರೆಯುವ ಪ್ರಕ್ರಿಯೆಯೇ ಅಭಿವೃದ್ಧಿ, ಅದೇ ಧಾರಣ ಶಕ್ತಿ. ಈ ಕುರಿತು ಅಮರ್ತ್ಯಸೇನ್ ಹೇಳುತ್ತಾರೆ: ಆಹಾರ ಇರುವುದು ಬೇರೆ ಆದರೆ ಅದು ದೊರೆಯುವುದು ಬೇರೆ. ಬಡತನ, ಹಸಿವು, ಅನಾರೋಗ್ಯ ಮುಂತಾದವು ದೊರೆಯುವ ಕ್ರಿಯೆಗೆ ಸಂಬಂಧಿಸಿವೆ. ಈ ದೊರೆಯುವ ಪ್ರಕ್ರಿಯೆಯಲ್ಲಿ ಸಾಕ್ಷರತೆಯು ಆಯಕಟ್ಟಿನದಾಗಿದೆ. ಇರುವುದು ದೊರೆಯುವಂತೆ ಮಾಡುವ ಸಾಮರ್ಥ್ಯ ಸಾಕ್ಷರತೆಗಿದೆ.

ಕರ್ನಾಟಕದಲ್ಲಿ ೧೯೬೧ ರಿಂದ ೧೯೯೧ರ ಕಾಲಾವಧಿಯಲ್ಲಿ ಸಾಕ್ಷರತೆಯಲ್ಲಿ ಶೇ. ೨೫.೪೦ ರಿಂದ ಶೇ ೫೬.೦೪ಕ್ಕೆ ಏರಿಕೆಯಾಗಿದೆ. ಈ ಅವಧಿಯಲ್ಲಿ ಪುರುಷರ ಸಾಕ್ಷರತೆ ಶೇ. ೩೬.೧೫ರಿಂದ ಶೇ ೬೭.೭೬ಕ್ಕೆ ಏರಿಕೆಯಾಗಿದ್ದರೆ ಮಹಿಳೆಯರ ಸಾಕ್ಷರತೆ ಶೇ.೧೪.೧೯ ರಿಂದ ೪೪.೩೪ಕ್ಕೆ ಏರಿಕೆಯಾಗಿದೆ. ಇದು ಸಾಕ್ಷರತೆಯಲ್ಲಿ ಲಿಂಗ ಸಂಬಂಧಿ ಅಂತರವನ್ನು ತೋರಿಸುತ್ತದೆ. ವಿಷಾದಕರ ಸಂಗತಿಯೆಂದರೆ ೧೯೬೧ ಮತ್ತು ೧೯೯೧ ಇವೆರಡು ಕಾಲಘಟ್ಟಗಳಲ್ಲಿ ಸ್ತ್ರೀ-ಪುರುಷರ ನಡುವಿನ ಸಾಕ್ಷರತಾ ಅಂತರವು ಕ್ರಮವಾಗಿ ಶೇ. ೨೧.೨೬ರಿಂದ ಶೇ೨೩.೪೨ಕ್ಕೆ ಏರಿಕೆಯಾಗಿದೆ.

ಕರ್ನಾಟಕದ ನೆರೆಯ ರಾಜ್ಯಗಳಾದ ಕೇರಳ ಮತ್ತು ತಮಿಳುನಾಡುಗಳು ಸಾಕ್ಷರತೆಯಲ್ಲಿ ಅದ್ವಿತೀಯ ಪ್ರಗತಿ ಸಾಧಿಸಿವೆ. ಕೇರಳದಲ್ಲಿ ಮಹಿಳೆಯರ ಸಾಕ್ಷರತೆ ಶೇ ೮೬.೨ ಮತ್ತು ಪುರುಷರ ಸಾಕ್ಷರತೆ ಶೇ೯೩.೬. ಸ್ತ್ರೀ-ಪುರುಷರ ನಡುವಿನ ಸಾಕ್ಷರತಾ ಅಂತರ ಕೇವಲ ಶೇ. ೭.೪೦. ತಮಿಳುನಾಡಿನಲ್ಲಿ ಸ್ತ್ರೀಯರ ಸಾಕ್ಷರತೆಯು ಶೇ ೫೧.೩ ಮತ್ತು ಪುರುಷರ ಸಾಕ್ಷರತೆ ಶೇ ೭೩.೮. ಲಿಂಗವಾರು ಸಾಕ್ಷರತಾ ಅಂತರ ಶೇ. ೨೨.೫೦. ಸಾಕ್ಷರತೆಯಲ್ಲಿ ಕರ್ನಾಟಕದ ಸಿದ್ಧಿ-ಸಾಧನೆಗಳು ಕೇರಳ ಮತ್ತು ತಮಿಳುನಾಡುಗಳ ಸಿದ್ಧಿ-ಸಾಧನೆಗಳಿಗಿಂತ ಕೆಳಮಟ್ಟದಲ್ಲಿವೆ.

ಇದು ಇಡೀ ರಾಜ್ಯದ ಸಮಗ್ರ-ಏಕೀಕೃತ ಚಿತ್ರವಾಯಿತು. ಇಂತಹ ಸಮಗ್ರ ವಿವರಣೆಯು ರಾಜ್ಯದ ವಿವಿಧ ಪ್ರದೇಶಗಳು ಸಾಕ್ಷರತೆ ಕುರಿತಂತೆ ಸಾಧಿಸಿದ ಸಾಧನೆಗಳು ಹಾಗೂ ಅನುಭವಿಸಿದ ಸೋಲುಗಳ ಚಿತ್ರ ನೀಡುವುದಿಲ್ಲ. ಆದ್ದರಿಂದ ಕರ್ನಾಟಕವು ಸಾಕ್ಷರತೆಯಲ್ಲಿ ಸಾಧಿಸಿದ ಪ್ರಗತಿಯ ಪ್ರಾದೇಶಿಕ ಸ್ವರೂಪವನ್ನು ಪರಿಶೀಲಿಸುವುದು ಅವಶ್ಯಕ.

ಇತ್ತೀಚೆಗೆ ಕರ್ನಾಟಕದಲ್ಲಿ ಅಭಿವೃದ್ಧಿಗೆ ಸಂಬಂಧಿಸಿದ ಪ್ರಾದೇಶಿಕ ಅಂತರ ಮತ್ತು ಅಸಮಾನತೆಗಳು ತೀವ್ರ ವಾಗ್ವಾದಕ್ಕೆ ಒಳಗಾಗಿವೆ. ಉಗ್ರ ರೀತಿಯ ಪ್ರತಿಭಟನೆಗಳಿಗೂ ಕಾರಣವಾಗುತ್ತಿವೆ. ಆದರೆ ಈ ವಾಗ್ವಾದ-ಹೋರಾಟಗಳು ಅಭಿವೃದ್ಧಿಯ ಆರ್ಥಿಕ ಅಂಕಣಕ್ಕೆ ಮಾತ್ರ ಮೀಸಲಾಗಿಬಿಟ್ಟಿದೆ. ಅಭಿವೃದ್ಧಿಯಲ್ಲಿನ ಪ್ರಾದೇಶಿಕ ಅಸಮಾನತೆಯನ್ನು ಕೇವಲ ವರಮಾನ-ಉತ್ಪನ್ನಗಳ ವರ್ಧನೆಯ ನೆಲೆಯಲ್ಲಿ ಹಿಡಿದಿಡಲು ಪ್ರಯತ್ನ ನಡೆದಿದೆ. ಆದರೆ ಅಭಿವೃದ್ಧಿಯನ್ನು ಅಕ್ಷರ, ಆರೋಗ್ಯ, ಆಹಾರ, ಕುಡಿಯುವ ನೀರು, ಶಿಶುಗಳ ಮರಣ ಪ್ರಮಾಣ ಮುಂತಾದ ಮಾನವಮುಖಿ ಸೂಚ್ಯಂಕಗಳ ನೆಲೆಯಲ್ಲಿ ಹಿಡಿದಿಡುವ ಅವಶ್ಯಕತೆ ಇದೆ. ಏಕೆಂದರೆ ಅಭಿವೃದ್ಧಿಯನ್ನು ಕೇವಲ 'ವರಮಾನ-ಉತ್ಪನ್ನ'ಗಳ ನೆಲೆಯಲ್ಲಿ ಹಿಡಿದಿಟ್ಟುಬಿಟ್ಟರೆ ಅದು ಕೇವಲ 'ಇರುವುದರ' ಚಿತ್ರವನ್ನು ಮಾತ್ರ ನೀಡುತ್ತದೆ. ಅದು 'ದೊರೆಯುವುದರ' ಬಗ್ಗೆ ಏನನ್ನು ಹೇಳುವುದಿಲ್ಲ. ಅಭಿವೃದ್ಧಿಯನ್ನು, ಅಭಿವೃದ್ಧಿಯಲ್ಲಿನ ಪ್ರಾದೇಶಿಕ ಅಂತರ-ಅಸಮಾನತೆಗಳನ್ನು ಅಕ್ಷರ, ಆರೋಗ್ಯ, ಆಹಾರಗಳ ನೆಲೆಗೆ ಎಳೆದು ತಂದುಬಿಟ್ಟರೆ, ಆಗ ಅದು ಮಾನವಮುಖಿ ಸ್ವರೂಪ ಪಡೆದುಕೊಳ್ಳುತ್ತದೆ ಮತ್ತು ಸಮಾಜದ ವಂಚಿತ ವರ್ಗ ಹಾಗೂ ನಿಕೃಷ್ಟೀಕರಣಕ್ಕೆ ಒಳಗಾದ ಜನತೆಯನ್ನು ಒಳಗೊಳ್ಳುತ್ತದೆ.

ಕರ್ನಾಟಕದ ನಾಲ್ಕು ವಿಭಾಗಗಳು ಕಳೆದ ೪೦ ವರ್ಷಗಳಲ್ಲಿ ಸಾಕ್ಷರತೆ ಕುರಿತಂತೆ ಸಾಧಿಸಿದ ಪ್ರಗತಿಯ ಚಿತ್ರವನ್ನು ಕೋಷ್ಟಕ-೧ರಲ್ಲಿ ತೋರಿಸಿದೆ.

ಕೋಷ್ಟಕ -೨

## ಕರ್ನಾಟಕದಲ್ಲಿ ಸ್ತ್ರೀ-ಪುರುಷರ ನಡುವೆ ಸಾಕ್ಷರತಾ ಅಂತರ

| ಕ್ರ.ಸಂ. | ವಿಭಾಗಗಳ ಹೆಸರು | ೧೯೬೧ | ೧೯೭೧ | ೧೯೮೧ | ೧೯೯೧ |
|---|---|---|---|---|---|
| ೧ | ಬೆಂಗಳೂರು | ೨೨.೦೧ | ೧೯.೯೧ | ೨೦.೫೮ | ೨೧.೭೨ |
| ೨ | ಮೈಸೂರು | ೧೮.೭೪ | ೧೪.೨೮ | ೧೭.೯೩ | ೧೭.೪೩ |
| ೩ | ಬೆಳಗಾಂ | ೨೫.೩೧ | ೨೩.೪೪ | ೨೩.೫೪ | ೨೪.೨೫ |
| ೪ | ಗುಲಬರ್ಗಾ (ಹೈ.ಕ) | ೨೦.೫೨ | ೨೧.೧೭ | ೨೨.೯೬ | ೨೭.೫೪ |
| ೫ | ಕರ್ನಾಟಕ ರಾಜ್ಯ | ೨೧.೨೬ | ೨೦.೬೫ | ೨೧.೧೦ | ೨೩.೪೨ |

ಕರ್ನಾಟಕದ ಎಲ್ಲಾ ವಿಭಾಗಗಳಲ್ಲೂ ಸಾಕ್ಷರತೆ ಪ್ರಮಾಣವು ೧೯೬೧ ರಿಂದ ೧೯೯೧ರ ಕಾಲಾವಧಿಯಲ್ಲಿ ಏರಿಕೆಯಾಗಿದೆ. ಆದರೆ ರಾಜ್ಯದ ಬೆಂಗಳೂರು, ಮೈಸೂರು ಮತ್ತು ಬೆಳಗಾಂ ವಿಭಾಗಗಳಲ್ಲಿ ೧೯೬೧ ರಿಂದ ೧೯೯೧ರ ಕಾಲಾವಧಿಯಲ್ಲಿ ಸಾಕ್ಷರತೆ ಪ್ರಮಾಣವು ರಾಜ್ಯ ಸರಾಸರಿ ಸಾಕ್ಷರತೆ ಪ್ರಮಾಣಕ್ಕಿಂತ ಅಧಿಕವಿದೆ (ಇದನ್ನು ಕೋಷ್ಟಕ-೧ರಲ್ಲಿ ಆವರಣದಲ್ಲಿ ನೀಡಿದೆ). ಆದರೆ ಆತಂಕಕಾರಿ ಸಂಗತಿಯೆಂದರೆ ಹೈದರಾಬಾದ್ ಕರ್ನಾಟಕ ಪ್ರದೇಶವೆಂದು ಅಭಿದಾನ ಪಡೆದ ಗುಲಬರ್ಗಾ ವಿಭಾಗದಲ್ಲಿ ಮಾತ್ರ ಸಾಕ್ಷರತೆ ಪ್ರಮಾಣವು ರಾಜ್ಯ ಸರಾಸರಿಗಿಂತ ಕೆಳಮಟ್ಟದಲ್ಲಿದೆ. ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಸಾಕ್ಷರತೆ ಪ್ರಮಾಣವು ರಾಜ್ಯ ಸರಾಸರಿ ಸಾಕ್ಷರತೆ ಪ್ರಮಾಣಕ್ಕಿಂತ ೧೯೬೧ರಲ್ಲಿ ಶೇ.೮.೯೬ರಷ್ಟು ಕಡಿಮೆ ಇದ್ದುದು ೧೯೯೧ರಲ್ಲಿ ಅದು ಶೇ. ೧೪.೭೫ಕ್ಕೆ ಏರಿದೆ.

### ಲಿಂಗ ಸಂಬಂಧಿ ಸಾಕ್ಷರತಾ ಅಂತರ

ಅಮರ್ತ್ಯ ಸೆನ್, ಜೀನ್‌ಡ್ರೀಜೆ ಮುಂತಾದವರ ಅಧ್ಯಯನಗಳು ದೃಢಪಡಿಸಿರುವಂತೆ ಒಂದು ಸಮಾಜದ ಜನನ ಪ್ರಮಾಣ ಹಾಗೂ ಶಿಶುಗಳ ಮರಣ ಪ್ರಮಾಣಗಳನ್ನು ನಿಯಂತ್ರಿಸುವ ದೃಷ್ಟಿಯಿಂದ ಹಾಗೂ ರಾಜಕೀಯ ಸಹಭಾಗಿತ್ವದ ದೃಷ್ಟಿಯಿಂದ ಮಹಿಳೆಯರ ಸಾಕ್ಷರತೆಯು ಪುರುಷರ ಸಾಕ್ಷರತೆಗಿಂತ ಅಧಿಕ ಮಹತ್ವ ಪಡೆದಿದೆ. ಆದರೆ ಕರ್ನಾಟಕದಲ್ಲಿ ಸ್ತ್ರೀ ಮತ್ತು ಪುರುಷರ ನಡುವೆ ಸಾಕ್ಷರತಾ ಅಂತರವು ತೀವ್ರವಾಗಿದೆ. ಕೋಷ್ಟಕ-೨ರಲ್ಲಿ ಕರ್ನಾಟಕದ ವಿವಿಧ ಪ್ರದೇಶಗಳಲ್ಲಿರುವ ಸ್ತ್ರೀ ಮತ್ತು ಪುರುಷರ ನಡುವೆ ಇರುವ ಸಾಕ್ಷರತಾ ಅಂತರವನ್ನು ತೋರಿಸಿದೆ.

ಮೊದಲೆ ತಿಳಿಸಿದಂತೆ ಲಿಂಗವಾರು ಸಾಕ್ಷರತಾ ಅಂತರವು ಕರ್ನಾಟಕಕ್ಕೆ ಅಥವಾ ಕರ್ನಾಟಕದ ವಿವಿಧ ವಿಭಾಗಗಳಿಗೆ ಮಾತ್ರ ಮೀಸಲಾದ ಸಮಸ್ಯೆಯೇನಲ್ಲ. ಆದರೆ ಈ ಅಂತರದ ನಿವಾರಣೆಗೆ ಪ್ರಯತ್ನವು ನಡೆಯುತ್ತಿಲ್ಲ ಎಂಬುದೇ ದುರಂತ. ಕೋಷ್ಟಕ-೨ರಲ್ಲಿ ತೋರಿಸಿರುವಂತೆ ಲಿಂಗವಾರು ಸಾಕ್ಷರತಾ ಅಂತರ ಕರ್ನಾಟಕದ ಎಲ್ಲಾ ವಿಭಾಗಗಳಿಗೂ ಸಾಮಾನ್ಯವಾಗಿದೆ. ಆದರೆ ೧೯೬೧ ರಿಂದ ೧೯೯೧ರ ಕಾಲಾವಧಿಯಲ್ಲಿ ರಾಜ್ಯದ ಬೆಂಗಳೂರು, ಮೈಸೂರು ಹಾಗೂ ಬೆಳಗಾಂ ವಿಭಾಗಗಳಲ್ಲಿ ಲಿಂಗವಾರು ಸಾಕ್ಷರತಾ ಅಂತರವು ಕ್ರಮವಾಗಿ ಶೇ ೨೨.೦೧ ರಿಂದ ಶೇ ೨೧.೭೨ಕ್ಕೆ, ಶೇ. ೧೮.೭೪ ರಿಂದ ಶೇ ೧೭.೪೩ಕ್ಕೆ ಮತ್ತು ಶೇ ೨೫.೩೧ ರಿಂದ ಶೇ ೨೪.೨೫ಕ್ಕೆ ಇಳಿದಿದೆ. ಆದರೆ ಹೈದರಾಬಾದು ಕರ್ನಾಟಕ ಪ್ರದೇಶದಲ್ಲಿ ಅದು ಶೇ ೨೦.೫೨ ರಿಂದ ಶೇ. ೨೭.೫೪ಕ್ಕೆ ಏರಿಕೆಯಾಗಿದೆ. ಇದರಿಂದ ಸ್ಪಷ್ಟವಾಗುವ ಸಂಗತಿಯೇನೆಂದರೆ ಸಾಕ್ಷರತೆ ಬೆಳವಣಿಗೆ ಹಾಗೂ ಅದರಲ್ಲಿನ ಲಿಂಗವಾರು ತಾರತಮ್ಯಗಳಿಗೆ ಸಂಬಂಧಿಸಿದ ಸಮಸ್ಯೆಯು ಹೈದರಾಬಾದು ಕರ್ನಾಟಕ ಪ್ರದೇಶದಲ್ಲಿ ತೀವ್ರತರವಾಗಿ ಮಡುಗಟ್ಟಿಕೊಂಡುಬಿಟ್ಟಿದೆ.

೧. ಎಲ್ಲಾ ವಿಭಾಗಗಳಲ್ಲೂ ಸಾಕ್ಷರತಾ ಪ್ರಮಾಣವು ರಾಜ್ಯ ಸರಾಸರಿ ಸಾಕ್ಷರತಾ ಪ್ರಮಾಣಕ್ಕಿಂತ ಅಧಿಕವಿದ್ದರೆ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಮಾತ್ರ ಸಾಕ್ಷರತಾ ಪ್ರಮಾಣವು ರಾಜ್ಯ ಸರಾಸರಿಗಿಂತ ಕಡಿಮೆ ಇದೆ.

೨. ಎಲ್ಲಾ ವಿಭಾಗಗಳಲ್ಲೂ ಸಾಕ್ಷರತೆಗೆ ಸಂಬಂಧಿಸಿದ ಲಿಂಗವಾರು ಅಂತರ ಕಡಿಮೆಯಾಗುತ್ತಾ ನಡೆದಿದ್ದರೆ ಹೈದರಾಬಾದು ಕರ್ನಾಟಕ ಪ್ರದೇಶದಲ್ಲಿ ಲಿಂಗವಾರು ಸಾಕ್ಷರತಾ ಅಂತರವು ಅಧಿಕಗೊಳ್ಳುತ್ತಾ ನಡೆದಿದೆ.



ಅಧರ
ಮಾತಿನ
ತಾಳಕ್ಕೆ
ಬಡಿದಾಡುವ
ಸಂಗೀತದ
ಮೇಳಗಳು
- ಶರಣಸುತ

ಕೋಷ್ಟಕ-೩ರಲ್ಲಿ ಕರ್ನಾಟಕದ ನಾಲ್ಕು ವಿಭಾಗಗಳು ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಹಾಗೂ ರಾಜ್ಯದ ಒಟ್ಟು ಅಕ್ಷರಸ್ಥರ ಸಂಖ್ಯೆಯಲ್ಲಿ ಪಡೆದ ಪಾಲನ್ನು ತೋರಿಸಿದೆ. ಬೆಂಗಳೂರು ಮತ್ತು ಮೈಸೂರು ವಿಭಾಗಗಳು ಜನಸಂಖ್ಯೆಯಲ್ಲಿ ಕ್ರಮವಾಗಿ ಶೇ ೩೩.೬೨ ಹಾಗೂ ಶೇ ೨೩.೫೨ ಪಾಲು ಪಡೆದಿದ್ದರೆ ಒಟ್ಟು ಅಕ್ಷರಸ್ಥರ ಸಂಖ್ಯೆಯಲ್ಲಿ ಶೇ ೪೦.೫೦ ಮತ್ತು ಶೇ ೨೩.೮೯ರಷ್ಟು ಪಾಲು ಪಡೆದಿವೆ. ಅಂದರೆ ಇವೆರಡು ವಿಭಾಗಗಳು ತಾವು ಜನಸಂಖ್ಯೆಯಲ್ಲಿ ಪಡೆದ ಪಾಲಿಗಿಂತ ಅಧಿಕತಮ ಪಾಲನ್ನು ಅಕ್ಷರಸ್ಥರ ಸಂಖ್ಯೆಯಲ್ಲಿ ಪಡೆದಿವೆ.

ಬೆಳಗಾಂ ಮತ್ತು ಗುಲಬರ್ಗಾ ವಿಭಾಗಗಳು ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಕ್ರಮವಾಗಿ ಶೇ ೨೪.೯೮ ಮತ್ತು ೧೭.೮೮ ಪಾಲು ಪಡೆದಿದ್ದರೆ ಒಟ್ಟು ಅಕ್ಷರಸ್ಥರ ಸಂಖ್ಯೆಯಲ್ಲಿ ಶೇ ೨೩.೮೬ ಮತ್ತು ಶೇ ೧೧.೭೫ರಷ್ಟು ಪಡೆದಿವೆ.

ಇದೇ ಬಗೆಯ ಪ್ರಾದೇಶಿಕ ಅಸಮಾನತೆಯನ್ನು ರಾಜ್ಯದ ಒಟ್ಟು ಪ್ರಾಥಮಿಕ ಶಾಲೆಗಳ ವಿತರಣೆಯಲ್ಲೂ ಕಾಣಬಹುದಾಗಿದೆ. ರಾಜ್ಯದಲ್ಲಿ ೧೯೯೨-೯೩ರಲ್ಲಿ ಇದ್ದ ಒಟ್ಟು ಪ್ರಾಥಮಿಕ ಶಾಲೆಗಳ ಸಂಖ್ಯೆ ೪೧,೬೮೬. ಇವುಗಳಲ್ಲಿ ಬೆಂಗಳೂರು ಮತ್ತು ಮೈಸೂರು ವಿಭಾಗಗಳು ಕ್ರಮವಾಗಿ ಶೇ ೩೭ ಮತ್ತು ಶೇ ೨೫ರಷ್ಟು ಪಾಲು ಪಡೆದಿದ್ದರೆ ಬೆಳಗಾಂ ಮತ್ತು ಗುಲಬರ್ಗಾ ವಿಭಾಗಗಳ ಪಾಲು ಕ್ರಮವಾಗಿ ಶೇ ೨೧ ಮತ್ತು

ಕೋಷ್ಟಕ - ೩

**ಅಕ್ಷರಸ್ಥರ ಸಂಖ್ಯೆಯಲ್ಲಿ ವಿಭಾಗಗಳ ಪಾಲು**

| ಕ್ರಮ ಸಂಖ್ಯೆ | ವಿಭಾಗಗಳ ಹೆಸರು | ವಿಭಾಗಗಳ ಪಾಲು | |
|---|---|---|---|
| | | ಜನಸಂಖ್ಯೆ | ಅಕ್ಷರಸ್ಥರು |
| ೧ | ಬೆಂಗಳೂರು | ಶೇ ೩೩.೬೨ | ಶೇ ೪೦.೫೦ |
| ೨ | ಮೈಸೂರು | ಶೇ ೨೩.೫೨ | ಶೇ ೨೩.೮೯ |
| ೩ | ಬೆಳಗಾಂ | ಶೇ ೨೪.೯೮ | ಶೇ ೨೩.೮೬ |
| ೪ | ಗುಲಬರ್ಗಾ(ಹೈ.ಕ.) | ಶೇ ೧೭.೮೮ | ಶೇ ೧೧.೭೫ |

ಕೋಷ್ಟಕ - ೪

| ಕ್ರಮ ಸಂಖ್ಯೆ | ವಿಭಾಗಗಳ ಹೆಸರು | ಜನನ ಪ್ರಮಾಣ | | ಶೇಕಡ ವ್ಯತ್ಯಾಸ (-) |
|---|---|---|---|---|
| | | ೧೯೭೪-೮೦ | ೧೯೮೪-೯೦ | |
| ೧ | ಬೆಂಗಳೂರು | ೩೮.೫೦ | ೨೫.೯೬ | ಶೇ ೩೨.೫೭ |
| ೨ | ಮೈಸೂರು | ೨೯.೮೬ | ೨೪.೦೩ | ಶೇ ೧೯.೩೨ |
| ೩ | ಬೆಳಗಾಂ | ೩೨.೩೨ | ೨೮.೯೭ | ಶೇ ೧೦.೩೬ |
| ೪ | ಗುಲಬರ್ಗಾ | ೩೫.೦೫ | ೩೪.೯೦ | ಶೇ ೦.೪೨ |

ಶೇ ೧೭. ಇಲ್ಲೂ ಸಹ ಬೆಂಗಳೂರು ಮತ್ತು ಮೈಸೂರು ವಿಭಾಗಗಳು ತಾವು ಜನಸಂಖ್ಯೆಯಲ್ಲಿ ಪಡೆದ ಪಾಲಿಗಿಂತ ಅಧಿಕ ಪಾಲನ್ನು ಪ್ರಾಥಮಿಕ ಶಾಲೆಗಳಲ್ಲಿ ಪಡೆದಿವೆ. ಆದರೆ ಬೆಳಗಾಂ ಮತ್ತು ಗುಲಬರ್ಗಾ ವಿಭಾಗಗಳು ತಾವು ಜನಸಂಖ್ಯೆಯಲ್ಲಿ ಪಡೆದ ಪಾಲಿಗಿಂತ ಕಡಿಮೆ ಪಾಲನ್ನು ಪ್ರಾಥಮಿಕ ಶಾಲೆಗಳಲ್ಲಿ ಪಡೆದಿವೆ. ಬೆಂಗಳೂರು ಮತ್ತು ಮೈಸೂರು ವಿಭಾಗಗಳಲ್ಲಿ ಸರಾಸರಿ ೫೫ ವಿದ್ಯಾರ್ಥಿಗಳಿಗೆ ಒಬ್ಬ ಉಪಾಧ್ಯಾಯನಿದ್ದರೆ ಬೆಳಗಾಂ ಮತ್ತು ಗುಲಬರ್ಗಾ ವಿಭಾಗಗಳಲ್ಲಿ ಸರಾಸರಿ ೬೫ ವಿದ್ಯಾರ್ಥಿಗಳಿಗೆ ಒಬ್ಬ ಉಪಾಧ್ಯಾಯರಿದ್ದಾರೆ. ಒಟ್ಟಂದದಲ್ಲಿ ಸಾಕ್ಷರತೆ ದೃಷ್ಟಿಯಿಂದ, ಸಾಕ್ಷರತೆಯಲ್ಲಿ ಲಿಂಗವಾರು ತಾರತಮ್ಯದ ದೃಷ್ಟಿಯಿಂದ, ರಾಜ್ಯದ ಒಟ್ಟು ಅಕ್ಷರಸ್ಥರ ಹಾಗೂ ಪ್ರಾಥಮಿಕ ಶಾಲೆಗಳ ಪ್ರದೇಶವಾರು ಹಂಚಿಕೆ ದೃಷ್ಟಿಯಿಂದ ಹೈದರಾಬಾದು ಕರ್ನಾಟಕ ಪ್ರದೇಶವು ಅತ್ಯಂತ ನಿಕೃಷ್ಟ ಸ್ಥಿತಿಯಲ್ಲಿದೆ.

### ಸಾಕ್ಷರತೆ ಮತ್ತು ಜನಸಂಖ್ಯೆ ಗತಿಶೀಲತೆ

ಸಾಂಪ್ರದಾಯಿಕವಾಗಿ ಸಾಕ್ಷರತೆಯನ್ನು ಅಭಿವೃದ್ಧಿಯ ಸಾಧನವನ್ನಾಗಿ ಮಾತ್ರ ಪರಿಭಾವಿಸುತ್ತಾ ಬರಲಾಗಿದೆ. ಅಮರ್ತ್ಯಸೇನ್‌ರವರು ಮಾತ್ರ ಸಾಕ್ಷರತೆಯ ಮಹತ್ವವನ್ನು ಎರಡು ನೆಲೆಗಳಲ್ಲಿ ಗುರುತಿಸುತ್ತಾರೆ. ಮೊದಲನೆಯದಾಗಿ ಅದು ಅಭಿವೃದ್ಧಿಯ ಒಂದು ಸಾಧನ. ಸಾಕ್ಷರತೆಯ ಉಪಕರಣವಾದಿ ಮಹತ್ವವನ್ನು ಅವರು ಒಪ್ಪಿಕೊಳ್ಳುತ್ತಾರೆ. ಆದರೆ ಇದಕ್ಕಿಂತ ಮುಖ್ಯವಾಗಿ ಅವರು ಸಾಕ್ಷರತೆಯನ್ನು ಅಭಿವೃದ್ಧಿಯ ಅಂತಸ್ಥ ಗುಣವೆಂದು ನಿರ್ವಚಿಸುತ್ತಾರೆ. ಏಕೆಂದರೆ ಸಾಕ್ಷರತೆಯು 'ಇರುವುದು' ಜನರಿಗೆ ದೊರೆಯುವಂತೆ ಮಾಡುತ್ತದೆ. ಸಾಕ್ಷರತೆಯು ಒದಗಿಸುವ ಈ ಗುಣವನ್ನೇ ಅಮರ್ತ್ಯಸೇನ್ 'ಧಾರಣಶಕ್ತಿ' ಎಂದು ಕರೆದಿದ್ದಾರೆ. ಸಾಕ್ಷರತೆಯು ಜನರಲ್ಲಿ ಸ್ವಪ್ರಜ್ಞೆಯನ್ನು ಸ್ವಾಭಿಮಾನವನ್ನೂ ಮೂಡಿಸುತ್ತದೆ. ಜನಸಂಖ್ಯೆಯ ಬೆಳವಣಿಗೆಯ ಗತಿಶೀಲ ಪ್ರಕ್ರಿಯೆಯಲ್ಲಿ ಸಾಕ್ಷರತೆಯ ಉಪಕರಣವಾದಿ ಹಾಗೂ ಅಂತಸ್ಥವಾದಿ ಪಾತ್ರಗಳು ತುಂಬಾ ಮಹತ್ವವಾಗುತ್ತವೆ.

೧೯೮೧ ರಿಂದ ೧೯೯೧ರ ದಶಕದಲ್ಲಿ ಬೆಂಗಳೂರು, ಮೈಸೂರು ಹಾಗೂ ಬೆಳಗಾಂ ವಿಭಾಗಗಳಲ್ಲಿ ಜನಸಂಖ್ಯೆಯ ಬೆಳವಣಿಗೆಯ ಪ್ರಮಾಣ ಕ್ರಮವಾಗಿ ಶೇ ೨೩.೩೨, ಶೇ ೧೫.೯೨ ಮತ್ತು ಶೇ ೧೯.೫೨. ಆದರೆ ಗುಲಬರ್ಗಾ ವಿಭಾಗದಲ್ಲಿ ಜನಸಂಖ್ಯೆಯ ಬೆಳವಣಿಗೆಯ ಗತಿ ಅತ್ಯಧಿಕ ಶೇ ೨೬.೫೯ ಇದೆ.

ಜನಸಂಖ್ಯೆಯ ಗತಿಶೀಲತೆ ದೃಷ್ಟಿಯಿಂದ ಅದರ ಬೆಳವಣಿಗೆ ಗತಿಗಿಂತ ಜನನ ಪ್ರಮಾಣವು ಹೆಚ್ಚು ವಿಶ್ವಾಸಾರ್ಹ ಸೂಚ್ಯಂಕವಾಗಿದೆ. ಕೋಷ್ಟಕ-೪ರಲ್ಲಿ ಕರ್ನಾಟಕದ ವಿವಿಧ ವಿಭಾಗಗಳಲ್ಲಿನ ಜನನ ಪ್ರಮಾಣ ಹಾಗೂ ಅದರಲ್ಲಿನ ವ್ಯತ್ಯಾಸದ ವಿವರಗಳನ್ನು ನೀಡಿದೆ.

ರಾಜ್ಯದ ಬೆಂಗಳೂರು, ಮೈಸೂರು ಮತ್ತು ಬೆಳಗಾಂ ವಿಭಾಗಗಳಲ್ಲಿ ಜನನ ಪ್ರಮಾಣವು (ಪ್ರತಿ ಸಾವಿರ ಜನಿಸುವ ಮಕ್ಕಳ ವಾರ್ಷಿಕ ಪ್ರಮಾಣ) ೧೯೭೪-೮೦ ಮತ್ತು ೧೯೮೪-೯೦ರ ಅವಧಿಯಲ್ಲಿ ತೀವ್ರ ಗತಿಯಲ್ಲಿ ಇಳಿದಿದ್ದರೆ ಗುಲಬರ್ಗಾ ವಿಭಾಗದಲ್ಲಿ ಅದು ಅತ್ಯಂತ ಮಂದ ಗತಿಯಲ್ಲಿ ಇಳಿದಿದೆ. ಮೊದಲ ಮೂರು ವಿಭಾಗಗಳಲ್ಲಿ ಜನನ ಪ್ರಮಾಣವು ಕ್ರಮವಾಗಿ ಶೇ ೩೨.೫೭, ಶೇ ೧೯.೩೨ ಮತ್ತು ಶೇ ೧೦.೩೬ರಷ್ಟು ಇಳಿದಿದ್ದರೆ ಗುಲಬರ್ಗಾ ವಿಭಾಗದಲ್ಲಿ ಅದು ಕೇವಲ ಶೇ ೦.೪೨ರಷ್ಟು ಮಾತ್ರ ಇಳಿದಿದೆ. ಜನಸಂಖ್ಯೆಯ ಗತಿಶೀಲತೆಗೆ ಸಂಬಂಧಿಸಿದಂತೆ ಮೇಲಿನ ಮಾಹಿತಿಯಿಂದ ಎರಡು ಸಂಗತಿಗಳು ಸ್ಪಷ್ಟವಾಗುತ್ತವೆ.

೧. ರಾಜ್ಯದ ಉಳಿದೆಲ್ಲಾ ವಿಭಾಗಗಳಿಗಿಂತ ಗುಲಬರ್ಗಾ ವಿಭಾಗದಲ್ಲಿ ಜನಸಂಖ್ಯೆಯ ಬೆಳವಣಿಗೆ ಗತಿ ಅಧಿಕತಮವಾಗಿದೆ.

೨. ರಾಜ್ಯದ ಉಳಿದೆಲ್ಲಾ ವಿಭಾಗಗಳಿಗಿಂತ ಗುಲಬರ್ಗಾ ವಿಭಾಗದಲ್ಲಿ ಜನನ ಪ್ರಮಾಣದಲ್ಲಿನ ಇಳಿಮುಖ ಗತಿಯು ಕನಿಷ್ಟತಮವಾಗಿದೆ.

ಹೈದರಾಬಾದು-ಕರ್ನಾಟಕ ಪ್ರದೇಶದಲ್ಲಿ ಜನಸಂಖ್ಯೆಯ ಬೆಳವಣಿಗೆ ಗತಿ ಅಧಿಕತಮವಿರಲು ಹಾಗೂ ಜನನ ಪ್ರಮಾಣದಲ್ಲಿ ಇಳಿಮುಖ ಗತಿಯು ಕನಿಷ್ಟತಮವಾಗಿರಲು



ಮುಖ್ಯ ಕಾರಣ ಅತ್ಯಂತ ಕೆಳಮಟ್ಟದ ಸಾಕ್ಷರತೆ, ಅದರಲ್ಲೂ ಮುಖ್ಯವಾಗಿ ಕೆಳಮಟ್ಟದಲ್ಲಿರುವ ಮಹಿಳೆಯರ ಸಾಕ್ಷರತೆ. ತೀವ್ರತರವಾದ ನಿರಕ್ಷರತೆಯಿಂದಾಗಿ ಜನಸಂಖ್ಯೆಗೆ ಸಂಬಂಧಿಸಿದ ನೀತಿಗಳಲ್ಲಾಗಲಿ ಅಥವಾ ಕುಟುಂಬದಲ್ಲಿ ಪ್ರಜನೋತ್ಪತ್ತಿಗೆ ಸಂಬಂಧಿಸಿದ ತೀರ್ಮಾನಗಳಲ್ಲಾಗಲಿ ಜನರು, ಮುಖ್ಯವಾಗಿ ಮಹಿಳೆಯರು ಸಹಭಾಗಿಗಳಾಗಿ ಭಾಗವಹಿಸುತ್ತಿಲ್ಲ. ನಿರಕ್ಷರತೆಯು ವ್ಯಾಪಕವಾಗಿರುವುದರಿಂದ ಹೈದರಾಬಾದು-ಕರ್ನಾಟಕ ಪ್ರದೇಶದಲ್ಲಿ ಸ್ತ್ರೀಯರ ವಿವಾಹದ ಸರಾಸರಿ ವಯಸ್ಸು ಕೇವಲ ೧೭ ವರ್ಷ. ಜನಸಂಖ್ಯಾ ನಿಯಂತ್ರಣ ಕಾರ್ಯಕ್ರಮದಲ್ಲಿ ಸ್ತ್ರೀಯರು ಕೇವಲ ವಸ್ತುಗಳಾಗಿ - ಉಪಕರಣಗಳಾಗಿ ಬಳಕೆಯಾಗುತ್ತಿದ್ದಾರೆ. ಮಕ್ಕಳನ್ನು ಹೊತ್ತು, ಹೆತ್ತು, ಪಾಲಿಸುವ ಜವಾಬ್ದಾರಿಯಿರುವ ಮಹಿಳೆಯರಿಗೆ ಜನಸಂಖ್ಯಾ ನೀತಿಗೆ ಸಂಬಂಧಿಸಿದಂತೆ ಪಾತ್ರವೇ ಇಲ್ಲವಾಗಿದೆ.

ಹೀಗಾಗಿ ಕೆಳಮಟ್ಟದ ಸಾಕ್ಷರತೆ, ಲಿಂಗವಾರು ತಾರತಮ್ಯ, ಸಹಭಾಗಿತ್ವದ ಅಭಾವ ಮುಂತಾದವು ಹೈದರಾಬಾದು ಕರ್ನಾಟಕ ಪ್ರದೇಶದಲ್ಲಿ ಜನಸಂಖ್ಯೆಯ ತೀವ್ರ ಗತಿ ಬೆಳೆವಣಿಗೆಗೆ ಕಾರಣವಾಗಿದೆ. ಜನಸಂಖ್ಯೆಯ ಬೆಳೆವಣಿಗೆಯನ್ನು ನಿಯಂತ್ರಿಸುವ ದೃಷ್ಟಿಯಿಂದ ಮಹಿಳೆಯರ ಸಶಕ್ತೀಕರಣದ ಪಾತ್ರ ಮಹತ್ವವಾದುದು. ಸಾಕ್ಷರತೆಯಿಂದ ಮಾತ್ರ ಸಶಕ್ತೀಕರಣ ಸಾಧ್ಯ. ಸಾಕ್ಷರತೆಯು ಸಶಕ್ತೀಕರಣದ, ಸ್ವಾತಂತ್ರ್ಯದ ಸಂಕೇತ. ಸಾಕ್ಷರತೆಯ ಮೂಲಕ ಜನಸಂಖ್ಯೆಯ ಬೆಳೆವಣಿಗೆ ಗತಿಯನ್ನು ತೀವ್ರವಾಗಿ ನಿಯಂತ್ರಿಸಬಹುದಾಗಿದೆ.

**ನಾವು ಕಣ್ಣು ತೆರೆಯಬೇಕು!**

ಸ್ವಾತಂತ್ರ್ಯೋತ್ತರ ಅರ್ಧ ಶತಮಾನದ ಕಾಲಾವಧಿಯಲ್ಲಿ ಸಾಕ್ಷರತೆ ಕುರಿತಂತೆ ಕರ್ನಾಟಕ ರಾಜ್ಯದ ಸಿದ್ಧಿ-ಸಾಧನೆಗಳು ಅತ್ಯಂತ ಅತೃಪ್ತಿಕರವಾಗಿವೆ. ಕರ್ನಾಟಕದ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಎಷ್ಟು ಮಹತ್ವ ದೊರೆಯಬೇಕಾಗಿತ್ತೋ ಅಷ್ಟು ಮಹತ್ವ ದೊರೆತಿಲ್ಲ. ಸಾಕ್ಷರತೆಯಲ್ಲಿನ ಪ್ರಾದೇಶಿಕ ಅಂತರಗಳ ಬಗ್ಗೆ ಸರ್ಕಾರವು ಗಮನವನ್ನೇ ನೀಡದಿರುವುದು ಆಶ್ಚರ್ಯದ ಸಂಗತಿಯಾಗಿದೆ. ಸಾಕ್ಷರತೆಗೆ ಸಂಬಂಧಿಸಿದಂತೆ ಇಡೀ ರಾಜ್ಯದಲ್ಲಿ ಹೈದರಾಬಾದು ಕರ್ನಾಟಕ ಪ್ರದೇಶದ ನಿಕೃಷ್ಟ ಸ್ಥಿತಿಯು ೧೯೫೬ ರಿಂದಲೂ ಅವಿಚ್ಛಿನ್ನವಾಗಿ ಮುಂದುವರಿದಿದೆ. ಕರ್ನಾಟಕವು ಏಕೀಕರಣಗೊಂಡು ೪೦ ವರ್ಷಗಳು ಸಂದರೂ ಸಹ ಸರ್ಕಾರವು ಸಾಕ್ಷರತೆ ಕುರಿತಂತೆ, ಅದರ ಪ್ರಾದೇಶಿಕ ಅಂತರ ಕುರಿತಂತೆ ಸೂಕ್ತ ಕ್ರಮಗಳನ್ನು ಕೈಗೊಳ್ಳದಿರುವುದು ಅಕ್ಷಮ್ಯ. ಇದು ಸರ್ಕಾರದ ವೈಫಲ್ಯವನ್ನು ಸೂಚಿಸುವುದರ ಜೊತೆಗೆ ಸದರಿ ಸಮಸ್ಯೆ ಮಡುಗಟ್ಟಿಕೊಂಡಿರುವ ಪ್ರದೇಶದ ರಾಜಕೀಯ ನಾಯಕತ್ವದ ವೈಫಲ್ಯವನ್ನೂ ಸೂಚಿಸುತ್ತದೆ. ಈ ದಿಕ್ಕಿನಲ್ಲಿ ಸರ್ಕಾರವು ಕ್ರಮಕೈಗೊಳ್ಳದಿದ್ದರೆ ಅದನ್ನು ನಾವು ಅರ್ಥಮಾಡಿಕೊಳ್ಳಬಹುದು. ಆದರೆ ಹೈದರಾಬಾದು ಕರ್ನಾಟಕ ಪ್ರದೇಶದ ಜನತೆ ಹಾಗೂ ರಾಜಕೀಯ ನಾಯಕತ್ವವು ತಮ್ಮ ಪ್ರದೇಶದಲ್ಲಿನ ಸಾಕ್ಷರತೆ ಹಾಗೂ ಪ್ರಾಥಮಿಕ ಶಿಕ್ಷಣದ ಚಿಂತಾಜನಕ ಸ್ಥಿತಿಯ ಬಗ್ಗೆ ಚಕಾರವನ್ನೂ ಎತ್ತದಿರುವುದು ಆತಂಕಕಾರಿ ಸಂಗತಿಯಾಗಿದೆ.

ವೈದ್ಯಕೀಯ ಹಾಗೂ ತಾಂತ್ರಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಹೈದರಾಬಾದು ಕರ್ನಾಟಕ ಪ್ರದೇಶದ ವಿದ್ಯಾರ್ಥಿಗಳಿಗೆ ಮೀಸಲಾತಿ ಕೇಳುವ ನಾವು ಇಂದು ನಮ್ಮನ್ನೇ ಒಂದು ಪ್ರಶ್ನೆ ಕೇಳಿಕೊಳ್ಳಬೇಕಾಗಿದೆ. ಆತ್ಮ ನಿರೀಕ್ಷಣೆ ಮಾಡಿಕೊಳ್ಳಬೇಕಾಗಿದೆ. ಈ ವೈದ್ಯಕೀಯ ಹಾಗೂ ತಾಂತ್ರಿಕ ಶಿಕ್ಷಣದಲ್ಲಿ ಹೈದರಾಬಾದು ಕರ್ನಾಟಕ ಪ್ರದೇಶದ ವಿದ್ಯಾರ್ಥಿಗಳಿಗೆ ಮೀಸಲಾತಿ ದೊರೆತುಬಿಟ್ಟರೆ ಅದು ಸದರಿ ಪ್ರದೇಶದ ಯಾವ ವರ್ಗಗಳ ಹಿತಾಸಕ್ತಿಗಳನ್ನು ಪೋಷಿಸುತ್ತದೆ? ಸಂಬಂಧಿಸಿದ ಪ್ರದೇಶದಲ್ಲಿ ಸಾಕ್ಷರತೆ ಪ್ರಮಾಣವು ಕನಿಷ್ಠತಮವಾಗಿರುವುದರಿಂದ ಸದರಿ ಸೌಲಭ್ಯವು ಎಷ್ಟು ಜನರಿಗೆ ದೊರೆಯುತ್ತದೆ? ಇದಕ್ಕೆ ಪ್ರತಿಯಾಗಿ ಪ್ರಾಥಮಿಕ ಶಿಕ್ಷಣದ ಸೌಲಭ್ಯಗಳನ್ನು ಸಂವರ್ಧಿಸಿದರೆ, ಅದರ ಗುಣಮಟ್ಟವನ್ನು ಉತ್ತಮ ಪಡಿಸಿದರೆ, ಮಹಿಳಾ ಸಾಕ್ಷರತೆಯನ್ನು ಸುಧಾರಿಸಲು ವಿಶೇಷ ಗಮನ ನೀಡಿದರೆ, ಅವು ಸಮಾಜದ ಯಾವ ವರ್ಗ ಹಿತಾಸಕ್ತಿಗಳನ್ನು ಕಾಯುತ್ತವೆ? ಈ ಪ್ರಶ್ನೆಗಳು ಸರ್ಕಾರದ ಕಣ್ಣು ತೆರೆಸಬೇಕಾಗಿದೆ. ಅದಕ್ಕಿಂತ ಮೊದಲು ಮತ್ತು ಮಿಗಿಲೆಗಿ ಸಾಕ್ಷರತೆ ಮತ್ತು ಪ್ರಾಥಮಿಕ ಶಿಕ್ಷಣದ ಸ್ಥಿತಿಗತಿಗಳು ನಿಕೃಷ್ಟವಾಗಿರುವ ಪ್ರದೇಶದ ಜನತೆ ಹಾಗೂ ರಾಜಕೀಯ ನಾಯಕತ್ವವು ಕಣ್ಣು ತೆರೆಯಬೇಕಾಗಿದೆ. ●

# ನಮಗೊಬ್ಬಳೇ ಮಗಳು !

## ಹತ್ತು ಹೆರುವುದಕ್ಕಿಂತ ...



ತಂದೆ: ಹನುಮಪ್ಪ ಹೊರಕೇರಿ, ತಾಯಿ : ರೇಣುಕಾ ಮಗಳು : ಯಶೋದ

**ನಾ**ನು ಹನುಮಪ್ಪ ಭೀಮಪ್ಪ ಹೊರಕೇರಿ. ನೇತ್ರ ಪರೀಕ್ಷಕನೆಂದು ಸಮುದಾಯ ಆರೋಗ್ಯ ಕೇಂದ್ರದಲ್ಲಿ ಸೇವೆ ಸಲ್ಲಿಸುತ್ತಿದ್ದೇನೆ. ನಮ್ಮ ತಂದೆ, ತಾಯಿ, ಮಡದಿ, ಕುಟುಂಬದ ಸದಸ್ಯರು ಮುಕ್ತವಾಗಿ ಚರ್ಚಿಸಿ ನಮಗೊಬ್ಬಳೇ ಮಗಳು ಸಾಕೆಂದು ತೀರ್ಮಾನ ತೆಗೆದುಕೊಂಡಿದ್ದೇವೆ. ನೆರೆಹೊರೆಯವರ ಸಲಹೆ ಸೂಚನೆಗಳಿಗೆ ಅವಕಾಶ ನೀಡಿಲ್ಲ. ಹಲವು ಮಿತ್ರರೆಲ್ಲಾ ಚರ್ಚಿಸಿದರೆ ಹಲವಾರು ಸಲಹೆ ಸೂಚನೆಗಳನ್ನು ನೀಡುತ್ತಾರೆ. ದಂಪತಿಗಳ ಮುಕ್ತ ತೀರ್ಮಾನವೇ ಇದಕ್ಕೆ ಸೂಕ್ತ. ಆರೋಗ್ಯ ಇಲಾಖೆಯಲ್ಲೇ ಸೇವೆ ಸಲ್ಲಿಸುತ್ತಿರುವ ನಾನು ಕುಟುಂಬ ಕಲ್ಯಾಣ ಕಾರ್ಯಕ್ರಮದ ಅನುಕರಣೆ ಮಾಡದಿದ್ದರೆ ಉಪಯೋಗವಾಗಲಾರದು. ಒಬ್ಬಳೇ ಮಗಳಿಗೆ ಉತ್ತಮ ಶಿಕ್ಷಣ, ಆರೋಗ್ಯ, ಸಕಲ ಸೌಲಭ್ಯಗಳನ್ನು ನೀಡಿ ಉನ್ನತ ಹುದ್ದೆಯಲ್ಲಿ ಸೇರಿಸಬಹುದು. ಆಗ ತಂದೆ ತಾಯಿಗಳಿಗೂ ಗೌರವ. ಹತ್ತು ಹಡೆಯುವುದಕ್ಕಿಂತ ಮುತ್ತಿನಂಥ ಒಂದು ಸಾಕು.

**ಎಚ್.ಬಿ.ಹೊರಕೇರಿ**

ನೇತ್ರ ಪರೀಕ್ಷಕ ಸಮುದಾಯ ಕೇಂದ್ರ, ಬಾದಾಮಿ - ೫೮೭ ೨೦೧.

---

## ನೆರೆಹೊರೆಗೆ ಕಿವಿಗೊಡಲಿಲ್ಲ

**ಹೆ**ಣ್ಣಾದರೇನು, ಗಂಡಾದರೇನು, ಎಲ್ಲಾ ದೇವರ ಸೃಷ್ಟಿ ಮಗು ಜನಿಸುವಾಗ ಕುರುಡರಾಗಿ, ಕುಂಟರಾಗಿ, ಮೂಕರಾಗಿ ಹುಟ್ಟದೆ ಆರೋಗ್ಯವಂತರಾಗಿ ಹುಟ್ಟಿದರೆ ಅದಕ್ಕಿಂತ ಹೆಚ್ಚಿನ ಭಾಗ್ಯ ಇನ್ನೊಂದಿಲ್ಲ. ಮಕ್ಕಳು ದೇವರ ವರ ಪ್ರಸಾದ. ಆದ್ದರಿಂದ ಇದರಲ್ಲಿ ಹೆಣ್ಣು ಗಂಡು ಎನ್ನುವ ತಾರತಮ್ಯವಿಲ್ಲ.

ನಮ್ಮ ವಿವಾಹ ೧೯೮೯ ಮೇ ೨೨ರಂದು ಹಿರಿಯರ ಆಶೀರ್ವಾದದೊಂದಿಗೆ ಜರುಗಿತ್ತು. ೧೯೯೦ ಏಪ್ರಿಲ್ ೧೪ ರಂದು ಆರೋಗ್ಯವಂತ ಹೆಣ್ಣು ಮಗು ಜನಿಸಿತು. ನಾವು ಸಂತೋಷದಿಂದ ಹೆಣ್ಣು ಮಗುವನ್ನು ಹೊಂದಿ ತೃಪ್ತಿ ಪಡೆದಿದ್ದೇವೆ. ನಾವು ವರ್ಲ್ಡ್ ವಿಝನ್ ಆಫ್ ಇಂಡಿಯಾ ಎನ್ನುವ ಸಂಸ್ಥೆಯಲ್ಲಿ ಕ್ಷೇತ್ರಾಭಿವೃದ್ಧಿ ಕಾರ್ಯಕ್ರಮ ಹಮ್ಮಿಕೊಂಡು ಜನರಿಗೆ ಹೆಣ್ಣು ಮಗುವಿನ ಮಹತ್ವ ಮನಗಾಣಿಸಲು ಸ್ವತಃ ಮಾದರಿಯಾಗಿದ್ದೇವೆ.

ನಾವು ತೆಗೆದುಕೊಂಡ ಈ ನಿರ್ಧಾರದಲ್ಲಿ ಯಾವುದೇ ಗೊಂದಲವಿಲ್ಲದೆ ತೃಪ್ತರಾಗಿದ್ದೇವೆ.

ಹೆಣ್ಣು ಮಗುವನ್ನು ಹೆತ್ತ ನಾವು ಹೆಣ್ಣು ನಮ್ಮ ಪಾಲಿಗೆ ಅಮೃತ ಫಲ ಎಂದು



ತಂದೆ : ನಿತ್ಯಾನಂದ ತಾಯಿ : ಪ್ರೇಮಲೀಲಾ ಮಗಳು : ಲಿಡಿಯಾ (ಸ್ವೀಟ)

ಭಾವಿಸುತ್ತೇವೆ. ತಂದೆ-ತಾಯಿಗಳು ಕುಟುಂಬದವರು ಮತ್ತು ಸ್ನೇಹಿತರು ಹಾಗೂ ನೆರೆಹೊರೆಯುವರು ನಮಗೆ ಇನ್ನೊಂದು ಗಂಡು ಮಗು ಅವಶ್ಯ ಎಂದು ಒತ್ತಾಯಿಸಿದಾಗ, ನಾವಿಬ್ಬರೂ ಒಮ್ಮನಸ್ಸಿನಿಂದ ಗಂಡು ಆದರೆ ಏನು, ಹೆಣ್ಣು ಆದರೆ ಏನು ಎಲ್ಲಾ ದೇವರ ಸೃಷ್ಟಿ ಎಂದು ಉತ್ತರಿಸಿದ್ದೇವೆ. ಹೆಣ್ಣು ಮಗುವನ್ನು ಗಂಡು ಮಗುವಿನಂತೆಯೇ ಬೆಳೆಸಲು ನಿರ್ಧರಿಸಿದ್ದೇವೆ.

ಒಂದೇ ಹೆಣ್ಣು ಸಾಕು ಎಂಬ ನಿರ್ಧಾರವನ್ನು ನಾವಿಬ್ಬರೂ ಒಟ್ಟಾಗಿ ಯಾವ ಭಿನ್ನಾಭಿಪ್ರಾಯವಿಲ್ಲದೆ ಮುಕ್ತ ಮನಸ್ಸಿನಿಂದ ತೆಗೆದುಕೊಂಡೆವು. ನೀವೂ ಕೂಡ 'ಹೆಣ್ಣು ಒಂದು ಹೊನ್ನು' ಎಂದು ಭಾವಿಸಿ ನಮ್ಮ ಸಮಾಜದಲ್ಲಿ ಹೆಣ್ಣು ಮಕ್ಕಳ ಬಗೆಗಿರುವ ತಾರತಮ್ಯ ಹೋಗಲಾಡಿಸುವಿರಲ್ಲವೇ?

**ನಿತ್ಯಾನಂದ**
ವರ್ಲ್ಡ್ ವಿಝನ್ ಆಫ್ ಇಂಡಿಯಾ
ಗಾಡ್ ಗಿಫ್ಟ್ ಹೌಸ್, ತಾಳೂರು ರೋಡ್,
ಅಂಬಾ ಭವಾನಿ ಗುಡಿ ಹತ್ತಿರ,
ಬಳ್ಳಾರಿ-೫೮೩ ೧೦೩

# ಮೂಲ ವಿಚಾರದಲ್ಲಿ ಅಚಲರು



ತಂದೆ : ರಾಜಶೇಖರ ಪಿ.ಕಾಮೋಜಿ   ತಾಯಿ : ದಾಕ್ಷಾಯಣಿ   ಮಗಳು : ಅಶ್ವಿನಿ

**ಒಂ**ದೇ ಮಗುವಿನ ಪಾಲಕರ ಬಗ್ಗೆ ಫೋಟೋ ಸಹಿತ ಪ್ರಕಟಿಸುವ ಮುಖಾಂತರ ಜನಸಂಖ್ಯಾ ನಿಯಂತ್ರಣದೆಡೆಗೆ ನಿಮ್ಮ ಅಪ್ರತ್ಯಕ್ಷ ಹಾಗೂ ಪರಿಣಾಮಕಾರಿ ಪ್ರಯತ್ನ ನಿಜವಾಗಿಯೂ ಶ್ಲಾಘನೀಯವಾದುದು. ಪ್ರಕಟಣೆಯನ್ನು ನೋಡುತ್ತಲೇ ನನ್ನೊಬ್ಬ ಮಿತ್ರನ ನೆನಪಾಗಿ, ಅವನಿಗೆ ಈ ವಿಷಯ ತಿಳಿಸಿದಾಗ ಅವನು ಅಭಿಮಾನ ಪಟ್ಟ.

**ಆ ಗೆಳೆಯನ ಅಭಿಪ್ರಾಯ :**

◆ ದಾಂಪತ್ಯ ಜೀವನದಲ್ಲಿ ನೈಸರ್ಗಿಕ

# ಮುತ್ತಿನಂಥ ಮಗಳು



ತಂದೆ : ಸೀತಾರಾಮ ಹೊಳ್ಳ   ತಾಯಿ : ಯಶೋದಾ   ಮಗಳು : ಲಕ್ಷ್ಮೀ

ಹೆಣ್ಣಿರಲಿ ಗಂಡಿರಲಿ - ನಮಗೆ
ಮಗುವೊಂದು ಇರಲೇ ಬೇಕು
ಹತ್ತು ಹಡೆವ ಬದಲಿಗೊಂದು
ಮುತ್ತು ಹಡೆಯಬೇಕು !

ನಾವಿಬ್ಬರು ನಮಗೊಬ್ಬಳು
ಇವಳು ಮುತ್ತಿನಂಥ ಮಗಳು
ಬಿಸಿಲ ಬದುಕಿನಲ್ಲು ನಮಗೆ
ತೋರುವಳು ಬೆಳುದಿಂಗಳು !

ಬಹಳ ಚೆನ್ನಾಗಿ ಸಾಗುತಿದೆ
ನಮ್ಮ ಸಂಸಾರ ನೌಕೆ
ಇದಕ್ಕಾಗಿಯೇ ಅಂದುಕೊಂಡೆವು -
ನಮಗೆ ಗಂಡು ಮಗು ಯಾಕೆ ?

**- ಯಶೋದಾ, ಸೀತಾರಾಮ ಹೊಳ್ಳ,**
**ಬೆಂಗಳೂರು**

ನಿಯಮಾವಳಿಯಂತೆ ನಾವೂ ಮಗುವನ್ನು ಪಡೆಯಲಿಚ್ಛಿಸಿದ್ದೇವೇ ವಿನಾ ಅದು ಗಂಡೇ ಆಗಬೇಕೆಂಬ ತವಕವನ್ನು ನಾವೆಂದೂ ಇಟ್ಟುಕೊಂಡಿರಲಿಲ್ಲ.

- ಮೂಲ ವಿಚಾರದಲ್ಲಿ ಅಚಲರಾದ ನಾವು ಆ ದೆಶೆಯಲ್ಲಿ ಅನ್ಯಥಾ ಭಾವಿಸುವ ಪ್ರಶ್ನೆಯೇ ಇಲ್ಲ.
- ಈ ಬಗ್ಗೆ ನಿಶ್ಚಿತವಾಗಿಯೂ ಅಭಿಮಾನ ಪಡುತ್ತೇವಷ್ಟೇ ಅಲ್ಲ, ನಮ್ಮ ಸಂತೋಷ ಮಯ ಬಾಳ್ವೆ ಭಾವೀ ಪೀಳಿಗೆಗೆ ಆದರ್ಶ ಉದಾಹರಣೆಯಾಗಲೆಂದು ಆಶಿಸುತ್ತೇವೆ.
- "ವಿವಿಧ ಜನ-ವಿವಿಧಾಭಿಪ್ರಾಯ" ಎನ್ನುವಂತೆ ಈ ದೆಶೆಯಲ್ಲಿ ನಾವು ಮಿಶ್ರ ಪ್ರತಿಕ್ರಿಯೆಗಳನ್ನು ಪಡೆದಿದ್ದೇವೆ. ನಮ್ಮಿಬ್ಬರ ಮನೆ ಹಿರಿಯರು ಹೆಣ್ಣು ಮಗುವನ್ನು ಹೆಚ್ಚಿಗೆ ಇಷ್ಟ ಪಡುತ್ತಾರೆಂದು ಹೇಳಲು ಅತೀ ಅಭಿಮಾನ ಪಡುತ್ತೇವೆ.
- ನನ್ನ ಪತ್ನಿಗೆ ಒತ್ತಾಯ ಪಡಿಸಲು ಅಥವಾ ಮೋಸಗೊಳಿಸಲು ಅವಳೇನು ಅನಕ್ಷರಿ ಯಲ್ಲ. ಅವಳೂ ಪದವೀಧರೆಯಲ್ಲದೇ, ಸರಕಾರಿ ನೌಕರಳು. ಬೇಕೆಂದರೆ ಅವಳನ್ನು ನೀವು ಪ್ರಶ್ನಿಸಬಹುದು.

ಈ ಆದರ್ಶ ದಂಪತಿ ಜತೆಗೆ ಚರ್ಚಿಸಿ ಮುಗಿಸಿದಾಗ, ಎರಡು ಹೆಣ್ಣು ಮಕ್ಕಳನ್ನು ಪಡೆದ ನಾನು ಮತ್ತು ನನ್ನ ಹೆಂಡತಿ ಅತೀ ಸಂತೋಷದಿಂದ ಹೊರಬಂದೆವು.

ವಿಜ್ಞಾನ ಪದವೀಧರರಾಗಿ ಹಿಂದುಸ್ತಾನ ಟ್ರ್ಯಾಕ್ಟರ್ ಮಾರಾಟಗಾರರಾಗಿರುವ ರೊ. ರಾಜಶೇಖರ ಪಿ. ಕಾಮೋಜಿಯವರು ಹಾಗೂ ಕಲಾವಿಭಾಗದಲ್ಲಿ ಪದವಿ ಹೊಂದಿ ಜಮಖಂಡಿಯ ಬಿ.ಡಿ.ಓ ಕಚೇರಿಯಲ್ಲಿ ಬೆರಳಚ್ಚುಗಾರ್ತಿಯಾಗಿ ಕಳೆದ ೧೨ ವರ್ಷ ಗಳಿಂದ ಸೇವೆ ಸಲ್ಲಿಸುತ್ತಿರುವ ದಾಕ್ಷಾಯಣಿ ಆರ್. ಕಾಮೋಜಿಯವರು ಸ್ಥಳೀಯ ಸರಕಾರಿ ಹೆಣ್ಣು ಮಕ್ಕಳ ಪದವಿಪೂರ್ವ ಮಹಾ ವಿದ್ಯಾಲಯದಲ್ಲಿ ೮ನೇ ವರ್ಗದಲ್ಲಿ ಓದುತ್ತಿರುವ ತಮ್ಮ ಏಕೈಕ ಪುತ್ರಿ ಅಶ್ವಿನಿಯ ಜತೆ ಸುಂದರ ದಾಂಪತ್ಯ ಜೀವನ ನಡೆಸುತ್ತಿದ್ದಾರೆ. ರಾಜಶೇಖರರು ಸ್ಥಳೀಯ ರೋಟರಿ ಸಂಸ್ಥೆಯ ಸಕ್ರಿಯ ಸದಸ್ಯರಾಗಿದ್ದಾರೆ. ಅವರ ಮಡದಿ ಸ್ಥಳೀಯ ಇನರ್-ವ್ಹೀಲ್ ಸಂಸ್ಥೆಯ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ.

**- ಪಿ.ಬಿ. ಪಾಟೀಲ**

ಜಮಖಂಡಿ

# ನಮ್ಮ ಮಗಳು ಶೈಲಾ

**ಈ**ಗ್ಗೆ ಇಪ್ಪತ್ತು ವರ್ಷಗಳ ಹಿಂದೆ ನಮಗೆ ಹೆಣ್ಣು ಮಗುವಾಯಿತು ಎಂದು ತಿಳಿದಾಗ ಸಹಜವಾಗಿ ಸಂತಸಪಟ್ಟೆವು. ಮಗುವಾಯಿ ತೆಂಬ ಕಾರಣಕ್ಕಾಗಿ. ಮಗಳು 'ಶೈಲಾ' ತನ್ನ ಅಜ್ಜಿಯ (ನನ್ನ ತಾಯಿಯ) ಲಾಲನೆ ಪಾಲನೆಯಲ್ಲಿ, ಜೋಗುಳ ಹಾಡಿಸಿಕೊಂಡು, ಕಥೆ ಹೇಳಿಸಿಕೊಂಡು ಬೆಳೆಯುವ ಸಂಭ್ರಮ ದಲ್ಲಿ ವರ್ಷಗಳು ಕ್ಷಣಗಳಂತೆ ಕಾಲ ಗರ್ಭ ಸೇರಿದವು. ಐದನೆ ತರಗತಿವರೆಗೆ ಮನೆಯಲ್ಲಿ ಪಾಠಗಳನ್ನು ಹೇಳಿಕೊಡುವುದರ ಮೂಲಕ ಆಕೆಯ ತಾಯಿಯೇ ಭದ್ರ ಬುನಾದಿ ಹಾಕಿದಳು. ಮನೆಯಲ್ಲಿನ ಸಾಹಿತ್ಯಕ, ಸಾಂಸ್ಕೃತಿಕ ಪರಿಸರ ನಮಗರಿ ವಿಲ್ಲದಂತೆಯೇ ಆಕೆಯ ಮೇಲೆ ಪ್ರಭಾವ ಬೀರಿದ್ದಿತು. ಆಕೆ ತೆಗೆಯುತ್ತಿದ್ದ ಅಂಕಗಳು, ಅಂಕದ ಮೇಲೆ ನರ್ತಿಸುತ್ತಾ ಹಾಡುತ್ತಿದ್ದ 'ಮುಂಜಾನೆದ್ದು ಕುಂಬಾ ರಣ್ಣಾ...' 'ಗಲ್‌ಗಲ್ಲೆನುತಾ...' ಮುಂತಾದ ಹಾಡುಗಳ ಜೊತೆಗೆ ನಮ್ಮ 'ಸಸ್ಯ ಬಳಗ'ದಲ್ಲಿ ಸಕ್ರಿಯವಾಗಿ ಪಾಲ್ಗೊಂಡಳು. ಹಗರಿಬೊಮ್ಮನ ಹಳ್ಳಿಯಲ್ಲಿದ್ದಾಗ ನಾವು ಗೆಳೆಯರೆಲ್ಲಾ ಸೇರಿ ರಸ್ತೆ ಬದಿ ಸಾಲು ಗಿಡಗಳನ್ನು ನೆಟ್ಟು, ಒಂದು ವರ್ಷವಿಡೀ ಪ್ರತಿದಿನವೂ ಬೆಳಗಿನ ಜಾವ ನೂರಾರು ಕೊಡ ನೀರು ಹೊತ್ತು ಹಾಕುವಾಗ, ಹತ್ತು ವರ್ಷದ ನಮ್ಮ ಮಗಳು ತನ್ನ ಪುಟ್ಟ ಕೈಗಳಿಂದ ಹತ್ತಾರು ಕೊಡ ನೀರನ್ನು ತನ್ನ ತಾಯಿಯೊಂದಿಗೆ ಹಾಕಿದ್ದು ಇನ್ನೂ ಕಣ್ಣಿಗೆ ಕಟ್ಟಿದಂತಿದೆ. ಈಗ ಮಗಳ ಜೊತೆಗೆ ಆ ನೂರಾರು ಗಿಡಗಳು ಮರಗಳಾಗಿ ಬೆಳೆದು ನಳನಳಿಸುತ್ತಿರುವುದನ್ನು ನೋಡಿದಾಗ ಆಗುವ ಆನಂದ ಅಸದೃಶವಾದದ್ದು.



ಐದನೇ ತರಗತಿ ಅಭ್ಯಾಸ ಮಾಡುವಾಗ 'ಜವಾಹರ ನವೋದಯ ಶಾಲೆಗೆ' ಆಯ್ಕೆ ಆದಳು. ಒಬ್ಬಳೇ ಮಗಳು, ಕಳಿಸುವದೋ ಬೇಡವೋ ಎನ್ನುವ ಸಂದಿಗ್ಧತೆಯುಲ್ಲಿದ್ದಾಗ, ಗ್ರಾಮಾಂತರ ಪ್ರತಿಭೆಗಳಿಗೆ ಸಹಾಯವಾಗ ಲೆಂದೇ ಸುಸಜ್ಜಿತ ವಸತಿ ಶಾಲೆಗಳನ್ನು ಸರ್ಕಾರ ಪ್ರಾರಂಭಿಸಿರುವಾಗ, ಅಲ್ಲದೇ ಎಂಟನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ಓದುವ ಅವಕಾಶವಿರುವಾಗ ಕಳಿಸುವುದೇ ಸರಿ ಎಂದು ತೀರ್ಮಾನಿಸಿ, ಚಿಕ್ಕಜೋಗಿಹಳ್ಳಿಯ ನವೋದಯ ಶಾಲೆಗೆ ಸೇರಿಸಿದೆವು. ಅಲ್ಲಿಯ ಏಳು ವರ್ಷಗಳ ಅಭ್ಯಾಸದಲ್ಲಿ ಪಾಠಗಳ ಜೊತೆಗೆ ಸ್ವಾವಲಂಬನೆ, ಪ್ರಬಂಧ, ಚರ್ಚೆ, ಭಾಷಣ ಸ್ಪರ್ಧೆ ಹಾಗೂ ಆಟಗಳಲ್ಲಿ ಮುಂಚೂಣಿಯಲ್ಲಿದ್ದು ಪ್ರತಿವರ್ಷವೂ ಶೇ ೯೦ಕ್ಕಿಂತ ಹೆಚ್ಚಿನ ಅಂಕಗಳನ್ನು ಗಳಿಸಿದಳು. ವಾಲಿಬಾಲ್ ಪಂದ್ಯಾಟಗಳಲ್ಲಿ ದಕ್ಷಿಣ ವಲಯಕ್ಕೆ ಪ್ರಥಮವಾಗಿ ಪ್ರಶಸ್ತಿಯನ್ನು ಪಡೆದಳು.

ಇವೆಲ್ಲವುಗಳ ಜೊತೆಗೆ ವಿನಯ, ಸೌಜನ್ಯ, ಮುಖ್ಯವಾಗಿ ಸರಳತೆ ಯನ್ನು ರೂಢಿಸಿಕೊಂಡಿರು ವುದರಿಂದ, ಮೊದಲೇ ಲಿಂಗ ಭೇದದಲ್ಲಿ ನಂಬಿಕೆ ಇಲ್ಲದ ನಮಗೆ ಮಗನಿಲ್ಲವೆಂಬ ಕೊರಗು ಯಾವತ್ತೂ ಕಾಡಿದ್ದಿಲ್ಲ. ಕುಟುಂಬ ವರ್ಗದವರು ನೆರೆ ಹೊರೆಯವರು, ಸ್ನೇಹಿತರು, ಬಂಧು-ಬಾಂಧವರು ನಮ್ಮ ನ್ನೆಂದೂ ಅನುಕಂಪದಿಂದ ನೋಡಿದ್ದಿಲ್ಲ. ಈ ಬಗ್ಗೆ ನಮಗಂತೂ ಒಂದು ಕ್ಷಣವೂ ಪಶ್ಚಾತ್ತಾಪ ವೆನಿಸಿಲ್ಲ, ಮೇಲಾಗಿ ಅಭಿಮಾನವೆನಿಸಿದೆ. 'ಪಾಪ ಇವ್ರಿಗೆ ಗಂಡು ಮಕ್ಕಳಿಲ್ಲ' ಎಂದು ಸಂಕುಚಿತ ಮನದ ಕೆಲವರು ಮಾತ್ರ ಹಿಂದೆ ಮುಂದೆ ಆಡಿದ್ದಿದೆ.

ಸಮಾಜದ, ಈ ನೆಲದ ಋಣ ತೀರಿಸಲು ವಿಪುಲ ಅವಕಾಶವಿರುವ ವೈದ್ಯೆ ಅಥವಾ ಶಿಕ್ಷಕಿಯಾಗಲಿ ಎಂಬುದು ನಮ್ಮ ಆಸೆಯಾಗಿತ್ತು. ಮಿಡಿಯುವ, ತುಡಿಯುವ, ಪ್ರೀತಿ ವಿಶ್ವಾಸ ತೋರುವ, ಕಾರ್ಯ ತತ್ಪರತೆ, ಎಲ್ಲಕ್ಕಿಂತ ಮಿಗಿ ಲಾಗಿ ಸರಳತೆ ಮೈಗೂಡಿಸಿಕೊಂಡಿರುವ ನಮ್ಮ ಮಗಳೀಗ ಎಂ.ಬಿ.ಬಿ.ಎಸ್. ಎರಡನೇ ವರ್ಷ ದಲ್ಲಿ ಅಭ್ಯಾಸ ಮಾಡುತ್ತಿದ್ದಾಳೆ. ವೈದ್ಯೆಯಾಗುವು ದರತ್ತ ಸಾಗಿರುವ ನಮ್ಮೊಬ್ಬಳೇ ಮಗಳು ಯಾವ ಪ್ರಲೋಭನೆಗಳಿಗೆ ಒಳಗಾಗದೇ ಇದೇ ಸರಳತೆ ಹಾಗೂ ತುಡಿತಗಳನ್ನು ಉಳಿಸಿಕೊಂಡು ಹೋಗಲಿ ಎಂಬುದೇ ನಮ್ಮ ಆಶಯ.

ಕಡಕೋಳ ಮಡಿವಾಳಪ್ಪನವರು ಹೇಳಿ ದಂತೆ, "ತನ್ನ ತಾ ಅರಿತ ಮೇಲೆ ಇನ್ನೇನಿನ್ನೇನು?" ಅಲ್ಲವೆ?

**- ಪಾರ್ವತಿ, ಚನ್ನಬಸವಣ್ಣ ಸಿ.**

ಬಳ್ಳಾರಿ

# ಹೆಣ್ಣು ಮಗಳನ್ನು ಬೆಳೆಸುವ ಬಗೆ

ನೀವು ಹೆಣ್ಣು ಮಗುವಿನ ತಾಯಿಯಾಗಿದ್ದೀರಾ? ಅಭಿನಂದನೆಗಳು. ಅವಳ ಸೌಂದರ್ಯವನ್ನು ಅವಳೊಡನೆಯೇ ಬೆಳೆಸುವ ಹೊಣೆಗಾರಿಕೆ ನಿಮ್ಮದು. ಮರೆಯದಿರಿ, ನಿಮ್ಮ ಮಗಳು ಭವಿಷ್ಯತ್ತಿನ ತ್ರಿಲೋಕ ಸುಂದರಿಯೋ, ಭಾರತದ ಸುಂದರಿಯೋ ಆಗಬಹುದಲ್ಲವೇ?

ನೀವು ಹೆಣ್ಣು ಮಗುವಿನ ತಾಯಿಯಾಗಿದ್ದೀರಾ? ಅಭಿನಂದನೆಗಳು. ಅವಳ ಸೌಂದರ್ಯವನ್ನು ಅವಳೊಡನೆಯೇ ಬೆಳೆಸುವ ಹೊಣೆಗಾರಿಕೆ ನಿಮ್ಮದು. ಮರೆಯದಿರಿ, ನಿಮ್ಮ ಮಗಳು ಭವಿಷ್ಯತ್ತಿನ ತ್ರಿಲೋಕ ಸುಂದರಿಯೋ, ಭಾರತದ ಸುಂದರಿಯೋ ಆಗಬಹುದಲ್ಲವೇ?

ಮೊದಲನೆಯದಾಗಿ ಹುಟ್ಟಿದ ಐದು ವರ್ಷದವರೆಗೂ ಮಗುವಿನ ಆಹಾರ ಸೇವನೆ ಬಹಳ ಮುಖ್ಯ. ಅವಳು ಎಲ್ಲರಂತೆ ಆಹಾರ ತೆಗೆದುಕೊಳ್ಳಲು ಪ್ರಾರಂಭಿಸಿದಾಗ ಆಹಾರದಲ್ಲಿ ಹೆಚ್ಚಾಗಿ ಹಾಲು, ತರಕಾರಿ, ಬೇಳೆಗಳು, ಹಣ್ಣುಗಳನ್ನು ನೀಡಿ. ನಿಮ್ಮ ಮಗಳು ಆರೋಗ್ಯವಂತಳಾಗಿ ಹತ್ತಾರು ಜನರ ಕಣ್ಣು ಸೆಳೆಯುವಂತೆ ಬೆಳೆಯಬೇಕಾದರೆ ಅವಳ ಆಹಾರದಲ್ಲಿ ಜಿಡ್ಡು, ಕೊಬ್ಬಿನಾಂಶವನ್ನು ಚಿಕ್ಕ ವಯಸ್ಸಿನಿಂದಲೇ ಕಡಿಮೆ ಮಾಡಿಬಿಡಿ. ದುಂಡಗಿರುವ ಮಕ್ಕಳು ನೋಡಲೇನೋ ಮುದ್ದಾಗೇ ಕಾಣುತ್ತಾರೆ ನಿಜ. ಆದರೆ ವಿಜ್ಞಾನ ಹೇಳುವಂತೆ ದುಂಡಗೆ, ದಪ್ಪಗಿರುವ ಮಕ್ಕಳು ಬೆಳೆಯುತ್ತಿರುವಂತೆ ಸ್ಥೂಲಕಾಯರಾಗುವ ಸಂಭವ ಬಹಳ! ಸ್ಥೂಲತೆ ಮುಂದೆ ಅವರ ಆರೋಗ್ಯಕ್ಕೆ ಹಾನಿಯುಂಟು ಮಾಡಬಹುದು.

ಹಾಗೆಂದ ಮಾತ್ರಕ್ಕೆ ಚಿಕ್ಕಮಕ್ಕಳನ್ನು ಉಪವಾಸವಿರಿಸಬೇಕೆಂಬ ಉದ್ದೇಶವಲ್ಲ. ಅವರ ಬಾಯಿಗೆ ರುಚಿಯಾಗುವ ಪದಾರ್ಥಗಳನ್ನೇ ಕೊಡಿ. ಅವರಿಗೆ ಸಿಹಿಯೆಂದರೆ ಪ್ರಿಯವಾದರೆ ಸಿಹಿ ತಿಂಡಿಗಳ ಬದಲು ಹಣ್ಣುಗಳನ್ನು ಹೆಚ್ಚು ಕೊಡಿ. ಜೇನುತುಪ್ಪದಿಂದ ತಯಾರಿಸಿದ ಸಿಹಿಯನ್ನು ಕೊಟ್ಟರೆ ಅದು ಸಕ್ಕರೆಯಷ್ಟು ಹಾನಿ ಮಾಡಲಾರದು. ಅಂಗಡಿಯಲ್ಲಿ ಮಾರಾಟವಾಗುವ ಪಾನೀಯಗಳನ್ನು ನೀಡದೇ ಮನೆಯಲ್ಲೇ ತಾಜಾ ಹಣ್ಣಿನರಸ ತಯಾರಿಸಿ ಕೊಡಿ. ಮಕ್ಕಳಿಗೆ ಹೆಚ್ಚಾಗಿ ಹೋಟೆಲಿನಲ್ಲಿ, ಗಾಡಿಗಳಲ್ಲಿ ತಿಂಡಿ ತಿನ್ನುವ ಅಭ್ಯಾಸ ಮಾಡಿಸಬೇಡಿ. ಅವರಿಗೆ ಏನು ಇಷ್ಟವೋ ಅದನ್ನೇ ಮನೆಯಲ್ಲಿ ಸ್ವಚ್ಛವಾಗಿ, ಸ್ವಾದಿಷ್ಟವಾಗಿ ಮಾಡಿಕೊಟ್ಟರೆ ನಿಮಗೂ ಹಣ ಉಳಿತಾಯ, ಮಕ್ಕಳ ಆರೋಗ್ಯಕ್ಕೂ ಒಳ್ಳೆಯದು.

ಮಕ್ಕಳಿಗೆ ಆಹಾರದಂತೆ ವ್ಯಾಯಮವೂ ಬಹಳ ಮುಖ್ಯ. ಮಕ್ಕಳಿಗೆ ಆಟವಾಡಲು ಪ್ರೋತ್ಸಾಹಿಸಿ. ಮಕ್ಕಳೊಡನೆ ಒಮ್ಮೊಮ್ಮೆ ನಾವು ಸೇರಿಕೊಂಡು ಆಡುವುದರಿಂದ ನಮಗೂ ಮನಸ್ಸಿಗೆ ಉಲ್ಲಾಸವಾಗುತ್ತದೆ. ನೃತ್ಯ, ಈಜು ಮುಂತಾದ ಅಭ್ಯಾಸ ಮಕ್ಕಳಿಗೆ ವ್ಯಾಯಾಮವಲ್ಲದೆ ಆತ್ಮವಿಶ್ವಾಸವುಂಟು ಮಾಡುತ್ತವೆ.

ಚಿಕ್ಕ ಮಕ್ಕಳಿಗೆ ಚರ್ಮದ ತೊಂದರೆಗಳುಂಟಾಗುತ್ತವೆ. ಅದಕ್ಕಾಗಿ ಮನೆಯಲ್ಲೇ ಸುಲಭವಾದ ಚಿಕಿತ್ಸೆ ಮಾಡಬಹುದು. ಮಗಳಿಗೆ ಮೊಡವೆ ಮೂಡಿದರೆ ಅದಕ್ಕೆ ಪುದೀನರಸವನ್ನು ಹಚ್ಚಿದರೆ ಮೊಡವೆಯ ಕಲೆಗಳು ಉಳಿಯುವುದಿಲ್ಲ. ಮೊಡವೆ ಬಹಳ ತೊಂದರೆ ಕೊಟ್ಟರೆ ಮಾತ್ರ ವೈದ್ಯರ ಸಲಹೆ ಪಡೆಯಲೇಬೇಕು.

ಕೆಲವು ಮಕ್ಕಳಿಗೆ ಮೈ ಮುಖದ ಮೇಲೆ ಕೂದಲು ಜಾಸ್ತಿಯಾಗಿರುತ್ತದೆ. ಇದಕ್ಕೆ ಸೂಕ್ತ ಪರಿಹಾರವನ್ನು ಮನೆಯಲ್ಲಿಯೇ ಕಂಡುಕೊಳ್ಳಬಹುದು. ಒಂದು ಬಟ್ಟಲು ಹಾಲಿನ ಕೆನೆಗೆ ನಾಲ್ಕು ಚಮಚ ಪನ್ನೀರನ್ನು ಬೆರೆಸಿ ಪ್ರತಿ ದಿನ ಮೈಯೆಲ್ಲಾ ಹಚ್ಚಿ ನಂತರ ಒಣಗಿದ ಮೇಲೆ ಸ್ನಾನ ಮಾಡಿಸಿ. ಹೀಗೆ ಮಾಡುವುದರಿಂದ ಅನಾವಶ್ಯಕ ರೋಮ ನಿವಾರಣೆಯಾಗುವುದಲ್ಲದೇ ಚರ್ಮವೂ ಕಾಂತಿಯುತವಾಗುತ್ತದೆ. ಮೈಗೆ ಸೋಪಿನ ಬದಲು ಕಡಲೇಹಿಟ್ಟಿಗೆ ತೊಟ್ಟು ನಿಂಬೆ ರಸ ಬೆರೆಸಿ ಹಚ್ಚುವುದರಿಂದ ಅನಾವಶ್ಯಕ ರೋಮ ನಾಶವಾಗುತ್ತದೆ.

ಚಿತ್ರ : ಎಂ. ವಿಶ್ವನಾಥ್



ಮಕ್ಕಳಿಗೆ ಬೆಳೆಯುವ ವಯಸ್ಸಿನಲ್ಲಿ ತಲೆಗೂದಲ ಸಮಸ್ಯೆಗಳು ಬಹಳ. ವಾರಕ್ಕೊಮ್ಮೆ ಅವರ ತಲೆ ತೊಳೆಯುವುದು ಅತ್ಯವಶ್ಯಕ. ಅದಕ್ಕೆ ಮುಂಚೆ ಒಂದಿಷ್ಟು ಬೆಚ್ಚಗೆ ಕಾಯಿಸಿದ ಕೊಬ್ಬರಿ ಎಣ್ಣೆಯನ್ನಾಗಲಿ ಹಿಪ್ಪೆಯೆಣ್ಣೆಯನ್ನಾಗಲಿ ತಲೆಬುರುಡೆಗೆ ಹಚ್ಚಿ ನಂತರ ಶ್ಯಾಂಪೂನಿಂದ ಅಥವಾ ಕಡಲೇ ಹಿಟ್ಟಿನಿಂದ ತೊಳೆಯುವುದರಿಂದ ಕೂದಲು ಸ್ವಚ್ಛವಾಗುತ್ತದೆ. ಕೆಲವು ಮಕ್ಕಳಿಗೆ ಹುಟ್ಟುವಾಗ ತಲೆಯಲ್ಲಿ ಹೆಚ್ಚು ಕೂದಲಿರುವುದಿಲ್ಲ. ಅದಕ್ಕಾಗಿ ಎಣ್ಣೆಯ ಜೊತೆ ಕಾಯಿಸಿದ ಹಸುವಿನ ಹಾಲನ್ನು ಬೆರೆಸಿ ಹಚ್ಚುವುದರಿಂದ ಕೂದಲು ಸೊಂಪಾಗಿ ಬೆಳೆಯುತ್ತದೆ. ಆದರೆ ತಲೆಗೆ ಸ್ನಾನ ಮಾಡಿದ ನಂತರ ಕೂದಲಿಗೆ ಎಣ್ಣೆ ಹಚ್ಚಬೇಡಿ. ಇದರಿಂದ ಕೂದಲು ದೂಳು, ಮಣ್ಣು ಮುಂತಾದ ಕಲ್ಮಶವನ್ನು ಆಕರ್ಷಿಸಿ ಕೂದಲ ಆರೋಗ್ಯ ಹಾಳಾಗುತ್ತದೆ. ಶಾಲೆಗೆ ಹೋಗುವ ಮಕ್ಕಳಿಗೆ ಹೊಟ್ಟು, ಹೇನುಗಳ ಹಾವಳಿ ಜಾಸ್ತಿ. ನಿಮ್ಮ ಮಗಳ ತಲೆಯಲ್ಲಿ ಹೇನು ತೊಂದರೆಯಿದ್ದರೆ ನಾಲ್ಕು ದೊಡ್ಡ ಚಮಚ ಕೊಬ್ಬರಿ ಎಣ್ಣೆಯಲ್ಲಿ ನಾಲ್ಕೈದು ಕರ್ಪೂರವನ್ನು ಬೆರೆಸಿ ಕುದಿಸಿಟ್ಟುಕೊಳ್ಳಿ. ಅದನ್ನು ತಲೆಬುರುಡೆಗೆ ಹಚ್ಚಿ ಇಡೀ ರಾತ್ರಿ ಹಾಗೇ ನೆನೆಯಲು ಬಿಡಿ. ಬೆಳಿಗ್ಗೆ ತಲೆ ತೊಳೆಯಿರಿ. ಇದನ್ನು ಪ್ರತಿ ತಿಂಗಳು ಅನುಸರಿಸಿದರೆ ಇತರ ಮಕ್ಕಳಿಂದ ಹೇನು ಹತ್ತುವುದಿಲ್ಲ. ತಲೆಯನ್ನು ಬಾಚಲು ಚೂಪಾದ ಸಿಕ್ಕಟ್ಟಿಗೆ ಉಪಯೋಗಿಸದೇ ದೂರ ದೂರ ಹಲ್ಲುಗಳಿರುವ ಬಾಚಣಿಗೆಯಲ್ಲೇ ತಲೆ ಬಾಚಿ.

ಮಗುವಿನ ಕೂದಲು ಉದ್ದವಾಗಿದ್ದರೆ ಬಿಗಿಯಾಗಿ ಪೋನಿಟೈಲ್ ಕಟ್ಟುವುದಾಗಲಿ, ಬಿಗಿಯಾಗಿ ಜಡೆಹೆಣೆಯುವುದಾಗಲಿ ಮಾಡಬೇಡಿ. ಇದರಿಂದ ಕೂದಲು ಅಲ್ಲಲ್ಲಿ ಕವಲೊಡೆಯುತ್ತದೆ.

ನಿಮ್ಮ ಮಗಳಿಗೆ ಚಿಕ್ಕವಯಸ್ಸಿನಿಂದಲೂ ಹಲ್ಲುಗಳನ್ನು ಸ್ವಚ್ಛವಾಗಿಡುವುದನ್ನು ಮರೆಯದೇ ಹೇಳಿಕೊಡಿ. ಹಲ್ಲುಗಳ ಅನಾರೋಗ್ಯದಿಂದ ದೇಹದ ಆರೋಗ್ಯಕ್ಕೂ ಹಾನಿಯಾಗುತ್ತದೆ. ಪ್ರತಿ ಸಲ ಊಟ, ತಿಂಡಿ ಆದಾಗಲೂ ಬಾಯನ್ನು ನೀರಿನಿಂದ ಮುಕ್ಕಳಿಸುವುದು ಒಳ್ಳೆಯ ಅಭ್ಯಾಸ. ಸಿಹಿ ಪದಾರ್ಥ ಸೇವಿಸಿದರೆ ಬ್ರಶ್‌ನಿಂದ ಹಲ್ಲು ಸ್ವಚ್ಛ ಮಾಡಿಕೊಳ್ಳುವುದು ಅಗತ್ಯ. ಮಗುವಿಗೆ ಹಲ್ಲು ಉಬ್ಬಾಗಿದ್ದರೆ ದಂತ ವೈದ್ಯರನ್ನು ಸಂಪರ್ಕಿಸಿ ಹಲ್ಲಿಗೆ ಸೂಕ್ತವಾದ ಚಿಕಿತ್ಸೆ ಕೊಡಿಸಿ.

# ಬೆಳೆದ ಮಗಳೇ ಕೇಳು...



'ಪ್ರಾಯದಲ್ಲಿ ಕತ್ತೆಯೂ ಚೆನ್ನಾಗಿರುತ್ತದೆ' ಎಂಬ ಗಾದೆ ಮಾತನ್ನು ನೀವು ಕೇಳಿರಬೇಕಲ್ಲವೇ? ಇದು ಕೇವಲ ವಿಡಂಬನೆಯ ನುಡಿ. ಸೌಂದರ್ಯ ಜ್ಞಾನವಿಲ್ಲದ ಯಾರೂ ಯಾವ ವಯಸ್ಸಿನಲ್ಲೂ ಸುಂದರವಾಗಿ ಕಾಣಲು ಖಂಡಿತ ಸಾಧ್ಯವಿಲ್ಲ.

ಹದಿಹರೆಯದ ವಯಸ್ಸಿನಲ್ಲಿ ಮೊಡವೆಗಳ ಸಮಸ್ಯೆಯೇ ಹೆಚ್ಚು. ಇದಕ್ಕಾಗಿ ನೀವು ಬೇಸರಗೊಂಡು ತಲೆಯ ಮೇಲೆ ಕೈ ಹೊತ್ತು ಕುಳಿತುಕೊಳ್ಳಬೇಡಿ! ಇವೆಲ್ಲ ಬೆಳವಣಿಗೆಯ ವಿವಿಧ ಹಂತಗಳಷ್ಟೆ. ಪ್ರತಿ ದಿನ ಕನಿಷ್ಟ ಎರಡು ಬಾರಿಯಾದರೂ ಸಾಬೂನಿನಿಂದ ಮುಖ ತೊಳೆದುಕೊಳ್ಳಲೇಬೇಕು. ಈ ವಯಸ್ಸಿನಲ್ಲಿ ಚರ್ಮದಲ್ಲಿ ಜಿಡ್ಡಿನಾಂಶ ಹೆಚ್ಚಾಗಿರುವುದರಿಂದ ಮಾರುಕಟ್ಟೆಯಲ್ಲಿ ದೊರೆಯುವ ವಿವಿಧ ಕ್ರೀಂ, ಲೋಶನ್‌ಗಳನ್ನು ಧಾರಾಳವಾಗಿ ಉಪಯೋಗಿಸಬೇಡಿ. ನಿಮ್ಮ ಶೃಂಗಾರ ಆದಷ್ಟು ಮಿತಿಯಾಗಿರಲಿ. ಈಗ ಸಹಜ ಲಾವಣ್ಯವೇ ನಿಮ್ಮ ಸೌಂದರ್ಯಕ್ಕೆ ಮೆರಗು!

ವಾರಕ್ಕೊಮ್ಮೆ ತಪ್ಪದೇ ಮುಖವನ್ನು ಹಬೆಗೊಡ್ಡಿ. ಇದರಿಂದ ಮುಚ್ಚಿಕೊಂಡಿರುವ ಚರ್ಮದ ರಂಧ್ರಗಳು ತೆರೆದುಕೊಂಡು ಮೊಡವೆ, ಕಪ್ಪು ಕಲೆಗಳನ್ನು ನಿವಾರಿಸುತ್ತವೆ. ಹಬೆಗೊಡ್ಡಿದ ನಂತರ ಮುಖಕ್ಕೆ ಎರಡು ಚಮಚ ಒಣಗಿಸಿದ ಕಿತ್ತಳೆ ಸಿಪ್ಪೆ ಪುಡಿಗೆ ನಾಲ್ಕು ತೊಟ್ಟು ಪನ್ನೀರು, ಹಾಲಿನಕೆನೆ ಬೆರೆಸಿ ಹಚ್ಚಿಕೊಳ್ಳಿ. ಇದರಿಂದ ಮುಖ ಮೃದುವಾಗಿ ಕಾಂತಿಯುಕ್ತವಾಗುತ್ತದೆ. ಕಿತ್ತಳೆ ಸಿಪ್ಪೆಯ ಪುಡಿ ರಂಧ್ರಗಳನ್ನು ಸ್ವಚ್ಛಗೊಳಿಸುತ್ತದೆ.

ನಿಮ್ಮ ತಲೆಗೂದಲು ಈ ವಯಸ್ಸಿನಲ್ಲಿ ಹೆಚ್ಚು ಉದುರುವುದಿಲ್ಲ ಅಂಥ ಸಮಸ್ಯೆ ಬಂದರೂ ಎದೆಗುಂದುವ ಕಾರಣವಿಲ್ಲ. ಇದೆಲ್ಲಾ ಹಾರ್ಮೋನುಗಳ ಏರು ಪೇರಿನಿಂದಾಗಿ ಉಂಟಾಗುವ ಸಮಸ್ಯೆಯಷ್ಟೆ. ತಲೆಗೂದಲಿಗೆ ವಾರಕ್ಕೊಮ್ಮೆ ಎಣ್ಣೆ ಹಚ್ಚಿಕೊಂಡು ತಲೆಗೆ ಹಬೆಯಾಡುವ ಟವಲ್ ಸುತ್ತಿಕೊಳ್ಳಿ. ಇದರಿಂದ ಎಣ್ಣೆಯಂಶ ತಲೆಗೂದಲಿಗೆ ಸಮಪ್ರಮಾಣದಲ್ಲಿ ಹರಡುತ್ತದೆ. ನಂತರ ಶ್ಯಾಂಪೂನಿಂದ ತೊಳೆಯಿರಿ. ಸ್ನಾನದ ನೀರಿನಲ್ಲಿ ನಾಲ್ಕು ತೊಟ್ಟು ನಿಂಬೆರಸ ಬೆರೆಸಿದರೆ ಚರ್ಮ ಕೋಮಲವಾಗುವುದಲ್ಲದೇ ತಲೆಗೆ ಹೊಟ್ಟು ಬರುವುದಿಲ್ಲ.

ಹರೆಯದ ಚೆಲುವಿನಿಂದ ಕಂಗೊಳಿಸುವ ನಿಮಗೆ ಹೆಚ್ಚು ಮೇಕಪ್ ಅವಶ್ಯಕತೆಯೇ ಇಲ್ಲ. ಮುಖಕ್ಕೆ ನವಿರಾಗಿ ಫೌಂಡೇಶನ್ ಕ್ರೀಂ ಹಚ್ಚಿ. ತುಟಿಗೆ ನಯವಾಗಿ ತಿಳಿಬಣ್ಣದ ರಂಗು ತೀಡಿ. ತುಟಿರಂಗಿನ ಬದಲು ತುಟಿಗೆ ವ್ಯಾಸಲಿನ್ ಕೂಡ ಬಳಸಬಹುದು. ವಿಶೇಷ ಸಮಾರಂಭಗಳಲ್ಲಿ ಕಣ್ಣಿಗೆ ಕಾಡಿಗೆ, ಕಣ್ಣಿನ ರೆಪ್ಪೆಗೆ 'ಮ್ಯಾಸ್ಕರಾ' ಹಚ್ಚಬಹುದು. ನವಿರಾದ ಕಂಪಿನ ಪರಫ್ಯೂಮ್ ಬಳಸಿ. ಕೈ ಉಗುರುಗಳನ್ನು ಉದ್ದವಾಗಿ ಬೆಳೆಸಬೇಡಿ. ಈ ವಯಸ್ಸಿನಲ್ಲಿ ನಿಮ್ಮ ಕೈಗಳಿಗೆ ತಿಳಿಯಾದ ಉಗುರಿನ ಬಣ್ಣ ಹೆಚ್ಚು ಶೋಭೆ ನೀಡುತ್ತದೆ. ಆದರೆ ನಿಮ್ಮ ತುಟಿರಂಗು, ಉಗುರಿನ ಬಣ್ಣ ಆದಷ್ಟು ಒಂದೇ ವರ್ಣದಲ್ಲಿ ಇರಲಿ ಎಂಬುದನ್ನು ಮಾತ್ರ ಮರೆಯದಿರಿ!

ಇಷ್ಟೆಲ್ಲಾ ನಿಯಮ ಪಾಲಿಸಿದರೆ ನಿಮ್ಮ ಮಗಳು ಬೆಳೆದ ನಂತರ ಹಲವರ ಮೆಚ್ಚುಗೆಗೆ ಪಾತ್ರಳಾಗುವುದರಲ್ಲಿ ಸಂದೇಹವೇ ಇಲ್ಲ. ಮಗಳು ವಯಸ್ಸಿಗೆ ಬಂದ ನಂತರ ಆಕೆ ತನ್ನ ಬಗ್ಗೆ ತಾನೇ ಕಾಳಜಿ ವಹಿಸಲು ಶಕ್ತಳಾಗುತ್ತಾಳೆ.

## ಮದುಮಗಳ ಸೌಂದರ್ಯ

ಹೆಣ್ಣಿಗೆ ವಿವಾಹ ಒಂದು ವಿಶೇಷ ಹಾಗೂ ಮುಖ್ಯ ಸಮಾರಂಭ. ಈ ಸಮಯದಲ್ಲಿ ಆಕೆ ತಾನು ತನ್ನ ಪತಿಯಾಗುವವನ ಕಣ್ಣಿಗೆ ಅತ್ಯಂತ ಚೆಲುವೆಯಾಗಿ ಕಾಣಬೇಕೆಂಬ ಅಪೇಕ್ಷೆ



**ಸೀರೆಯುಟ್ಟು, ಆಭರಣಗಳನ್ನು ಧರಿಸಿ. ತುಟಿಗಳ ಮೇಲೆ ಕಿರುನಗೆ ಧರಿಸುವುದನ್ನು ಮರೆಯಬೇಡಿ!**

ಹೊಂದಿರುವುದು ಸಹಜವೇ. ಮದುವೆಯಲ್ಲಿ ಮದುಮಗನಿಗಿಂತ ಮದುವಣಗಿತ್ತಿ ಹೆಚ್ಚು ಗಮನ ಸೆಳೆಯುವುದು ಸ್ವಾಭಾವಿಕ. ವಧುವಾಗುವವಳು ಅಂದು ಎಲ್ಲರ ಕೇಂದ್ರಬಿಂದು. ನಿಮ್ಮ ಬಾಳಿನ ಮುಖ್ಯ ತಿರುವಿನಂದು ನೀವು ಅತ್ಯಂತ ಸುಂದರವಾಗಿ ಕಾಣುವುದು ನಿಮ್ಮ ಕೈಯಲ್ಲಿದೆ.

ಮದುವೆಗೆ ವಾರವಿರುವಾಗಲೇ ನೀವು ನಿಮ್ಮ ಸೌಂದರ್ಯ ದ್ವಿಗುಣಗೊಳಿಸಲು ಸಿದ್ಧರಾಗಿ. ಮೊದಲನೆಯದಾಗಿ ಕೈ ಕಾಲುಗಳ ಮೇಲಿನ ಅನಾವಶ್ಯಕ ರೋಮಗಳನ್ನು ನಿವಾರಿಸಿಕೊಳ್ಳಿ. ಇದನ್ನು ಅನುಕೂಲವಿದ್ದರೆ ಮನೆಯಲ್ಲೇ ವ್ಯಾಕ್ಸಿಂಗ್‌ನಿಂದ ಮಾಡಿಕೊಳ್ಳಬಹುದು. ಇಲ್ಲವೇ ನಿಮ್ಮ ಪರಿಚಿತ ಸೌಂದರ್ಯಗಾರರ ಸಹಾಯ ಪಡೆಯಬಹುದು.

ಮದುವೆಯ ಹಿಂದಿನ ದಿನ ಕೈ ಕಾಲುಗಳನ್ನು ಅಂದಗೊಳಿಸಿ. ಇದಕ್ಕೆ 'ಮ್ಯಾನಿಕ್ಯೂರ್' ಹಾಗೂ 'ಪೆಡಿಕ್ಯೂರ್' ಎನ್ನುತ್ತಾರೆ. ಇದನ್ನು ಸಾಮಾನ್ಯವಾಗಿ ಬ್ಯೂಟಿಪಾರ್ಲರ್‌ಗಳಲ್ಲಿ ಮಾಡುತ್ತಾರೆ. ನಂತರ ನಿಮ್ಮ ಮುಖಕ್ಕೆ ಎರಡು ತೊಟ್ಟು ಅಮೋನಿಯಾ ಬೆರೆಸಿದ ಒಂದು ಚಮಚ ಹೈಡ್ರೋಜನ್ ಪೆರಾಕ್ಸೈಡ್ ಅನ್ನು ಹಚ್ಚಿ ಹದಿನೈದು ನಿಮಿಷ ಬಿಟ್ಟು ತೊಳೆಯಿರಿ. ಇದರಿಂದ ಮುಖ ಕಾಂತಿಯುತವಾಗುತ್ತದೆಯೇ ಹೊರತು ಚರ್ಮಕ್ಕೆ ಹಾನಿಯೇನಿಲ್ಲ.

ವಿವಾಹದ ದಿನ ತಪ್ಪದೇ ತಲೆ ಸ್ನಾನ ಮಾಡಲೇಬೇಕು. ನೀರಿಗೆ ನಿಮ್ಮ ಪ್ರಿಯವಾದ ಪರ್‌ಫ್ಯೂಮ್ ಅನ್ನು ನಾಲ್ಕು ತೊಟ್ಟು ಹಾಕಿಕೊಂಡರೆ ಹೆಚ್ಚು ಆಹ್ಲಾದಕರವಾಗಿರುತ್ತದೆ. ಅತಿಯಾಗಿ ಬಿಸಿ ನೀರು ಉಪಯೋಗಿಸದೇ ಕೊನೆಯಲ್ಲಿ ಮುಖಕ್ಕೆ ತಣ್ಣೀರು ಚಿಮುಕಿಸಿಕೊಳ್ಳಿ. ಇದರಿಂದ ಚರ್ಮದಲ್ಲಿನ ರಂಧ್ರಗಳು ಮುಚ್ಚಿಕೊಳ್ಳುತ್ತವೆ. ಆಗ ಮುಖ ಬೇಗ ಕಾಂತಿ ಹೀನವಾಗುವುದಿಲ್ಲ.

ಸ್ನಾನವಾದ ಮೇಲೆ ಮೈಗೆಲ್ಲಾ ಹದವಾಗಿ ಪೌಡರ್ ತೀಡಿ ಕೂಂಕುಳಿಗೆ, ಕುತ್ತಿಗೆಗೆ ಹಾಗೂ ಕಿವಿಗಳ ಹಿಂದೆ ಸುಗಂಧಿತ ಪರ್‌ಫ್ಯೂಮ್ ಲೇಪಿಸಿಕೊಳ್ಳಿ. ಈ ದಿನ ನೀವು ನಿಮ್ಮ ಪತಿಯ ಕಣ್ಣಿಗೆ ಸಹಜ ಸುಂದರಿಯಾಗಿ ಕಾಣಬೇಕೇ ವಿನಾ ಬಣ್ಣ ತೀಡಿದ ಗೊಂಬೆಯಂತಲ್ಲ. ಮುಖಕ್ಕೆ ನವಿರಾಗಿ ಮೇಕಪ್ ಬಳಸಿ. ತಪ್ಪದೇ ಕೆನ್ನೆಗಳಿಗೆ ರಂಗುಹಚ್ಚಿ. ಇದನ್ನು ಅನುಭವಸ್ಥರಿಂದ ಹಚ್ಚಿಸಿಕೊಳ್ಳುವುದು ಸೂಕ್ತ. ಕೆನ್ನೆಯ ರಂಗು ಸಹಜವಾಗಿ ರಂಗೇರಿದಂತೆ ಕಾಣಬೇಕೇ ಹೊರತು ಢಟ್ಟವಾಗಿ ಬೆಳೆದರೆ ಅಸಹ್ಯವಾಗಿ ಕಾಣುತ್ತದೆ. ಕಣ್ಣುಗಳು ಭಾವ ಪೂರ್ಣವಾಗಿ ಕಾಣುವಂತೆ ಕಾಡಿಗೆ ಹಚ್ಚಿಕೊಳ್ಳಿ. ಕಾಡಿಗೆಯ ಅಭ್ಯಾಸ ಇಲ್ಲದವರು ಬರಿ 'ಮ್ಯಾಸ್ಕರಾ' ಉಪಯೋಗಿಸಬಹುದು. ನಿಮ್ಮ ಸೀರೆಗೆ ಹೊಂದಿಕೆಯಾಗುವಂಥ ರಂಗನ್ನು ತುಟಿಗೆ ಬಳಸಿ.

ತಲೆಗೂದಲನ್ನು ತೀಡಿ ಬಾಚಿ ಸರಳವಾಗಿ ಜಡೆ ಹೆಣೆದು ತಲೆ ತುಂಬಾ ಸುಗಂಧಿತ ಹೂಗಳನ್ನು ಮುಡಿದುಕೊಳ್ಳಿ, ನಂತರ ಸೀರೆಯುಟ್ಟು, ಆಭರಣಗಳನ್ನು ಧರಿಸಿ. ತುಟಿಗಳ ಮೇಲೆ ಕಿರುನಗೆ ಧರಿಸುವುದನ್ನು ಮರೆಯಬೇಡಿ! ನೀವು ಸಾಲಂಕೃತಳಾಗಿ, ನಿಮ್ಮವರ ಮುಂದೆ ನಿಂತು ಅವರ ಕಣ್ಣಿಗೆ ಹಬ್ಬವನ್ನುಂಟು ಮಾಡಿ!

○ ಡಾ. ಆರತಿ ವೆಂಕಟೇಶ್

# ಅಡುಗೆ ಮನೆ

## ಬದನೆ ಚಿತ್ರಾನ್ನ

**ಬೇಕಾಗುವ ಸಾಮಗ್ರಿಗಳು**

ಒಂದು ದೊಡ್ಡ ಬದನೆಕಾಯಿ, ಒಂದು ಆಲೂಗಡ್ಡೆ, ಹುರಿದ ಶೇಂಗಾ ಬೀಜ, ಚಕ್ರಮುಗ್ಗಿ (೪ ಎಸಳು), ಒಂದು ಟೀ ಚಮಚ ಸಾಸಿವೆ, ಒಂದು ಟೀ ಚಮಚ ಜೀರಿಗೆ, ಒಂದೆರಡು ದಾಲ್ಚೀನಿ ತುಂಡುಗಳು, ಒಂದು ಚಮಚ ಹವೀಜಕಾಳು, ಕರಿಬೇವು, ಕೊತ್ತಂಬರಿ ಸೊಪ್ಪು, ರುಚಿಗೆ ತಕ್ಕಷ್ಟು ಉಪ್ಪು, ಖಾರಪುಡಿ ಮತ್ತು ಅರಿಶಿಣಪುಡಿ.



**ಮಾಡುವ ವಿಧಾನ**

ಮೊದಲು ಅನ್ನವನ್ನು ಉದುರಾಗಿ ಮಾಡಿಟ್ಟುಕೊಳ್ಳಬೇಕು. ಚಕ್ರಮುಗ್ಗಿ, ಜೀರಿಗೆ, ಸಾಸಿವೆ, ದಾಲ್ಚೀನಿ, ಹವೀಜವನ್ನು ಸ್ವಲ್ಪ ತುಪ್ಪದಲ್ಲಿ ಹುರಿದು ಪುಡಿಮಾಡಿಟ್ಟು ಕೊಳ್ಳಬೇಕು. ನಂತರ ಬಾಣಲೆಯಲ್ಲಿ ಎಣ್ಣೆ ಹಾಕಿ, ಎಣ್ಣೆ ಕಾದ ಮೇಲೆ ಸಣ್ಣಗೆ ಹೆಚ್ಚಿದ ಬದನೆ ಮತ್ತು ಆಲೂಗಡ್ಡೆಯನ್ನು, ಕರಿಬೇವಿನ ಸೊಪ್ಪನ್ನು ಹಾಕಿ ಚೆನ್ನಾಗಿ ಕೆಂಪು ಬಣ್ಣಕ್ಕೆ ಬರುವವರೆಗೆ ಕರಿಯಬೇಕು (ತಾಳಿಸಬೇಕು). ನಂತರ ಪುಡಿ ಮಾಡಿದ ಮಸಾಲೆಯನ್ನು, ಅರಿಶಿಣಪುಡಿಯನ್ನು, ಉಪ್ಪು ಮತ್ತು ಖಾರದಪುಡಿಯನ್ನು, ಶೇಂಗಾ ಬೀಜಗಳನ್ನು ಹಾಕಿ ೫ ನಿಮಿಷ ಬಿಟ್ಟು ಕೆಳಗೆ ಇಳಿಸಬೇಕು. ಅನ್ನವನ್ನು ಒಂದು ಅಗಲವಾದ ತಟ್ಟೆಯಲ್ಲಿ ಹಾಕಿ ಸ್ವಲ್ಪ ಆರಿದ ನಂತರ ಒಗ್ಗರಣೆಯೆಲ್ಲ ಹಾಕಿ ಕಲಸಬೇಕು. ಮೇಲೆ ಸಣ್ಣಗೆ ಹೆಚ್ಚಿದ ಕೊತ್ತಂಬರಿ ಸೊಪ್ಪನ್ನು ಹಾಕಿ ಅಲಂಕರಿಸಬೇಕು. ಬಿಸಿಯಿರುವಾಗಲೇ ಉಣಬಡಿಸಿದರೆ ಹೆಚ್ಚು ರುಚಿಕರ.

- ಶಾರದಾ ದುಂದೂರ,
ಹುಲಕೋಟಿ

## ಸೊಪ್ಪಿನ ದೋಸೆ

**ಬೇಕಾಗುವ ಸಾಮಗ್ರಿಗಳು**

ಒಳ್ಳೆಯ ಎಳೆ ಮೆಂತೆ ಸೊಪ್ಪು, ಹಸಿ ಈರುಳ್ಳಿ ಗಡ್ಡೆ ಸೊಪ್ಪು, ತಿರಕಸಾಲಿ ಸೊಪ್ಪು, ಕರಬೇವು ಕೊತ್ತಂಬರಿ, ಒಣ ಅಕ್ಕಿಹಿಟ್ಟು ಚಿರೋಟಿ ರವೆ, ಮೈದಾಹಿಟ್ಟು, ಹಸಿ ಕಡ್ಲೆಹಿಟ್ಟು ಉಳ್ಳಾಗಡ್ಡಿ, ಬೆಳ್ಳುಳ್ಳಿ, ಹಸಿಮೆಣಸಿನ ಕಾಯಿ, ಜೀರಿಗೆ, ಉಪ್ಪು, ಸೋಡಾ.



**ಮಾಡುವ ವಿಧಾನ**

ಸೊಪ್ಪುಗಳನ್ನು ಸ್ವಚ್ಛವಾಗಿ ತೊಳೆದು ಸಣ್ಣಗೆ ಹೆಚ್ಚಬೇಕು. ಹೆಚ್ಚಿದ ಈರುಳ್ಳಿ, ಬೆಳ್ಳುಳ್ಳಿ, ಜೀರಿಗೆ, ಉಪ್ಪು, ಹಸಿ ಮೆಣಸಿನಕಾಯಿ ಸೇರಿಸಿ ಗ್ರೈಂಡ್ ಮಾಡಬೇಕು. ೧/೨ ಕೆ.ಜಿ. ಅಕ್ಕಿ ಹಿಟ್ಟಿಗೆ ೧/೪ ಕೆ.ಜಿ. ಮೈದಾ, ೧/೪ ಕೆ.ಜಿ. ಕಡ್ಲೆಹಿಟ್ಟು, ೧/೪ ಕೆ.ಜಿ. ಚಿರೋಟಿ ರವೆ ಹಾಕಿ ನೀರಿನಲ್ಲಿ ದೋಸೆ ಹಿಟ್ಟಿನ ಅಳತೆ ಕಲಿಸಬೇಕು. ಸೊಪ್ಪುಗಳನ್ನು ಅದರಲ್ಲಿ ಕಲಿಸಬೇಕು. ಸ್ವಲ್ಪ ಸೋಡಾ ಮತ್ತು ಮೇಲೆ ಹೇಳಿದ ಹಸಿಮೆಣಸಿನ ಕಾಯಿ ಪೇಸ್ಟನ್ನು ಅದರಲ್ಲಿ ಕಲಿಸಬೇಕು. ಇದನ್ನು ಆಗಿಂದಾಗೆ ದೋಸೆ ಹಂಚಿನ ಮೇಲೆ ದೋಸೆ ಮಾಡಿದರೆ ಒಳ್ಳೆಯ ರುಚಿಕಟ್ಟಾದ ದೋಸೆ ಆಗುತ್ತವೆ. ಈ ದೋಸೆ ಬಹಳ ಕಡಿಮೆ ಎಣ್ಣೆ ಹಿಡಿಯುತ್ತದೆ. ಮಕ್ಕಳು ಸಾಮಾನ್ಯ ಸೊಪ್ಪು ತಿನ್ನೋದಿಲ್ಲ. ಆದರೆ ಈ ದೋಸೆಯನ್ನು ಇಷ್ಟ ಪಟ್ಟು ತಿನ್ನುತ್ತಾರೆ, ಮಕ್ಕಳಿಗೆ ಹಾಗು ಗರ್ಭಿಣಿ ಸ್ತ್ರೀಯರಿಗೆ ಇದು ಒಳ್ಳೆಯದು. ಸೊಪ್ಪಿನ ದೋಸೆ ರುಚಿಕರ ಹಾಗು ವಿಟಾಮಿನ್‌ಯುಕ್ತ.

- ಸುಶೀಲಾ ಎಸ್. ಕುಲಕರ್ಣಿ
ಬೆಳಗಾಂವಿ

## ಸೇವನ್ ಕಪ್

**ಬೇಕಾಗುವ ಸಾಮಗ್ರಿ**

ಒಂದು ಕಪ್ ಕಡಲೆಹಿಟ್ಟು, ಒಂದು ಕಪ್ ತುಪ್ಪ, ೧ ಕಪ್ ತುರಿದ ಹಸಿ ಕೊಬ್ಬರಿ, ೩ ಕಪ್ ಸಕ್ಕರೆ, ೧ ಕಪ್ ಹಾಲು (ಒಟ್ಟು ಎಲ್ಲಾ ಸೇರಿ ಏಳು ಕಪ್ ಆಗಿರುವುದರಿಂದ ಇದಕ್ಕೆ Seven Cup ಎಂದೇ ಹೆಸರು)



**ಮಾಡುವ ವಿಧಾನ**

ಸಕ್ಕರೆ, ಹಾಲು ಹಾಕಿ ಪಾಕ ಮಾಡಿ. ಅದಕ್ಕೆ ಕಡಲೆಹಿಟ್ಟು, ತುಪ್ಪ, ಕೊಬ್ಬರಿ ಹಾಕಿ ಈ ಮಿಶ್ರಣ ಗಟ್ಟಿ ಆಗುವಂತೆ ಬೇಯಿಸಿ. ನಂತರ ತುಪ್ಪ ಸವರಿದ ತಟ್ಟೆಗೆ ಈ ಮಿಶ್ರಣ ಹರಡಿ. ಆರಿದ ಮೇಲೆ ಡೈಮಂಡ್ ಅಥವಾ ಚೌಕಾಕಾರ ಅಥವಾ ತ್ರಿಕೋನಾಕಾರಕ್ಕೆ ಕತ್ತರಿಸಿ. ಈಗ Seven Cup Ready.

- ಪರಿಮಳಾ ಜೋಶಿ
ಬಿಜಾಪುರ

# ಭ್ರಷ್ಟಾಚಾರ ನಮ್ಮ ಸಮಸ್ಯೆಯೆ ಅಲ್ಲವಂತೆ!!



ಕೋಚೆ ಚಿಂತನ

○ ಕೋ. ಚೆನ್ನಬಸಪ್ಪ
ನಿವೃತ್ತ ನ್ಯಾಯಾಧೀಶರು
೧೨೭, ಪಶ್ಚಿಮ ಕಾರ್ಡ್ ರಸ್ತೆ, ಮಹಾಲಕ್ಷ್ಮೀಪುರ,
ಬೆಂಗಳೂರು - ೫೬೦ ೦೮೬

ಪ್ರಧಾನಿ ಇಂದ್ರಕುಮಾರ್ ಗುಜ್ರಾಲ್ ಆಗಸ್ಟ್ ೧೫ರಂದು ಕೆಂಪುಕೋಟೆಯ ಮೇಲೆ ರಾಷ್ಟ್ರ ಧ್ವಜವನ್ನು ಹಾರಿಸಿದ ಮಹತ್ವದ ದಿನ ದೇಶದಲ್ಲಿ ಬೃಹದಾಕಾರದಲ್ಲಿ - ಭೂಮಿ ಆಕಾಶ ಗಳವರೆಗೆ, ಆಡಳಿತೆಯ ಯಾವ ಜಾಗವನ್ನು ಬಿಡದೆ ಗಾಳಿಯಂತೆ ತುಂಬಿಕೊಂಡಿರುವ ಭ್ರಷ್ಟಾಚಾರದ ಬ್ರಹ್ಮ ರಾಕ್ಷಸನ ಹಾವಳಿಯನ್ನು ಸದೆಬಡಿಯುವ ತಮ್ಮ ಧರ್ಮಯುದ್ಧದಲ್ಲಿ ಇಡೀ ರಾಷ್ಟ್ರದ ಜನತೆ ತಮ್ಮೊಡನೆ ಸಹಕರಿಸಬೇಕೆಂದು ಕಳಕಳಿಯಿಂದ ಮನವಿ ಮಾಡಿಕೊಂಡರು. ಅದಕ್ಕಿಂತ ಮೊದಲು ಮುಂಬಯಿಯಲ್ಲಿ ಸ್ವಾತಂತ್ರ್ಯದ ಸುವರ್ಣ ಮಹೋತ್ಸವವನ್ನು ಉದ್ಘಾಟಿಸುತ್ತ ಈ ಭ್ರಷ್ಟಾಚಾರದ ಪೆಡಂಭೂತವನ್ನು ಹೊಡೆದೋಡಿಸಲೇಬೇಕೆಂದು ಘೋಷಿಸಿದರು. ಭ್ರಷ್ಟಾಚಾರವು ರಾಷ್ಟ್ರದ ಜೀವಜೀವಾಳವನ್ನು ನರನಾಡಿಯನ್ನು ವ್ಯಾಪಿಸಿರುವ ಕ್ಯಾನ್ಸರ್ ರೋಗವೆಂದೂ ಅದನ್ನು ನಿವಾರಿಸದಿದ್ದರೆ ಈ ರಾಷ್ಟ್ರ ಅಧೋಗತಿಗಿಳಿದುಹೋಗುವುದೆಂದೂ ಜನ ಇದರ ವಿರುದ್ಧ ಹೋರಾಡಬೇಕೆಂದೂ ಸಂಸತ್ ಭವನದಲ್ಲಿಯೆ ತಮ್ಮ ದೃಢ ಸಂಕಲ್ಪವನ್ನು ಘೋಷಿಸಿದರು. ಮೊನ್ನೆ ತಾನೆ (ದಿನಾಂಕ ೪. ೯. ೯೭ರಂದು) ರಾಜ್ಯಗಳ ಎಲ್ಲ ತಪಾಸಣಾಧಿಕಾರಿಗಳ ಸಮ್ಮೇಳನವನ್ನು ಉದ್ಘಾಟಿಸುತ್ತಾ, ಭ್ರಷ್ಟಾಚಾರದ ದೂರುಗಳನ್ನು ಯಾವ ಹಂಗು ಹೆದರಿಕೆ ಆಸೆ ಆಮಿಷ ಒತ್ತಾಯ ಬೆದರಿಕೆಗೂ ಮಣಿಯದೆ ನಿರ್ಭಯವಾಗಿ, ನಿಷ್ಪಕ್ಷಪಾತವಾಗಿ ಶೀಘ್ರವಾಗಿ ನಡೆಸಬೇಕೆಂದು ಸೂಚಿಸಿದರು. ಭ್ರಷ್ಟಾಚಾರ ನಿವಾರಣೆಯ ಬಗ್ಗೆ ತಮಗಿರುವ ಕಳಕಳಿಯನ್ನು ಕಾರ್ಯರೂಪಕ್ಕೆ ತರಲು ತಮ್ಮ ಕಛೇರಿಯಲ್ಲಿ ಭ್ರಷ್ಟಾಚಾರ ದೂರುಗಳನ್ನು ವಿಚಾರಿಸಲು ಒಂದು ಉನ್ನತಮಟ್ಟದ ಕಛೇರಿಯನ್ನೆ ಸ್ಥಾಪಿಸಿದ್ದಾರೆ.

ಪ್ರಧಾನಿಗಳ ಈ ಪ್ರಶಂಸನೀಯ ಪ್ರಯತ್ನವನ್ನು ಬೆಂಬಲಿಸಿ, ಸುವರ್ಣೋತ್ಸವದ ಸಂದರ್ಭಕ್ಕಾಗಿಯೆ ಸೇರಿದ್ದ ಸಂಸತ್ ಅಧಿವೇಶನದಲ್ಲಿ ಸಭಾಧ್ಯಕ್ಷ ಸಂಗ್ಮಾ ಭ್ರಷ್ಟಾಚಾರ ನಿರ್ಮೂಲನೆಯ ದ್ವಿತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಎಲ್ಲರೂ ಪಾಲ್ಗೊಳ್ಳಬೇಕೆಂದು ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ಕಳಕಳಿಯಿಂದ ಮನವಿಮಾಡಿಕೊಂಡರು. ಈ ವಿಶೇಷ ಅಧಿವೇಶನದ ಔಚಿತ್ಯದ ಬಗ್ಗೆ ಭಿನ್ನಾಭಿಪ್ರಾಯ ಏನೇ ಇದ್ದರೂ ಅಧಿವೇಶನದಲ್ಲಿ ಭಾಷಣ ಮಾಡಿದ ಶೇಕಡಾ ೯೯ರಷ್ಟು ಸಂಸದರು ಭ್ರಷ್ಟಾಚಾರದಿಂದ ದೇಶಕ್ಕಾಗಿರುವ ಅಪಾರ ಹಾನಿಯನ್ನು ಕುರಿತು ಪ್ರಸ್ತಾಪಿಸಿದರು. ಬಿಜೆಪಿ ನಾಯಕ ಅಟಲ ಬಿಹಾರಿ ವಾಜಪೇಯಿ ತಮ್ಮ ಅನುಪಮ ವಾಗ್ಝರಿಯಿಂದ ತರ್ಕಸರಣಿಯಿಂದ ಈ ದೇಶದಲ್ಲಿ ಸ್ವಾತಂತ್ರ್ಯಾನಂತರ ಹಬ್ಬಿರುವ ಭ್ರಷ್ಟಾಚಾರವನ್ನು ಖಂಡಿಸಿ, ಅದನ್ನು ಹತ್ತಿಕ್ಕದಿದ್ದರೆ ಈ ದೇಶಕ್ಕೆ ಮೋಕ್ಷವೇ ಇಲ್ಲ ಎಂದು ಸಾರಿದರು. ಪ್ರಧಾನಿಗಳ ದೃಢಸಂಕಲ್ಪಕ್ಕೆ ಬೆಂಬಲ ಸೂಚಿಸಿದರು.

ಅದೇ ರೀತಿ ಉಭಯ ಕಮ್ಯುನಿಸ್ಟ್ ಪಕ್ಷದ ಮುಖಂಡರು, ಡಿ.ಎಂ.ಕೆ, ಎ.ಐ.ಎ.ಡಿ. ಯಂ.ಕೆ. ತಮಿಳು ಮಾಣಿಲಾ ಕಾಂಗ್ರೆಸ್, ತೆಲುಗುದೇಶಂ ಪಕ್ಷ, ಜನತಾದಳ, ಸಮತಾ ಪಾರ್ಟಿ ಮುಖಂಡರೆಲ್ಲರೂ ಸ್ವಾತಂತ್ರ್ಯ ನಂತರ ಈ ದೇಶದಲ್ಲಿ ಬೇರುಬಿಟ್ಟಿರುವ ನೈತಿಕ ಅಧಃಪತನವನ್ನು ಖಂಡಿಸಿದರು ಮತ್ತು ಅದನ್ನು ಬುಡಸಹಿತ ಕಿತ್ತೊಗೆಯಬೇಕೆಂದು ಘೋಷಿಸಿದರು. ಸಮತಾಪಕ್ಷದ ಜಾರ್ಜ್ ಫರ್ನಾಂಡಿಸ್, ಕಮ್ಯುನಿಸ್ಟ್ ಪಕ್ಷದ ಮುಖಂಡರು ಈ ದೇಶ ಸ್ವತಂತ್ರ ಆದಮೇಲೂ ಅನಕ್ಷರತೆ, ಅನಾರೋಗ್ಯ, ದಾರಿದ್ರ್ಯ ತಾಂಡವ ಆಡುತ್ತಿರುವುದಕ್ಕೆ ಭ್ರಷ್ಟಾಚಾರವೇ ಮೂಲವೆಂದು ಪ್ರತಿಪಾದಿಸಿದರು. ಈ ಐವತ್ತು ವರ್ಷಗಳಲ್ಲಿ ಈ ದೇಶದ ಪ್ರಜೆಗಳು ಸರ್ಕಾರಕ್ಕೆ ತೆತ್ತ ಕೋಟಿ ಕೋಟಿ ಹಣವನ್ನು ಭ್ರಷ್ಟ ರಾಜಕಾರಣಿಗಳು ಭ್ರಷ್ಟ ನೌಕರರು ನುಂಗಿ ನೀರು ಕುಡಿದಿರುವುದರಿಂದಲೆ ಆ ಹಣ ಪ್ರಗತಿಕಾರ್ಯಗಳಿಗೆ ವಿನಿಯೋಗವಾಗಿಯೆ ಇಲ್ಲ ಎಂದು ವಾದಿಸಿದರು.

ಆರು ದಿನಗಳವರೆಗೆ ಸಂಸತ್ತಿನಲ್ಲಿ ಮಾತನಾಡಿದ ಸಂಸದರು ಈ ರೀತಿ ಭ್ರಷ್ಟಾಚಾರದ ವಿರುದ್ಧ ಯುದ್ಧ ಸಾರುತ್ತಿರುವಾಗ ಮಾಜಿ ಪ್ರಧಾನಿಯೆಂಬ ಬಿರುದು ಹೊತ್ತ ಚಂದ್ರಶೇಖರ್ ಎಂಬ ಒಬ್ಬಾನೊಬ್ಬ ಸದಸ್ಯರು ಮಾತ್ರ - ಭ್ರಷ್ಟಾಚಾರ ಒಂದು ಸಮಸ್ಯೆಯೆ ಅಲ್ಲ; ನಮ್ಮ ದೇಶದ ಪ್ರಜೆಗಳೂ, ರಾಜಕಾರಣಿಗಳೂ ನೂರಕ್ಕೆ ೯೫ ರಷ್ಟು ಜನ ಪ್ರಾಮಾಣಿಕರೇ ಇದ್ದಾರೆ. ಕೇವಲ ಶೇ. ೫ ರಷ್ಟು ಅಪ್ರಾಮಾಣಿಕ ರಾಜಕಾರಣಿಗಳು ಸರ್ಕಾರಿ ನೌಕರರು ಇರುವುದನ್ನೇ ಮಿತಿಮೀರಿ ಉತ್ಪ್ರೇಕ್ಷೆ ಮಾಡುತ್ತಿದ್ದಾರೆ; ಅದಕ್ಕೆ ಸುದ್ದಿ ಮಾಧ್ಯಮಗಳೂ ನೆರವಾಗುತ್ತವೆ ಎಂಬ ಒಂದು ಸಂಶೋಧನೆಯನ್ನೇ ಬಯಲಿಗಿಟ್ಟರು. ಅದರಲ್ಲೂ ಈ ಮಹಾಶಯರು ರಾಷ್ಟ್ರಪತಿಗಳು ಈ ಬಗ್ಗೆ ಭ್ರಷ್ಟಾಚಾರದ ಬಗ್ಗೆ ಆಡಿದ

ಮಾತುಗಳನ್ನು ಅಲ್ಲಗಳೆದು, ಅವರನ್ನು ನೇರವಾಗಿಯೆ ಖಂಡಿಸಿದರು!!

ರಾಜಕಾರಣಿಗಳು ಸುಳ್ಳು ಹೇಳುವುದೇನೂ ಅಸಹಜವಲ್ಲ. ಸುಳ್ಳೇ ಅವರ ಉಸಿರು ನಿಜ. ಆದರೂ ಮಾಜಿ ಪ್ರಧಾನಿಯೆಂದು ಚರಿತ್ರೆಯಲ್ಲಿ ದಾಖಲಾಗಿರುವ ಈ ವ್ಯಕ್ತಿ ಹೇಳಿದ ಮಾತು 'ಭ್ರಷ್ಟಾಚಾರ ಒಂದು ಸಮಸ್ಯೆಯೆ ಅಲ್ಲ; ಭ್ರಷ್ಟಾಚಾರವನ್ನು .ಉತ್ಪ್ರೇಕ್ಷೆ ಮಾಡುತ್ತಿದ್ದಾರೆ ಎಂಬ ಮಾತು - ಸುಳ್ಳಿನ ಚಕ್ರವರ್ತಿಯೆ ಸರಿ. ರಾಷ್ಟ್ರಪತಿ, ಪ್ರಧಾನಿ, ವಿಪಕ್ಷಗಳ ಮುಖಂಡರು, ಸಂಸದರು, ಶಾಸಕರು... ಮುಂತಾದ ಆರಿಸಿದ ಪ್ರತಿನಿಧಿಗಳೆ ಅಲ್ಲದೆ, ಬೀದಿಯಲ್ಲಿ ಹೋಗುವ ಸರ್ವಸಾಧಾರಣ ಪ್ರಜೆಗಳು ಎಲ್ಲೆಲ್ಲಿಯೂ ಕಾಣುವ, ಅನುಭವಿಸುವ ಭ್ರಷ್ಟಾಚಾರ ಈ ಮಾಜಿ ಪ್ರಧಾನಿಯ ಕಣ್ಣಿಗೆ ಕಿವಿಗೆ ಬೀಳದಿರುವುದು ಆಶ್ಚರ್ಯ ಮಾತ್ರವಲ್ಲ. ಆತ್ಮದ್ರೋಹವೂ ಕೂಡ. ಆತ್ಮದ್ರೋಹ, ಆತ್ಮವಂಚನೆ ಎಂದು ಯಾಕೆ ಕರೆಯಬೇಕೆಂದರೆ ಈ ವ್ಯಕ್ತಿಯೆ ೧೯೭೪ರಲ್ಲಿ ಲೋಕನಾಯಕ ಜಯಪ್ರಕಾಶರು ಪ್ರಾರಂಭಿಸಿದ ಭ್ರಷ್ಟಾಚಾರ ಆಂದೋಲನದಲ್ಲಿ ಸಕ್ರಿಯವಾಗಿ ಪಾಲ್ಗೊಂಡ ನಾಟಕ ಆಡಿದ್ದರು. ಜಯಪ್ರಕಾಶರು ಭ್ರಷ್ಟಾಚಾರ ಎಲ್ಲೆಡೆಗೂ ಹಬ್ಬಿ ದೇಶದ ಪ್ರಗತಿಯನ್ನು ಕುಂಠಿತಗೊಳಿಸುತ್ತಿದೆ, ಅದರ ನಿರ್ಮೂಲನೆಯಿಂದ ಸಮಗ್ರ ಕ್ರಾಂತಿಯನ್ನುಂಟು ಮಾಡಬೇಕೆಂದು ಘೋಷಿಸಿದಾಗ, ಅವರ ಹಿಂಬಾಲಕರಾಗಿ ಈ ಮಾಜಿ ಮಂತ್ರಿ ನಿಂತಿದ್ದರು. ಜಯಪ್ರಕಾಶ್‌ರ ಆ ಧೋರಣೆಯನ್ನು ಅವರು ನಂಬಿ ಹೃದಯಾಂತರಾಳದಿಂದ ಬೆಂಬಲಿಸಿದ್ದು ನಿಜವಾಗಿದ್ದ ಪಕ್ಷದಲ್ಲಿ ಇಂದು ಅದೇ ವ್ಯಕ್ತಿ ಭ್ರಷ್ಟಾಚಾರ ಒಂದು ಸಮಸ್ಯೆಯೆ ಅಲ್ಲ ಎಂದು ಹೇಳುವುದು ಸಾಧ್ಯವೆಯಿಲ್ಲ. ಆದ್ದರಿಂದ ಅಂದು ಅವರು ಜಯಪ್ರಕಾಶರನ್ನು ಬೆಂಬಲಿಸಿದ್ದು ಕೇವಲ ನಾಟಕವೆ ಆಗಿರಬೇಕು. ಈ ಅನುಮಾನ (Inference) ಸತ್ಯವಾಗಿರಲೆಬೇಕು ಎಂಬುದಕ್ಕೆ ಅವರು ಆಶ್ರಮ ಎಂದು ಕರೆಯುವ ಅವರ ಅರಮನೆಯನ್ನು ನಾಚಿಸುವ ನಿವಾಸವನ್ನು ನೋಡಬೇಕು!! ಅವರ ಇಂದಿನ ಇಂದ್ರ ವೈಭವದ ಬುನಾದಿಯೆ ಭ್ರಷ್ಟಾಚಾರ ಎಂಬುದನ್ನು ದೆಹಲಿಯ ಸುತ್ತಮುತ್ತಲಿನ ಸರ್ವಸಾಧಾರಣ ಪ್ರಜೆಗಳಿಂದ ಕೇಳಿ ತಿಳಿಯಬಹುದು.

ಭ್ರಷ್ಟಾಚಾರ ಒಂದು ಸಮಸ್ಯೆಯೆ ಅಲ್ಲ ಎಂದು ಪ್ರತಿಪಾದಿಸುವ ಈ ವ್ಯಕ್ತಿ ಬಡತನ, ಅನಕ್ಷರತೆ, ಅನಾರೋಗ್ಯ ನಿವಾರಣೆಯ ಖಡಕ್ ಮಾತನಾಡುತ್ತಾರೆ. ಭ್ರಷ್ಟಾಚಾರ ಇರುವಲ್ಲಿ ಬಡತನ ಅನಕ್ಷರತೆ ನಿವಾರಣೆ ಅಸಾಧ್ಯ ಎಂಬ ಮೂಲಭೂತ ಸತ್ಯವನ್ನು ಭ್ರಷ್ಟ ರಾಜಕಾರಣಿಗಳು ಒಪ್ಪುವುದಿಲ್ಲ. ಜೆಪಿ ಭ್ರಷ್ಟಾಚಾರ ನಿರ್ಮೂಲನೆಗೆ ಕರೆಕೊಟ್ಟಾಗ ಇಂದಿರಾಗಾಂಧಿ 'ಗರೀಬಿ ಹಟಾವೋ' ಕಹಳೆ ಊದಿದರು. ಅದೇ ಸಮಯದಲ್ಲಿ ಜಗದ್ವಿಖ್ಯಾತ ಅರ್ಥಶಾಸ್ತ್ರಜ್ಞ ಪ್ರೊ. ಗನ್ನಾರ್‌ಮಿರ್ಡಾಲ್ ಒಂದು ಗ್ರಂಥ ರಚಿಸಿದರು (Asian-Drama An Inquiry into the Poverty of Nation). ಆ ಗ್ರಂಥದಲ್ಲಿ 'ಭ್ರಷ್ಟಾಚಾರ ಪದ್ಧತಿಗಳು ಆಧುನೀಕರಣದ ಎಲ್ಲ ಪ್ರಯತ್ನಗಳಿಗೂ ವಿಪರೀತ ಬಾಧಕಗಳು. ಭ್ರಷ್ಟಾಚಾರ ಇರುವಲ್ಲಿ ಅಭಿವೃದ್ಧಿಗೆ ಪ್ರಬಲವಾದ ಅಡ್ಡಿ ಆತಂಕಗಳು ತಲೆಯೆತ್ತುತ್ತವೆ. ರಾಷ್ಟ್ರವನ್ನು ಅಭದ್ರಪಡಿಸುವ ಪ್ರಯತ್ನಗಳಿಗೆ ಭ್ರಷ್ಟಾಚಾರ ಪ್ರಚೋದನೆ ಕೊಟ್ಟು ವಿಚ್ಛಿದ್ರಕಾರಕ ಪರಿಣಾಮಗಳಿಗೆ ಎಡೆ ಮಾಡುತ್ತದೆ....' ಎಂದು ಪ್ರತಿಪಾದಿಸಿದ್ದರು. ಆ ಮಾತು ಇಂದು ಸತ್ಯ ಎಂಬುದಕ್ಕೆ ನಮ್ಮ ದೇಶದ ಇಂದಿನ ಪರಿಸ್ಥಿತಿಯೆ ಪ್ರತ್ಯಕ್ಷ ನಿದರ್ಶನ.

ದೇಶ ಸ್ವತಂತ್ರವಾದ ಮೇಲೆ - ೧೯೪೭ರಿಂದ ಇಲ್ಲಿಯವರೆಗೆ, ಅರ್ಧ ಶತಮಾನದಷ್ಟು ದೀರ್ಘಕಾಲಸಂದರೂ ಈ ದೇಶದ ಮೂಲ ಸಮಸ್ಯೆ ಅನಕ್ಷರತೆ, ಬಡತನ ಇಂದಿಗೂ ಅಗಾಧವಾಗಿಯೆ ಇದೆ ಎಂಬುದು ಕಣ್ಣಿಗೆ ಕುಕ್ಕುವ ಸತ್ಯ-ಬೇಸಗೆ ಸೂರ್ಯ ಕಿರಣಗಳಂತೆ. ಇಂದಿಗೂ ಈ ದೇಶದಲ್ಲಿ ಸರ್ಕಾರವೆ ಒಪ್ಪಿಕೊಂಡಿರುವಂತೆ ಶೇ. ೪೮ರಷ್ಟು ಜನ ಅನಕ್ಷರಸ್ಥರು. ಶೇ. ೩೬ ರಷ್ಟು ಜನ ಬಡತನದ ರೇಖೆಯ ಕೆಳಗಿದ್ದಾರೆ! ಆರ್ಥಿಕ ಪ್ರಗತಿಯಲ್ಲಿ ಏಷಿಯಾ ರಾಷ್ಟ್ರಗಳಿಗಿಂತ ಬಹು ಕೆಳಗೆ ಇದೆ. ಆದರೆ ಭ್ರಷ್ಟಾಚಾರದಲ್ಲಿ ಜಗತ್ತಿನ ರಾಷ್ಟ್ರಗಳಲ್ಲಿ ಎಂಟನೆಯ ಸ್ಥಾನದಲ್ಲಿದ್ದು ಭ್ರಷ್ಟಾಚಾರ ಕಳಂಕದ ಕಿರೀಟವನ್ನು ಧರಿಸಿದೆ!! ಅಂದರೆ ಭ್ರಷ್ಟಾಚಾರ ಇರುವಲ್ಲಿ ಪ್ರಗತಿಯಿಲ್ಲ-ನೀರು ಇರುವಲ್ಲಿ ಗಾಳಿಯಿರಲಾರದು ಎಂಬಂತೆ. ಅಹಂ ಇರುವಲ್ಲಿ ದೈವ ಇರಲಾರದು ಎಂಬಂತೆ.

ಈ ತಾತ್ವಿಕ ಸೂತ್ರಗಳನ್ನು ನಂಬಿದರೆ ಮಾತ್ರ ಈ ಸತ್ಯ ದಿಟವೆಂದಲ್ಲ. ವಾಸ್ತವ ಪರಿಸ್ಥಿತಿಯನ್ನೆ ನೋಡಬಹುದು. ನಮ್ಮ ರಾಜ್ಯದ ಕೃಷಿ ಮಂತ್ರಿಗಳೆ ಬಯಲಿಗಿಟ್ಟಿರುವಂತೆ ಹೊಲಗಳಿಗೆ ಒಡ್ಡು ಹಾಕಿಸಲು, ಬಾವಿ ತೋಡಿಸಲು, ತುಂತುರು ನೀರಾವರಿಗಾಗಿ, ಪಶುಸಂಗೋಪನೆಗಾಗಿ, ಗೊಬ್ಬರಕ್ಕಾಗಿ ಸರ್ಕಾರ



''ಭ್ರಷ್ಟಾಚಾರ ಒಂದು ಸಮಸ್ಯೆಯೇ ಅಲ್ಲ. ನಮ್ಮ ದೇಶದ ಪ್ರಜೆಗಳಲ್ಲಿ ರಾಜಕಾರಣಿಗಳಲ್ಲಿ ನೂರಕ್ಕೆ ೫೫ರಷ್ಟು ಜನ ಪ್ರಾಮಾಣಿಕರಿದ್ದಾರೆ''.

**- ಚಂದ್ರಶೇಖರ್, ಮಾಜಿ ಪ್ರಧಾನಿ.**

ಬಿಡುಗಡೆ ಮಾಡಿದ ಹಣವನ್ನೆಲ್ಲ ಭ್ರಷ್ಟ ನೌಕರರು ನುಂಗಿ ಹಾಕಿದ್ದಾರೆಂದು ಅಂಕಿ ಸಂಖ್ಯೆಗಳಿಂದ ಬಯಲಿಗಿಟ್ಟಿದ್ದಾರೆ! ಕೃಷ್ಣಾ ಮೇಲ್ದಂಡೆ ಕಾಲುವೆಗಾಗಿ ಬಿಡುಗಡೆ ಮಾಡಿದ ಹಣ ಕಂಟ್ರಾಕ್ಟರ್ ಜೇಬಿಗೆ. ರಾಜಕಾರಣಿಗಳ ತಳವಿಲ್ಲದ ಹೊಟ್ಟೆಗೆ ಸೇರಿತೆಂದು ವಿಧಾನ ಮಂಡಲಗಳಲ್ಲಿ ಬೊಬ್ಬೆ ಹೊಡೆಯುತ್ತಿದ್ದಾರೆ. ಲೋಕೋಪಯೋಗಿ ಇಲಾಖೆಗೆ, ಆರೋಗ್ಯ ಇಲಾಖೆಗೆ ಬಿಡುಗಡೆ ಮಾಡಿದ ಹಣ ಕಂಟ್ರಾಕ್ಟರ್-ನೌಕರರ ಬೊಕ್ಕಸಕ್ಕೆ ಹರಿಯಿತೆಂದು ಸಾಬೀತಾಗಿದೆ. ಅಂಥ ೩೮ ಪ್ರಕರಣಗಳು ಇವೆಯೆಂದು ಸರ್ಕಾರದ ದಾಖಲೆಗಳೆ ಹೇಳುತ್ತವೆ. ಅಂದಮೇಲೆ ಬಡತನ ನಿವಾರಣೆ ಎಂದಾಗಬೇಕು?

ಭ್ರಷ್ಟಾಚಾರ ನಿವಾರಣೆ ಬಡತನ ನಿವಾರಣೆಗೆ ಅನಿವಾರ್ಯ. ಆದ್ದರಿಂದಲೆ ಪ್ರಧಾನಿ, ರಾಷ್ಟ್ರಪತಿ, ಮಾಜಿ ರಾಜ್ಯಪಾಲರು, ಮಾಜಿ ಮುಖ್ಯಮಂತ್ರಿಗಳು ಭ್ರಷ್ಟಾಚಾರ ನಿವಾರಣೆ ಆಗಲೇಬೇಕೆಂದು, ಯುದ್ಧೋಪಾದಿಯಲ್ಲಿ ಈ ಸಮಸ್ಯೆಯನ್ನು ಎದುರಿಸಬೇಕೆಂದು ಕರೆ ಕೊಟ್ಟಿದ್ದಾರೆ. ಜನರು ಸಕ್ರಿಯವಾಗಿ ಈ ಆಂದೋಲನದಲ್ಲಿ ಭಾಗಿಯಾಗದ ಹೊರತು ಇದನ್ನು ಬಗೆಹರಿಸಲು ಸಾಧ್ಯವಿಲ್ಲ. ಈ ದೇಶ ಬದುಕಬೇಕೆಂದು ಬಯಸುವ ಜನ ಪ್ರಧಾನಿಗಳ ಕೈ ಬಲಪಡಿಸಬೇಕು.




# ಸಾಮಾನ್ಯ ಜನರ ವೈದ್ಯ
# ಡಾ. ಕೆ. ಯೋಗೇಶನ್

**ಕ**ರ್ನಾಟಕದ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪದವಿ ಪಡೆದು ಹತ್ತಾರು ವರ್ಷ ಮಹಾವಿದ್ಯಾಲಯಗಳಲ್ಲಿ ಪ್ರಾಧ್ಯಾಪಕರಾಗಿ ಸಾವಿರಾರು ವಿದ್ಯಾರ್ಥಿಗಳಿಗೆ ಜ್ಞಾನ ದಾಸೋಹವನ್ನು ನೀಡುತ್ತಿದ್ದ ಪ್ರೊ.ಕೆ.ಯೋಗೇಶನ್ ಕಲಿಸುವ ಪ್ರಾಧ್ಯಾಪಕ ವೃತ್ತಿಗೆ ಶರಣು ಹೊಡೆದು ಆಯುರ್ವೇದ ವೈದ್ಯನಾಗಿ ಚೀಟಿಕಟ್ಟಿಕೊಡುವ ಕಾಯಕ ಕೈಗೊಂಡಿದ್ದು ಒಂದು ರೋಚಕ ಘಟನೆ.

ದಮ್ಮು ಇರಲಿ, ಕೆಮ್ಮಿರಲಿ, ಬಂಜೆಯಾಗಿರಲಿ, ಅಲ್ಸರ್-ಮೂಲವ್ಯಾಧಿ ಇರಲಿ, ಪಾರ್ಶ್ವವಾಯು ಪೀಡಿತನಾಗಿರಲಿ, ದೃಷ್ಟಿದೋಷವಿರಲಿ, ನಿಶ್ಯಕ್ತಿಯಾಗಿರಲಿ, ದೈಹಿಕ, ಮಾನಸಿಕ ರೋಗಗಳನ್ನು ಶುದ್ಧ ಆಯುರ್ವೇದ ಪದ್ಧತಿಯಿಂದ ಗುಣಪಡಿಸುವ ಸಿದ್ಧಹಸ್ತರು ಡಾ. ಕೆ. ಯೋಗೇಶನ್.

ಡಾ.ಕೆ.ಯೋಗೇಶನ್‌ರಿಗೆ ಈ ಆಯುರ್ವೇದ ಧನ ಸಂಪಾದನೆಯ ಮಾರ್ಗವಾಗಿರದೆ ಜನ ಸಂಪಾದನೆಯ ಸನ್ಮಾರ್ಗವಾಗಿದೆ. ಅವರು ಮನಸ್ಸು ಮಾಡಿದ್ದರೆ ಈ ವಿದ್ಯೆಯ ಬಲದಿಂದ ಸಾಕಷ್ಟು ಸಂಪಾದಿಸಿಕೊಂಡು ಮೆರೆದಾಡಬಹುದಿತ್ತು. ಆದರೆ ವ್ಯತಿರಿಕ್ತವಾದ ಬದುಕು ಅವರದು. ಕಷ್ಟಗಳ ಕುಲುಮೆಯಲ್ಲಿ ಬೆಂದ ರೋಗಿಗಳ ಬಾಳಿಗೆ ಅವರು ಅಪರಂಜಿಯಾಗಿದ್ದಾರೆ.

ಸರಳ ಸ್ವಭಾವದ ನೇರ ನುಡಿಯ ಸ್ನೇಹಮಯಿ ಡಾ. ಕೆ.ಯೋಗೇಶನ್ ಕನ್ನಡ ನಾಡಿನ ತುಂಬೆಲ್ಲ ಹರಿದಾಡಿ ಚಿಕಿತ್ಸಾ ಫಲವನ್ನು ಜನತೆಗೆ ನೀಡುತ್ತಿದ್ದಾರೆ. ರೋಗಿಗಳ ಬಳಿಗೇ ವೈದ್ಯನೆನ್ನುವಂತೆ ಅನೇಕ ಗ್ರಾಮಗಳಿಗೆ ಸಂದರ್ಶನ ನೀಡುತ್ತಿದ್ದಾರೆ. ಇವರು ತಮ್ಮ ಚಿಕಿತ್ಸಾ ಪದ್ಧತಿಯಲ್ಲಿ ಅಪ್ಪಿ ತಪ್ಪಿ ಒಮ್ಮೆಯೂ ಕೂಡಾ ಇಂಜಕ್ಷನ್ ಮಾಡದಿರುವುದನ್ನು ಮನಗಂಡ ಮುಂಡರಗಿ ಸಂಸ್ಥಾನ ಮಠದ ಅನ್ನದಾನೀಶ್ವರ ಮಹಾಸ್ವಾಮಿಗಳವರು ಕಳೆದ ವರ್ಷ ''ಸೂಜಿ ಮುಟ್ಟದ ಸರದಾರ'' ಎಂದು ಪ್ರಶಸ್ತಿ ನೀಡಿರುವುದು ಅಭಿಮಾನದ ಸಂಗತಿ.



ಅವರು ಶ್ರೀಗುರು ಸಿದ್ಧೇಶ್ವರ ಚಿಕಿತ್ಸಾಲಯ ಪ್ರಾರಂಭಿಸಿ ೧೭ ವರ್ಷಗಳು ತುಂಬಿದವು. ಪ್ರತಿವರ್ಷ ಈ ವಾರ್ಷಿಕೋತ್ಸವವನ್ನು ಆಚರಿಸುವ ಪದ್ಧತಿಯೇ ಬೇರೆ. ವಿವಿಧ ವೃತ್ತಿಗಳಲ್ಲಿ ವಿಶಿಷ್ಟ ಸಾಧನೆಗಳನ್ನು ಮಾಡಿದವರಿಗೆ ಪುರಸ್ಕಾರ, ಎಸ್.ಎಸ್.ಎಲ್.ಸಿ. ಮತ್ತು ಪಿ.ಯು.ಸಿ. ಪರೀಕ್ಷೆಗಳಲ್ಲಿ ಹೆಚ್ಚಿನ ಅಂಕಗಳನ್ನು ಗಳಿಸಿದ ವಿದ್ಯಾರ್ಥಿಗಳಿಗೆ, ವಿವಿಧ ಸ್ಪರ್ಧೆಗಳಲ್ಲಿ ವಿಜೇತರಾದ ಪ್ರತಿಭಾವಂತರಿಗೆ ತಕ್ಕ ಗೌರವ ನೀಡುವ ಸಂಪ್ರದಾಯವನ್ನು ತಪ್ಪದೇ ನಡೆಸಿಕೊಂಡು ಬಂದಿದ್ದಾರೆ. ಕೇವಲ ಒಬ್ಬ ವ್ಯಕ್ತಿಯಾದ ಡಾ.ಕೆ.ಯೋಗೇಶನ್ ಸಲ್ಲಿಸುತ್ತಿರುವ ಸೇವೆ ಸಮಾಜದ ಒಳಿತಿಗಾಗಿ ಸಮಷ್ಟಿಯ ಉದ್ಧಾರಕ್ಕಾಗಿ ಎಂಬುದನ್ನು ಮರೆಯಕೂಡದು. ಇಂದಿಗೂ ಎಲೆಯ ಮರೆಯ ಕಾಯಿಯಂತೆ ತಮ್ಮ ಆಯುರ್ವೇದ ವೈದ್ಯಕೀಯ ಪ್ರಪಂಚದಲ್ಲಿ ಸೇವೆ ಸಲ್ಲಿಸುತ್ತಿರುವ ಯೋಗೇಶನ್‌ರು ಕಳೆದ ನವೆಂಬರದಲ್ಲಿ ೭೦ನೇ ವರ್ಷಕ್ಕೆ ಕಾಲಿರಿಸಿದ್ದಾರೆ.

○ ಮಹಾಲಿಂಗ ಯಾಳಗಿ

# ನೀರು ಕುಡಿಯುವ ಮುನ್ನ...



ಇಂದು ಮಾರುಕಟ್ಟೆಯಲ್ಲಿ 'ಶುದ್ಧ ನೀರಿನ' ಭಾರಿ ವಹಿವಾಟು ನಡೆದಿದೆ.

'೧೦೦ % ಶುದ್ಧ ನೀರನ್ನು ಪಡೆಯಲು ನಮ್ಮ ಕಂಪನಿಯ ಫಿಲ್ಟರ್‌ನ್ನು ಉಪಯೋಗಿಸಿ'.

'೪೫ ಸೆಕೆಂಡಿನೊಳಗೆ ಮ್ಯಾಜಿಕ್ ಪೆನ್ ಅದ್ದಿ ನೀರನ್ನು ಶುದ್ಧಗೊಳಿಸಿ!'

''ಮಿನರಲ್'ಯುಕ್ತ ನೈಸರ್ಗಿಕ ಪರಿಶುದ್ಧ ನೀರಿನ ಬಾಟಲಿಗೆ ಕೇವಲ ೧೨ ರೂ. ಮಾತ್ರ!''

ಹೀಗೆ ನೂರಾರು ವರ್ಣಮಯ ಜಾಹೀರಾತುಗಳು ಪತ್ರಿಕೆಗಳಲ್ಲಿ ಕಾಣಸಿಗುತ್ತವೆ.

'ಶುದ್ಧ ಕುಡಿಯುವ ನೀರು' ಇಂದು ಅತ್ಯಂತ ದುರ್ಲಭವಾಗಿದೆ. ನಮ್ಮ ದೇಶದಲ್ಲಿ ಹರಡುವ ಸಾಂಕ್ರಮಿಕ ರೋಗಗಳ ಪೈಕಿ ಶೇ.೮೦ಕ್ಕೆ ಕಾರಣ ನಾವು ಕುಡಿಯಲು ಬಳಸುವ ನೀರು ಎನ್ನುವುದು ಪರಿಸ್ಥಿತಿಯ ಗಂಭೀರತೆಯನ್ನು ತೋರುತ್ತದೆ.

ವಿಶ್ವಬ್ಯಾಂಕಿನ ಪ್ರಕಾರ ಜಲ ಹಾಗು ವಾಯು ಮಾಲಿನ್ಯದಿಂದ ದೇಶಕ್ಕೆ ಆಗುತ್ತಿರುವ ಹಾನಿ ೩೬,೦೦೦ ಕೋಟಿ ರೂಪಾಯಿಗಳು!

ಅಂದರೆ ಅಶುದ್ಧ ನೀರನ್ನು ಕುಡಿದು ಇಲ್ಲವೇ ಬಳಸಿ ಅಸ್ವಸ್ಥರಾಗುವ ಜನ ಹಾಗು ಜಾನುವಾರು ಮುಂತಾದವುಗಳನ್ನು ಆರೈಕೆ ಮಾಡಲು, ಗುಣಪಡಿಸಲು ಹಾಗು ಇನ್ನಿತರ ದುಷ್ಪರಿಣಾಮಗಳನ್ನು ನಿವಾರಿಸಲು ಇಷ್ಟು ಭಾರಿ ಮೊತ್ತದ ಹಣವನ್ನು ವ್ಯಯಿಸಬೇಕಾಗಿದೆ.

ಪರಿಸ್ಥಿತಿ ಹೀಗಿರುವಾಗ, ಶುದ್ಧ ನೀರಿನ ಮಾರಾಟ ಒಂದು ದೊಡ್ಡ ದಂಧೆಯಾಗಿ ಬೆಳೆದಿರುವುದರಲ್ಲಿ ಆಶ್ಚರ್ಯವಿಲ್ಲ.

ಆದರೆ ಇಲ್ಲಿ ಕೆಲವು ಮೂಲಭೂತ ಪ್ರಶ್ನೆಗಳನ್ನು ನಾವು ಕೇಳಿಕೊಳ್ಳಬೇಕು.

ಅವೆಂದರೆ, ನಿಜಕ್ಕೂ ಈ ಫಿಲ್ಟರ್ (Filter)ಗಳು, ಪೆನ್‌ಗಳು ಪರಿಶುದ್ಧ ನೀರನ್ನು ಒದಗಿಸುತ್ತವೆಯೇ? 'ಬಾಟಲ್'ನಲ್ಲಿ ತುಂಬಿರುವ ನೀರು ನಿಜಕ್ಕೂ ಆರೋಗ್ಯಪೂರ್ಣವೇ? ಇತ್ಯಾದಿಗಳು.

ಆದ್ದರಿಂದ ನೀರಿನ ಶುದ್ಧೀಕರಣದ ಹಲವಾರು ವಿಧಿ-ವಿಧಾನಗಳ ಬಗ್ಗೆ ನಾವು ತಿಳಿದುಕೊಂಡರೆ ಈ ಪ್ರಶ್ನೆಗಳಿಗೆ ಸಮಾಧಾನಕರ ಉತ್ತರವನ್ನು ದೊರೆಕಿಸಿಕೊಳ್ಳುವುದು ಸಾಧ್ಯ.

ನೀರನ್ನು ಶುದ್ಧಗೊಳಿಸುವ ವಿಧಾನಗಳ ಪೈಕಿ ಕೆಲವು ಮುಖ್ಯವಾದವುಗಳನ್ನು ಇಲ್ಲಿ ಚರ್ಚಿಸಲಾಗಿದೆ.

○ **ನಾರಾಯಣ ಎಂ. ಭಟ್**
೧೪೪೪, ೪ನೇ ಮುಖ್ಯರಸ್ತೆ, ಆಂಜನೇಯನಗರ,
ಬಿ.ಎಸ್.ಕೆ. ೩ನೇ ಹಂತ, ಬೆಂಗಳೂರು

ಚಿತ್ರಗಳು : **ಕಿರಣ್ ಎಸ್.**

## ಕ್ಲೋರಿನೇಷನ್

ಬಹುತೇಕ ಪಟ್ಟಣ, ಶಹರಗಳಲ್ಲಿ ನೀರು ಕ್ಲೋರಿನ್ ವಾಸನೆಯಿಂದ ಕೂಡಿರುವುದನ್ನು ನೀವೆಲ್ಲ ಗಮನಿಸಿರಬಹುದು. 'ಕೋರ್ಲಿನ್' (Chlorine) ಅನ್ನು ನೀರಿಗೆ ಬೆರೆಸುವುದರಿಂದ ಹೈಪೋಕ್ಲೋರಸ್ ಆಸಿಡ್ (Hypochlorus acid) ಉತ್ಪನ್ನವಾಗುತ್ತದೆ. ಈ ಆಸಿಡ್ ಪುನಃ ರಾಸಾಯನಿಕವಾಗಿ ಮಾರ್ಪಟ್ಟು ಒಂದು ಪ್ರಬಲ ಆಕ್ಸಿಡೈಸಿಂಗ್ ಏಜಂಟ್ (Oxidising agent) ಆಗಿ ಬಿಡುತ್ತದೆ. ಈ ಕ್ರಿಯೆಯಲ್ಲಿ ಅದು ನೀರಿನಲ್ಲಿರುವ ರೋಗಾಣುಗಳಿಗೆ ಘಾತಕವಾಗುತ್ತದೆ.

'ಕ್ಲೋರಿನ್'ನ ಬಳಕೆಯಿಂದ ಬಹುತೇಕ ರೋಗಜೀವಾಣುಗಳು ಸತ್ತರೂ, ಕೆಲವು 'ವೈರಸ್'ಗಳು ಬದುಕುಳಿಯುತ್ತವೆ. ಹಾಗೆಯೇ ಕೆಲವು 'ಪರತಂತ್ರಜೀವಿ'ಗಳ ವಿರುದ್ಧವೂ ಇದು ಪರಿಣಾಮಕಾರಿಯಲ್ಲ.

ಇಷ್ಟಾದರೂ ನೀರಿನ ಶುದ್ಧಿಕರಣವನ್ನು ಕ್ಲೋರಿನೇಷನ್ ಶೀಘ್ರವಾಗಿ ಹಾಗು ಅತ್ಯಲ್ಪ ಖರ್ಚಿನಲ್ಲಿ ಮಾಡುತ್ತದೆ. ಆದ್ದರಿಂದಲೇ ಇದೊಂದು ಸಾರ್ವತ್ರಿಕ ಬಳಕೆಯಲ್ಲಿರುವ ವಿಧಾನ.

ಗೃಹಬಳಕೆಗಾಗಿ ಕ್ಲೋರಿನ್ ಮಾತ್ರೆಗಳು ಲಭ್ಯ. ಪ್ರಯಾಣದ ವೇಳೆಯಲ್ಲು ಇವುಗಳನ್ನು ಬಳಸಬಹುದು. ನಾಗಪುರದಲ್ಲಿರುವ NEERI (ನ್ಯಾಷನಲ್ ಎನ್‌ವಿರಾನ್‌ಮೆಂಟಲ್ ಇಂಜಿನಿಯರಿಂಗ್ ರಿಸರ್ಚ್ ಇನ್‌ಸ್ಟಿಟ್ಯೂಟ್) ಸಂಸ್ಥೆ ಕೋರ್ಲಿನ್ ಬಳಕೆಯನ್ನು ಜನಸಾಮಾನ್ಯರಲ್ಲಿ ಜನಪ್ರಿಯಗೊಳಿಸಲು ಶ್ರಮಿಸುತ್ತಿದೆ.

ಶುದ್ಧೀಕರಣಗೊಂಡ ನೀರಿನಲ್ಲಿ ಪ್ರತಿ ಲೀಟರಿಗೆ ೦.೨ರಿಂದ ೧.೦ ಮಿ. ಗ್ರಾಂ. ನಷ್ಟು ರೆಸಿಡ್ಯೂಯಲ್ (Residual) ಕ್ಲೋರಿನ್ ಇದ್ದರೆ ಕ್ಲೋರಿನೇಷನ್ ಸಮರ್ಪಕವಾಗಿದೆ ಎಂದು ತಿಳಿಯಲಾಗುವುದು.

## ಅಯೋಡಿನ್ ಬಳಕೆ

'ಅಯೋಡಿನ್'ನ ಬಳಕೆಯಿಂದ ನೀರನ್ನು ಶುದ್ಧಗೊಳಿಸಲು ಹಲವಾರು ಉಪಕರಣಗಳು ಇಂದು ಲಭ್ಯ. 'ಅಯೋಡಿನ್'ಗಳ ಬಳಕೆಯಿಂದ ಹಲವು ರೀತಿಯ ರೋಗಾಣುಗಳನ್ನು ನಾಶಗೊಳಿಸುವುದು ಸಾಧ್ಯ. ಇದು ಬ್ಯಾಕ್ಟೀರಿಯಾ ಹಾಗು ಹಲವು ರೀತಿಯ ವೈರಸ್‌ಗಳನ್ನು ಕೊಲ್ಲುತ್ತದೆ. ಹೀಗಾಗಿ ಕ್ಲೋರಿನ್‌ಗಿಂತ ಹೆಚ್ಚು ಪರಿಣಾಮಕಾರಿ.

ಇಂದು ಮಾರುಕಟ್ಟೆಯಲ್ಲಿ ಲಭ್ಯವಿರುವ ನೀರು ಶುದ್ಧೀಕರಣದ ಉಪಕರಣಗಳು (ಜೀರೋಬಿ ಮುಂತಾದವು) ಅಯೋಡಿನ್ ಬಳಕೆಯನ್ನು ಅಳವಡಿಸಿಕೊಂಡಿವೆ. ಈ ಘಟಕಗಳ ಮೂಲಕ ಪ್ರತಿ ಬಾರಿ ನೀರು ಹರಿದಾಗ, ಒಳಗಡೆ ಇರುವ ಅಯೋಡಿನ್ (''ಸ್ಟೈರಿನ್ ಮ್ಯಾಟಿಕ್ಸ್'', ಪಾಲಿ ಅಯೋಡೈಡ್ ಯುಕ್ತದೊಳಗೆ ಟ್ರೈ ಅಯೋಡೈಡ್‌ರಾಳವನ್ನು ಇರಿಸಲಾಗಿರುತ್ತದೆ) ತುಸುತುಸು ಆಗಿ 'ಕ್ಷಾಲನ'ವಾಗುತ್ತದೆ (ಕ್ಷಾಲನ-Leaching). ಇದರ ಪರಿಣಾಮವಾಗಿ ನೀರಿನ ಶುದ್ಧೀಕರಣ ಸಾಧ್ಯವಾಗುತ್ತದೆ. ಆದರೆ, ಬೃಹತ್ ಪ್ರಮಾಣದಲ್ಲಿ ನೀರಿನ ಶುದ್ಧೀಕರಣಕ್ಕೆ ಇದು ಯೋಗ್ಯ ವಿಧಾನವಲ್ಲ. 'ಹೈಪರ್ ಥೈಯರಾಯಿಡಿಸಂ' (Hyperthyroidism)ನಿಂದ ನರಳುವವರಿಗೆ ಅಯೋಡಿನ್ ಬಳಸಿ ಶುದ್ಧೀಗೊಳಿಸಿದ ನೀರು ಒಳ್ಳೆಯದಲ್ಲ.

## ವಾಟರ್‌ಫಿಲ್ಟರ್‌ಗಳು

ಅತ್ಯಂತ ಪ್ರಚಲಿತ ಹಾಗು ಜನಪ್ರಿಯವಾಗಿರುವ ಇವು ನೀರನ್ನು ಶುದ್ಧಿಕರಿಸುವ ಬಗೆಯೂ ಸರಳವಾಗಿಯೇ ಇದೆ.

## ಶುದ್ಧ ನೀರು ಯಾವುದು?

**ಶು**ದ್ಧವಾದ ನೀರು ತಿಳಿಯಾಗಿರುತ್ತದೆ. ಅದಕ್ಕೆ ಬಣ್ಣವಿಲ್ಲ, ವಾಸನೆಯಿಲ್ಲ, ರುಚಿಯೂ ಇಲ್ಲ. ಸ್ವಚ್ಛವಾದ ಗಾಜಿನ ಪಾತ್ರೆಯಲ್ಲಿ ಹಾಕಿದರೆ ಪಾರದರ್ಶಕವಾಗಿರುತ್ತದೆ. ಆದರೆ ಇದು ಕೇವಲ ನಮಗೆ ಗೋಚರವಾಗುವ ಶುದ್ಧತೆ. ನಿಜಕ್ಕೂ ನೀರು 'ಶುದ್ಧ' ಎಂದು ನಿರ್ಧರಿಸುವ ಮೊದಲು ಈ ಕೆಳಗೆ ತಿಳಿಸಿದ ಭೌತಿಕ, ರಾಸಾಯನಿಕ ಹಾಗು ಸೂಕ್ಷ್ಮದರ್ಶಕದ ಪರೀಕ್ಷೆಗಳನ್ನು ನಡೆಸಲಾಗುವುದು.

### ಭೌತಿಕ ಪರೀಕ್ಷೆ

- ನೀರು ಹೊಲಸಾಗಿರಬಾರದು. ಕದಡಿದ, ಕೊಳಕಾದ, ಕೊಚ್ಚೆ-ರಾಡಿ ಹಾಗು ಕೆಂಬಣ್ಣದ್ದಾಗಿರಬಾರದು.
- ನೀರಿನ ವಾಸನೆ, ಬಣ್ಣ, ರುಚಿ ಸ್ವಾಭಾವಿಕವಾಗಿರಬೇಕು. ದುರ್ವಾಸನೆಯಿಂದ ಕೂಡಿರಬಾರದು, ಬಣ್ಣ ಕೆಟ್ಟಿರಬಾರದು, ರುಚಿಕೆಟ್ಟಿರಬಾರದು. ಬಳಸಿದಾಗ ಅಸಹ್ಯ ಉಂಟಾಗಬಾರದು.

### ರಾಸಾಯನಿಕ ಪರೀಕ್ಷೆ

- ಡಿ.ಟಿ.ಎಸ್ (D.T.N) ಅಂಶವು ಒಂದು ಮಿಲಿ ಲೀಟರ್ ನೀರಲ್ಲಿ ೫೦೦೦ಕ್ಕಿಂತ ಹೆಚ್ಚಿರಬಾರದು
- ಫ್ಲೋರೈಡ್, ಕ್ಲೋರೇಟ್, ನೈಟ್ರೇಟ್, ಕಬ್ಬಿಣ ಸತ್ವ ಮುಂತಾದವು ಇರಕೂಡದು.
- ಫ್ರೀ ಕ್ಲೋರಿನ್ (Free Chlorine) ತುಸು ಪ್ರಮಾಣದಲ್ಲಿ ಇರಬೇಕು.
- ಪಿ.ಹೆಚ್(PH) ೬.೫ರಿಂದ ೮.೫ ರೊಳಗಿರಬೇಕು.

### ಸೂಕ್ಷ್ಮದರ್ಶನಿಯ ಪರೀಕ್ಷೆ

- ಕೋಲಿಫಾರಂ (ಸೂಕ್ಷ್ಮಾಣುಜೀವಿ) ೧೦ಕ್ಕಿಂತ ಹೆಚ್ಚು ಇರಬಾರದು (ಪ್ರತಿ. ಮಿ. ಲೀ. ಗೆ).
- ಇ.ಕೋಲಿ ನೀರಿನಲ್ಲಿದ್ದಾರೆ 'ಮಲ' ಸೇರಿದೆ ಎಂದರ್ಥ.

ಈ ಫಿಲ್ಟರ್‌ಗಳಲ್ಲಿ ಕ್ಯಾಂಡಲ್ (Candle) ಗಳಿದ್ದು, ನೀರು ಇವುಗಳ ಮೂಲಕ ಹಾದು ಹೊರಬಂದಾಗ ಶುದ್ಧೀಕರಣಗೊಳ್ಳುತ್ತದೆ. ಈ ಕ್ಯಾಂಡಲ್‌ಗಳನ್ನು ಅನ್‌ಗ್ಲೇಜ್ಡ್ ಪೋರ್ಸಿಲೆನ್ (unglazed porcelain) ನಿಂದ ತಯಾರಿಸಲಾಗಿದ್ದು, ನೀರು ಇವುಗಳ ಮೂಲಕ ಹರಿದಾಗ ಸೂಕ್ಷ್ಮಾಣುಜೀವಿಗಳನ್ನು ತಡೆಹಿಡಿಯುವಂತೆ ಇವುಗಳನ್ನು ವಿನ್ಯಾಸಗೊಳಿಸಲಾಗಿದೆ. ಆದರೆ ಇಲ್ಲಿರುವ ಸೂಕ್ಷ್ಮರಂಧ್ರಗಳು ಕಾಲ ಕ್ರಮೇಣ ದೊಡ್ಡದಾಗಿ ಬಿಡುತ್ತವೆ (ಸತತ ಬಳಕೆ ಹಾಗೂ ಆಗಿಂದಾಗ್ಗೆ ಉಜ್ಜಿ ಕ್ಯಾಂಡಲ್‌ಗಳನ್ನು ತೊಳೆಯಬೇಕಾದುದರಿಂದ). ಆಗ ಬ್ಯಾಕ್ಟೀರಿಯಾಗಳು ನುಸುಳಿ ಈ ವಾಟರ್‌ಫಿಲ್ಟರ್‌ಗಳ ಕಾರ್ಯಕ್ಷಮತೆ ಕುಂದುತ್ತದೆ. ಈ ವಾಟರ್‌ಫಿಲ್ಟರ್‌ಗಳು ವೈರಸ್ ಹಾಗು ಬ್ಯಾಕ್ಟೀರಿಯಾ ಫೇಜ್ (Bacteriophage) ನಂತಹ ವಿಷಾಣುಗಳನ್ನು ಸೋಸಿ, ತಡೆಹಿಡಿಯಲಾರವು. ಹೀಗಾಗಿ ಸಂಪೂರ್ಣ ಕ್ರಿಮಿರಹಿತ ನೀರನ್ನು ನೀಡಲಾರವು. B.I.S (ಬ್ಯೂರೋ ಆಫ್ ಇಂಡಿಯನ್ ಸ್ಟಾಂಡರ್ಡ್)ನ ಪ್ರಕಾರ ನೀರನ್ನು ಶುದ್ಧೀಕರಿಸುವ ಫಿಲ್ಟರಗಳ ಕ್ಯಾಂಡಲ್‌ಗಳಲ್ಲಿ ನುಣುಪಾದ ಸಿಲ್ವರ್ (Silver) ಲೋಹದ ತುಣುಕುಗಳು ಇದ್ದರೆ ಮಾತ್ರ 'ಬ್ಯಾಕ್ಟೀರಿಯಾ ಮುಕ್ತ' ನೀರು ದೊರೆಯಲು ಸಾಧ್ಯ.

ಆದ್ದರಿಂದ ವಾಟರ್‌ಫಿಲ್ಟರ್ ಕೊಳ್ಳುವ ಮುನ್ನ ಈ ವಿಷಯಗಳತ್ತ ಗಮನವಿಡಿ. ಸಾಮಾನ್ಯವಾಗಿ ಪ್ರೋಡಕ್ಟ್ (Product) ಮಾಹಿತಿ ಪತ್ರದಲ್ಲಿ ಈ ವಿವರಗಳು ಲಭ್ಯವಿರುತ್ತವೆ.

ಗ್ರಾಹಕ ಸಲಹೆ ಸಂಸ್ಥೆಗಳು ಮಾರ್ಕೆಟ್‌ನಲ್ಲಿ ಲಭ್ಯವಿರುವ ವಾಟರ್‌ಫಿಲ್ಟರ್‌ಗಳ ಪರೀಕ್ಷಣೆ ನಡೆಸಿದಾಗ ಹಲವಾರು ಬ್ರಾಂಡ್ (Brand)

ವಾಟರ್‌ಫಿಲ್ಟರ್‌ಗಳ ನೀರಿನಲ್ಲಿ ರೋಗಜನಕ ಬ್ಯಾಕ್ಟೀರಿಯಾಗಳು . ಕಂಡು ಬಂದವಂತೆ! ಆದ್ದರಿಂದ B.I.S. (I.S : 7402 1986) ನಿಗದಿಪಡಿಸಿದ ಮಾನ್ಯತೆಯುಳ್ಳ ಫಿಲ್ಟರ್‌ಗಳನ್ನು ಖರೀದಿಸುವುದು ಅಗತ್ಯ.

ಕೊಳಾಯಿ ನೀರನ್ನು ವಾಟರ್ ಫಿಲ್ಟರ್‌ಗಳಿಗೆ ತುಂಬಿಸಿ, ಒಂದು ವೇಳೆ ಕ್ಲೋರಿನೇಷನ್ ವಿಧಾನದಲ್ಲಿ ಉಳಿದಿರಬಹುದಾದ ರೋಗಾಣುಗಳನ್ನು ನಿವಾರಿಸುವುದು ಸಾಧ್ಯ. ವಾಟರ್‌ಫಿಲ್ಟರ ಮಾಹಿತಿ ಪತ್ರದಲ್ಲಿ ತಿಳಿಸಿರುವಂತೆ, ಕ್ಯಾಂಡಲ್‌ಗಳನ್ನು ಶುಚಿಗೊಳಿಸಿವುದು, ಬದಲಾಯಿಸುವುದು ಅವಶ್ಯ.

### ಅತಿನೇರಳೆ ಕಿರಣ

ಅಲ್ಟ್ರಾವಯೊಲೆಟ್ ಕಿರಣಗಳನ್ನು ಬಳಸಿ ನೀರನ್ನು ಶುದ್ಧೀಕರಿಸುವ ಉಪಕರಣಗಳು ಇಂದು ಮಾರುಕಟ್ಟೆಯಲ್ಲಿ ಲಭ್ಯ. ಕೆಲವು ಉಪಕರಣಗಳಲ್ಲಿ ನೀರಿನ ಜೊತೆ ಸುಮಧರ ಸಂಗೀತವೂ ಹೊರಹೊಮ್ಮುತ್ತದೆ! ಇಲ್ಲಿ U.V. ಕಿರಣಗಳನ್ನು ಹಾಯಿಸಿ ನೀರಿನಲ್ಲಿರುವ ವಿಷಾಣು ಕ್ರಿಮಿಗಳನ್ನು ಕೊಲ್ಲಲಾಗುತ್ತದೆ.

ಆದರೆ ನೀರಿನ ಧಾರೆ ತೆಳ್ಳಗಿದ್ದರೆ ಮಾತ್ರ ಇದು ಸಾಧ್ಯ. ನೀರು ಬಗ್ಗಡವಾಗಿದ್ದರೆ, ಬಣ್ಣಯುಕ್ತವಾಗಿದ್ದರೆ, U.V. ಕಿರಣಗಳು ಶುದ್ಧೀಕರಣ ಮಾಡುವಲ್ಲಿ ತಡೆಯುಂಟಾಗುತ್ತದೆ.

ಈ U.V. ದೀಪಗಳು ಸುಮಾರು ೨೫೦೦ ಗಂಟೆಗಳಷ್ಟು ಕಾಲ ಉರಿಯಬಲ್ಲವು. ನಂತರ ಅವುಗಳನ್ನು ಬದಲಿಸಬೇಕಾಗುತ್ತದೆ. ಕ್ಲೋರಿನೇಷನ್ ಆದ ನೀರನ್ನು U.V. ಬೆಳಕಿನ ಮೂಲಕ ಹಾಯಿಸಿದರೆ ಶುದ್ಧಿಕರಣ ಹೆಚ್ಚು ಪರಿಣಾಮಕಾರಿ. ಆಗಾಗ ಈ ದೀಪಗಳನ್ನು ಒರೆಸಿ ಶುಚಿಯಾಗಿಟ್ಟುಕೊಳ್ಳುವುದು ಅಗತ್ಯ.

ಹ್ರಸ್ವ ತರಂಗಾಂತರದ (Short-wavelength) U.V. ಕಿರಣಗಳು ನೀರಿನಲ್ಲಿರುವ ಎಲ್ಲಾ ಬಗೆಯ ರೋಗಾಣುಗಳನ್ನು (ಮುಖ್ಯವಾಗಿ ನೀರಲ್ಲಿ ಬದುಕುಳಿಯುವ) ನಾಶಪಡಿಸಬಲ್ಲವು. ಆದರೆ U.V. ಕಿರಣಗಳು ಶಕ್ತಿಶಾಲಿಯಾಗಿರಬೇಕಾದ್ದು ಅವಶ್ಯಕ. ಈ ವಿಧಾನದಿಂದ ನೀರಿನಬಣ್ಣ, ವಾಸನೆಯಲ್ಲಿ ಯಾವುದೇ ಬದಲಾವಣೆ ಕಂಡು ಬರದು. U.V. ಕಿರಣಗಳು ಜೀವಾಣುಗಳ ನ್ಯೂಕ್ಲಿಕ್ ಆಸಿಡ್ ಹಾಗು ಪ್ರೋಟಿನ್‌ಗಳನ್ನು ಹಾನಿ ಮಾಡಿ ನಾಶಪಡಿಸುತ್ತವೆ.

### ಓಜೋನ್ ಬಳಕೆ

ಓಜೋನ್ (Ozone) ಸಹ ಕ್ಲೋರಿನ್‌ನಷ್ಟೇ ಪರಿಣಾಮಕಾರಿ. ಆದರೆ ಇದು ದುಬಾರಿ ವಿಧಾನ. ಇಲ್ಲಿರುವ ಒಂದು ಉತ್ತಮ ಅಂಶವೆಂದರೆ ನೀರಿಗೆ ಯಾವುದೇ ರೀತಿಯ ಅಡ್ಡವಾಸನೆ (ಕ್ಲೋರಿನ್ ಬಳಸಿದಾಗ ಬರುವಂತೆ) ಇರದು. ಓಜೋನ್ ಪ್ರಭಾವ ಅರ್ಧ ಗಂಟೆಯ ಬಳಿಕ ಕಮ್ಮಿಯಾಗುವುದರಿಂದ, ನೀರನಲ್ಲಿ ಪುನಃ ರೋಗಾಣುಗಳು ಸೇರಿಕೊಂಡಾಗ ಅವುಗಳ ವಿರುದ್ಧ ರಕ್ಷಣೆ ಸಿಗಲಾರದು.

## 'ಕುಡಿಯುವ ನೀರು ಅತ್ಯಮೂಲ್ಯ' - ಪೋಲು ಮಾಡದಿರಿ

ಮುಂಬರುವ ದಿನಗಳಲ್ಲಿ 'ಕುಡಿಯುವ ನೀರು' ಅತ್ಯಂತ ಬೆಲೆಬಾಳುವ ವಸ್ತುವಾಗಲಿದೆ. ಅದರ ಬೆಲೆ ಪೆಟ್ರೋಲ್‌ಗಿಂತಲೂ ದುಬಾರಿಯಾದಲ್ಲಿ ಆಶ್ಚರ್ಯವಿಲ್ಲ! ಆದ್ದರಿಂದ ಕುಡಿಯುವ ನೀರನ್ನು ಉಳಿಸಿ; ಪೋಲು ಮಾಡದಂತೆ ಎಚ್ಚರ ವಹಿಸುವುದು ಅತ್ಯಗತ್ಯ. ನೀವು ಇದನ್ನು ಸುಲಭವಾಗಿ ಮಾಡಬಹುದು.

★ ನೀರನ್ನು ನಲ್ಲಿಯಿಂದ ಪಡೆಯುವಾಗ ನಲ್ಲಿಯನ್ನು ನಿಧಾನಕ್ಕೆ ತಿರುಗಿಸಿ. ನೀರು ಮಿತವಾಗಿ ಸುರಿಯುವಂತೆ ಮಾಡಿ.

★ ಹಲ್ಲು ತಿಕ್ಕುವಾಗ, ಮುಖ ತೊಳೆಯುವಾಗ ನೀರನ್ನು ನಿಲ್ಲಿಸಿ, ಅನಾವಶ್ಯಕವಾಗಿ ಹರಿದುಹೋಗುವುದನ್ನು ತಡೆಗಟ್ಟಿ.

★ ನಲ್ಲಿಗಳು ಸೋರುತ್ತಿದ್ದರೆ ತಕ್ಷಣ ರಿಪೇರಿ ಮಾಡಿಸಿ.

★ ಕುಡಿಯುವ ನೀರನ್ನು ಪಾತ್ರೆ, ಬಟ್ಟೆತೊಳೆಯಲು ಇಲ್ಲವೇ ಗಿಡಗಳಿಗೆ ಹಾಕಲು ಬಳಸಬೇಡಿ.

★ ತರಕಾರಿ-ಹಣ್ಣುಹಂಪಲುಗಳನ್ನು ತೊಳೆಯಲು ಪಾತ್ರೆಯೊಳಗೆ ನೀರು ತುಂಬಿಸಿ ಬಳಸಿ, ಸುರಿಯುವ ನೀರಿನಲ್ಲಿ ಬೇಡ.

★ ಅನಾವಶ್ಯಕವಾಗಿ ಕುಡಿಯುವ ನೀರನ್ನು ಮನೆಯಲ್ಲಿ ತುಂಬಿಸಿ ಇಟ್ಟುಕೊಳ್ಳಬೇಡಿ. ಈ ರೀತಿ ಬಳಕೆಯಾಗಲಾರದ ನೀರು ಆರೋಗ್ಯಕರವಲ್ಲ. ಇದರಿಂದ ನೀರಿನ ಹಂಚಿಕೆಯಲ್ಲಿಯೂ ಅಸಮಾನತೆ ಉಂಟಾಗುವುದು.



ಕೊಳವೆ ಬಾವಿ ನೀರಿಗೂ ರಾಸಾಯನಿಕ ಪರೀಕ್ಷೆ ಅಗತ್ಯ

## ಅಶುದ್ಧ ನೀರಿನಿಂದ ಹರಡುವ ರೋಗ-ರುಜಿನಗಳು

ಕೊಚ್ಚೆ, ರಾಡಿ, ಕೆಸರು ಕಲ್ಮಶ, ಮಲ, ಮೂತ್ರ ಮತ್ತು ಕ್ರಿಮಿಕೀಟಗಳಿಂದ ನೀರು ಅಶುದ್ಧಗೊಳ್ಳುವುದು. ಅದು ರೋಗಾಣುಗಳ ಆಶ್ರಯಸ್ಥಾನ. ಇಂತಹ ನೀರನ್ನು ಕುಡಿದಾಗ ಹಲವಾರು ಕಾಯಿಲೆಗಳು ಹಬ್ಬುತ್ತವೆ. ಅತಿಸಾರಭೇದಿ, ಆಮಶಂಕೆ (ರಕ್ತಭೇದಿ) ವಿಷಮಶೀತಜ್ವರ (ಟೈಫ್ಯಾಡ್), ಕಾಲರ (ವಾಂತಿಭೇದಿ), ಅರಶಿನ ಮುಂಡಿಗೆ (ಜಾಂಡಿಸ್: ಕಾಮಾಲೆ, ಕಾಮಿಣಿ), ಫ್ಲೋರೋಸಿಸ್ (ಒಸಡು ಊತ), ಪೋಲಿಯೋ ಮೈಲೈಟಿಸ್ ಮೊದಲಾದ ಹಲವು ರೋಗಗಳು ಕಲುಷಿತ ನೀರಿನ ಮೂಲಕವೇ ಹರಡುತ್ತವೆ.

ಮಲೇರಿಯಾ, ಆನೆಕಾಲು, ನಾರುಹುಣ್ಣು, ಜಂತುಹುಳ ವ್ಯಾಧಿ ಮತ್ತು ವಿವಿಧ ಚರ್ಮ ರೋಗಗಳಿಗೂ ಮಲಿನವಾದ ನೀರು ಕಾರಣ.

ಕೆಟ್ಟ ನೀರನ್ನು ಬಳಸಿದರೆ ವಾಂತಿ, ವಾಕರಿಕೆ, ಹೊಟ್ಟೆ ನುಲಿತ, ಮತ್ತಿತರ ಕರುಳಿನ ವಿವಿಧ ತೊಂದರೆಗಳು ಉಂಟಾಗುತ್ತವೆ.

ಜಲಮೂಲಗಳ ಸುತ್ತ (ಕೆರೆ, ಬಾವಿ, ಕೊಳವೆ ಬಾವಿ ಇತ್ಯಾದಿ) ಸ್ನಾನಮಾಡುವುದು, ಬಟ್ಟೆ ಬರೆ-ಪಾತ್ರೆ ಮತ್ತು ಸಾಕುಪ್ರಾಣಿಗಳನ್ನು ತೊಳೆಯುವುದು, ಕಕ್ಕಸು ಮಾಡುವುದು ನಿಷಿದ್ಧ. ಕೊಚ್ಚೆ ನೀರು ಅಲ್ಲಲ್ಲಿ ನಿಂತುಕೊಳ್ಳದೆ ಹರಿದು ಹೋಗುವಂತೆ ಮಾಡಬೇಕು. ಇಲ್ಲವಾದಲ್ಲಿ ಸಾಂಕ್ರಾಮಿಕ ರೋಗಗಳು ನಿಶ್ಚಿತ!



### ನೀರನ್ನು ಕುದಿಸಿ, ಆರಿಸಿ ಬಳಸುವುದು

ಮೇಲೆ ತಿಳಿಸಿದ ವಿಧಾನಗಳು ಬಡವರಿಗೆ, ಗ್ರಾಮೀಣ ಜನರಿಗೆ ಕೈಗೆಟುಕವು. ಅಂತಹವರಿಗೆ ನೀರನ್ನು ಶುದ್ಧೀಕರಿಸುವ ಸುಲಭ ವಿಧಾನ ವೆಂದರೆ ಕುಡಿಯುವ ನೀರನ್ನು ಸೋಸಿ, ಕುದಿಸಿ (ಮರಳಿಸಿ) ಬಳಸುವುದು.

೫ ನಿಮಿಷಗಳ ಕಾಲ ನೀರನ್ನು ಕುದಿಸಿದಾಗ ಎಲ್ಲ ರೀತಿಯ ರೋಗಾಣುಗಳು ಸಾಯುತ್ತವೆ. ಇನ್ನೂ ಹೆಚ್ಚಿನ ಅವಧಿ ಅಂದರೆ ೧೦ರಿಂದ ೧೫ ನಿಮಿಷಗಳ ಕಾಲದವರೆಗೆ ಕುದಿಸುವುದರಿಂದ ಹೆಪಾಟಿಟಿಸ್-ಬಿ ನಂತಹ 'ವೈರಸು'ಗಳು ಸಹ ನಾಶಹೊಂದುತ್ತವೆ. ಕುಡಿಯುವ ನೀರನ್ನು ಸದಾ ಮುಚ್ಚಿಡಬೇಕು. ನೀರನ್ನು ಮಡಕೆಯಿಂದ ತೆಗೆಯಲು ಉದ್ದ ಹಿಡಿಕೆಯಿರುವ ಸೌಟನ್ನು ಬಳಸುವುದು ಆರೋಗ್ಯಕರ. ಇದರಿಂದ ನೀರಿಗೆ ಸೇರುವ ಮಲೀನ ವಸ್ತುಗಳನ್ನು (ಮುಖ್ಯವಾಗಿ ಕೈ ಹಾಗು ಉಗುರು ಸಂದಿಗಳಿಂದ) ದೂರವಿಟ್ಟಂತಾಗುತ್ತದೆ.

### 'ಬಾಟಲ್' ನೀರು

ನೀರನ್ನು 'ಬಾಟಲ್'ಗಳಲ್ಲಿ ತುಂಬಿ ಮಾರುವ ವ್ಯಾಪಾರ ಇಂದು ದೇಶದಲ್ಲಿ ಬಹು ತೀವ್ರಗತಿಯಲ್ಲಿ ಬೆಳೆಯುತ್ತಿದೆ. ಮೊದಲು ಒಂದೋ, ಎರಡೋ ಕಂಪನಿಗಳು ಮಾತ್ರ ಈ ಕ್ಷೇತ್ರದಲ್ಲಿದ್ದವು. ಆದರೆ ಈಗ ನೂರಾರು 'ಶುದ್ಧನೀರಿನ' ಬಾಟ್ಲಿಂಗ್ ಪ್ಲಾಂಟ್‌ಗಳು ದೇಶದ ಎಲ್ಲಾ ಭಾಗಗಳಲ್ಲೂ ತಲೆ ಎತ್ತಿವೆ.

ಪ್ರಯಾಣಿಸುವಾಗ ಈ ಶುದ್ಧ ನೀರಿನ ಬಾಟಲ್‌ಗಳನ್ನು ಖರೀದಿಸಿ ಜೊತೆ ಒಯ್ಯುವುದು ಒಂದು 'ಫ್ಯಾಶನ್' ಎನ್ನುವಷ್ಟರ ಮಟ್ಟಿಗೆ ಇದು ಬೆಳೆದಿದೆ.

ಈ 'ಬಾಟಲ್' ನೀರನ್ನು 'ಶುದ್ಧನೀರು' ಅಥವಾ 'ಮಿನರಲ್‌ಯುಕ್ತ ನೀರು' ಎಂದು ನಾಮಕರಣ ಮಾಡಿ ಮಾರಾಟ ಮಾಡಲಾಗುತ್ತಿದೆ. ಮಿನರಲ್‌ಯುಕ್ತ ನೀರು, ಸಾಧಾರಣ ನೀರಿಗಿಂತ ಭಿನ್ನ. ಇದರಲ್ಲಿ ಖನಿಜ ಹಾಗು ಇತರ ಅಂಶಗಳು ಇರುತ್ತವೆ. ಇಂತಹ ಖನಿಜಯುಕ್ತ ನೀರನ್ನು ನೈಸರ್ಗಿಕವಾಗಿ ಪಡೆಯಬಹುದು ಇಲ್ಲವೆ ಕುಡಿಯುವ ನೀರಿಗೆ ಖನಿಜಗಳನ್ನು ಬೆರೆಸಿ ತಯಾರಿಸಬಹುದು. ಹೀಗಾಗಿ ಬಾಟಲ್‌ಗಳಲ್ಲಿ ತುಂಬಿ ಮಾರಲಾಗುವ ನೀರು ಸಂಪೂರ್ಣವಾಗಿ ಆರೋಗ್ಯಕಾರಕವೇ? ಇವುಗಳಲ್ಲಿ ಯಾವುದೇ ರೋಗಾಣುಗಳು ಇರುವುದಿಲ್ಲವೇ? ಎನ್ನುವ ಪ್ರಶ್ನೆಗಳನ್ನು ನಾವು ಎದುರಿಸಬೇಕಾಗುತ್ತದೆ.

ಬಹಳಷ್ಟು ಜನ ಈ 'ಮಿನರಲ್‌ಯುಕ್ತ ನೀರು' ಕುಡಿಯುವುದು ಆರೋಗ್ಯಕರ ಹಾಗು ಅಂತಹ ನೀರಿನ ಹೊಳಪಿನ ಪಾರದರ್ಶಕತೆ, ಶುದ್ಧತೆಯನ್ನು ತೋರಿಸುತ್ತದೆ ಎಂದು ತಿಳಿದಿರುತ್ತಾರೆ. ವಾಸ್ತವವಾಗಿ, ಮಾನವನಿಗೆ ಅಗತ್ಯವಾದ 'ಮಿನರಲ್'ಗಳನ್ನು ಈ ನೀರಿನಿಂದ ಪಡೆಯುವುದು ಸಾಧ್ಯವಿಲ್ಲ.

'ನಲ್ಲಿ'ಗಳಲ್ಲಿ ಬರುವ ನೀರನ್ನು 'ಖನಿಜ ಯುಕ್ತ'ವನ್ನಾಗಿಸಿ, ಬಾಟಲ್‌ಗಳಲ್ಲಿ ತುಂಬಿ ಮಾರುವುದು ಸಾಧ್ಯವಾದ್ದರಿಂದ, ಇದು ಸಂಪೂರ್ಣ 'ರೋಗಾಣುರಹಿತ' ಎನ್ನುವಂತಿಲ್ಲ.

ನೀರನ್ನು ಬಾಟಲುಗಳಲ್ಲಿ ತುಂಬುವಾಗ ಸರಿಯಾದ ಎಚ್ಚರಿಕೆ ವಹಿಸದಿದ್ದರೆ; ಬಹಳ ಕಾಲ

ನೀರನ್ನು ಬಾಟಲ್‌ಗಳಲ್ಲಿ ಬಿಟ್ಟಾಗ, ಬೆಚ್ಚಗಿನ ಹವಾಗುಣ ಇರುವ ಪ್ರದೇಶಗಳಲ್ಲಿ ನೀರಿನಲ್ಲಿ ಬ್ಯಾಕ್ಟೀರಿಯಾದ ಬೆಳವಣಿಗೆ ಕಂಡು ಬರುವುದು. ಆದ್ದರಿಂದ 'ಬಾಟಲ್' ನೀರನ್ನು ಕುಡಿಯುವ ನೀರಾಗಿ ಬಳಸುವ ಮುನ್ನ ಈ ಎಲ್ಲಾ ಅಂಶಗಳ ಕಡೆ ಗಮನವಿರಿಸುವುದು ಅಗತ್ಯ. 'ಕ್ಲೋರಿನೇಷನ್' ಮಾಡಿರುವ ನೀರನ್ನು 'ಬಾಟಲಿ'ಗಳಲ್ಲಿ ತುಂಬಿಡುವುದು ಆರೋಗ್ಯದ ದೃಷ್ಟಿಯಿಂದ ಹಾನಿಕಾರಕ.



ಮಿನರಲ್ ನೀರು ಎಷ್ಟು ಪರಿಶುದ್ಧ?

ನಾವು ಕುಡಿಯುವ ನೀರು ಕುಡಿಯಲು ಯೋಗ್ಯವೇ ಎನ್ನುವುದನ್ನು ನಿರ್ಧರಿಸಲು ಬ್ಯುರೋ ಆಫ್ ಇಂಡಿಯನ್ ಸ್ಟಾಂಡರ್ಡ್ (Bureau of Indian Standard) ಒಂದು ಸೂಚನೆ ನೀಡಿದೆ. ಅದರ ಪ್ರಕಾರ 'ಕ್ಲೋರಿನೇಷನ್' ಮಾಡಿದ ನೀರಿನಲ್ಲಿ 'ಎಂಟಿರೋವೈರಸ್' (Enterovirus)ಗಳು ಸಾಯಲು ಶುದ್ಧೀಕರಣ ಸಂಪೂರ್ಣವಾಗಿರಬೇಕಾದ್ದು ಅವಶ್ಯಕ. ಇಲ್ಲವಾದರೆ, ಅವು 'ಕೋರ್ಲಿನ್' ಪ್ರಭಾವವನ್ನು ವಿರೋಧಿಸಿ ಬದುಕುಳಿದಿರುತ್ತವೆ.

## ಇತರ ರಾಸಾಯನಿಕಗಳು

ನಾವು ಕುಡಿಯುವ ನೀರು ಕೇವಲ ರೋಗಾಣು ಮುಕ್ತವಾಗಿದ್ದರಷ್ಟೇ ಸಾಲದು. ಅದು ಇನ್ನಿತರ ವಸ್ತುಗಳಿಂದಲೂ ಮುಕ್ತವಾಗಿರಬೇಕು. ಅದರಲ್ಲೂ ಮುಖ್ಯವಾಗಿ ಫ್ಲೋರೈಡ್ (Fluoride) ಹಾಗು ಆರ್ಸನಿಕ್ (Arsenic) ನಂತಹ ಹಾನಿಕಾರಕ ರಾಸಾಯನಿಕಗಳಿಂದ ಭಾರತದಲ್ಲಿ ಸುಮಾರು ೮೭೦೦ಕ್ಕೂ ಹೆಚ್ಚಿನ ಹಳ್ಳಿಗಳಲ್ಲಿ ಜನ ದುಷ್ಪರಿಣಾಮಕ್ಕೆ ಒಳಗಾಗಿದ್ದಾರೆ. ಇದರಿಂದ ಹಲ್ಲು ಹಾಗು ಅಸ್ಥಿಪಂಜರದ ಕ್ಷತಿ ಸಂಭವಿಸುತ್ತಿದೆ. ವಿಶ್ವ ಆರೋಗ್ಯ ಸಂಸ್ಥೆ (W.H.O)ಯ ಪ್ರಕಾರ ಕುಡಿಯುವ ನೀರಿನಲ್ಲಿ ಇದು ಪ್ರತಿ ಲೀಟರ್‌ಗೆ ೧.೦ ಎಂ.ಜಿ.ಗಿಂತ ಅಧಿಕವಾಗಿರಬಾರದು. ಬಾವಿ, ಹಾಗು ಕೊಳವೆ ಬಾವಿಯ ನೀರನ್ನು ಅಗತ್ಯ ರಾಸಾಯನಿಕ ಪರೀಕ್ಷೆಗಳ ನಂತರ ಬಳಸುವುದೊಂದೇ ಇದಕ್ಕೆ ಇರುವ ಉಪಾಯ.

'ಆರ್ಸೇನಿಕ್' ನೀರಿನಲ್ಲಿ ಬೆರಕೆಯಾಗಿದ್ದರೆ ಮಾನವನ ಆರೋಗ್ಯದ ಮೇಲೆ ದುಷ್ಪರಿಣಾಮ ತಪ್ಪಿದ್ದಲ್ಲ. ಚರ್ಮರೋಗ, ಯಕೃತ್ ಹಾಗು ಮೂತ್ರ ಪಿಂಡಗಳಿಗೆ ಹಾನಿಯಾಗುವುದು. ನೀರಿನಲ್ಲಿ ಇಂತಹ ಹಾನಿಕಾರಕ ರಾಸಾಯನಿಕಗಳು ಸೇರಲು ಭೂಗರ್ಭದ ನೀರನ್ನು ಪಡೆಯಲು ಬಹಳ ಆಳವಾಗಿ ಭೂಮಿ ಕೊರೆಯುವುದು ಒಂದು ಮುಖ್ಯ ಕಾರಣ.

ಹೀಗೆ ನಾವು ನೀರು ಕುಡಿಯುವ ಮುನ್ನ ಅದನ್ನು ಶುದ್ಧಗೊಳಿಸುವುದು ಎಷ್ಟು ಮುಖ್ಯ ಎಂಬುದು ನಿಮಗೀಗ ಅರ್ಥವಾಯಿತಲ್ವೆ? ಆದರೆ, ಇಲ್ಲಿ ವಿವರಿಸಿರುವಂತೆ ನೀರನ್ನು 'ಸಂಪೂರ್ಣ' ಶುದ್ಧಗೊಳಿಸಲು ಮೇಲೆ ಹೇಳಿದ ಯಾವುದೇ ಒಂದು ವಿಧಾನದಿಂದಲೂ ಸಾಧ್ಯವಿಲ್ಲ. ಆದ್ದರಿಂದ ನೀವು ಖರೀದಿಸುವ ಇಲ್ಲವೇ ಆಯ್ಕೆ ಮಾಡುವ 'ನೀರು ಶುದ್ಧಿಕರಣ'ದ ಘಟಕವನ್ನು ಯಾವ ಉದ್ದೇಶಕ್ಕಾಗಿ ಬಳಸುತ್ತೀರಿ ಎಂದು ನಿರ್ಧರಿಸಿ. ಏಕೆಂದರೆ ನೀವು ಆಯ್ಕೆ ಮಾಡಿರುವ ಘಟಕ ಕೇವಲ ಹಾನಿಕಾರಕ ರಾಸಾಯನಿಕಗಳನ್ನು ಸೋಸಿ, ಜೀವಾಣುಗಳನ್ನು ಹಾಗೆಯೇಬಿಟ್ಟರೆ ಅದರಿಂದ ಲಾಭವಿಲ್ಲ. ಅದೇ ರೀತಿ 'ನೀರು ಶುದ್ಧೀಕರಣ ಘಟಕ ರೋಗಾಣು ಹಾಗು ವೈರಸ್‌ಗಳನ್ನು ನಾಶಪಡಿಸಿ, ಹಾನಿಕಾರಕ ರಾಸಾಯನಿಕ ಮತ್ತು ನೀರಿನಲ್ಲಿ ಬೆರೆತಿರಬಹುದಾದ ಬಣ್ಣ ಹಾಗು ಇನ್ನಿತರ ಕಲ್ಮಶಗಳನ್ನು ತಡೆಯದೆ ಹೋದರೆ ಅದರಿಂದಲೂ ಹೆಚ್ಚು ಉಪಯೋಗವಿಲ್ಲ. ಆದರೂ ಇಲ್ಲಿ ಕೆಲವು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಆಯ್ಕೆಯನ್ನು ಮಾಡುವುದು ಸೂಕ್ತ. ಅವುಗಳೆಂದರೆ,

೧. ನೀವು ಕುಡಿಯಲು ಬಳಸಲಿರುವ ನೀರನ್ನು ಮೊದಲಿಗೆ ಪರೀಕ್ಷೆ ಮಾಡಿಸಿ. ಅದರಲ್ಲಿರುವ ಕಲ್ಮಶಗಳು, ರೋಗಾಣುಗಳು ಯಾವುವು ಎನ್ನುವುದನ್ನು ತಿಳಿಯಿರಿ. ಆಗ ನಿಮಗೆ ಯಾವ ಬಗೆಯ ಶುದ್ಧೀಕರಣ ಘಟಕ ಅತ್ಯಂತ ಪರಿಣಾಮಕಾರಿ ಎಂದು ನಿರ್ಧರಿಸಲು ಸಾಧ್ಯವಾಗುವುದು.

೨. ನಿಮ್ಮ ಅಕ್ಕ-ಪಕ್ಕದ ಮನೆಗಳಲ್ಲಿ ಯಾವ ವಿಧಾನವನ್ನು ಬಳಸುತ್ತಿದ್ದಾರೆ ಎನ್ನುವುದನ್ನು ತಿಳಿಯಿರಿ. ಅವರ ಆರೋಗ್ಯ ಸ್ಥಿತಿ ಕುರಿತು ವಿಚಾರಿಸಿ. ನೀರಿನಿಂದ ಹರಡುವ ಸೋಂಕು ರೋಗಗಳಿಗೆ ತುತ್ತಾಗಿದ್ದಾರೆಯೇ ಎನ್ನುವುದನ್ನು ಕೇಳಿ ತಿಳಿಯಿರಿ. ಇದರಿಂದ ನಿಮ್ಮ ಮನೆ ಹತ್ತಿರದ ಪರಿಸರದ ಹಾಗು ನೀರಿನ ಗುಣಮಟ್ಟದ ಬಗ್ಗೆ ತಿಳಿಯಬಹುದು.

೩. ನೀವು ಕೊಂಡ ಘಟಕಕ್ಕೆ 'ಆಫ್ಟರ್‌ಸೇಲ್ಸ್ ಸರ್ವಿಸ್' (After Sales Service) ಹೇಗಿದೆ ಎನ್ನುವುದನ್ನು ತಿಳಿಯಿರಿ. ಆಗಾಗ ಶುಚಿಗೊಳಿಸುವುದಕ್ಕೆ ಹಾಗು ದುರಸ್ತಿ ಕಾರ್ಯಕ್ಕೆ ಎಂದೂ ಆಲಸ್ಯ ಮಾಡಬೇಡಿ.

೪. ಸ್ಥಳೀಯ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ನೀರಿನ ಗುಣಮಟ್ಟದ ಪರೀಕ್ಷೆಯ ಸೌಲಭ್ಯವಿರುತ್ತದೆ. ಪ್ರಯೋಗಶಾಲೆಯವರು ನೀಡಿದ ಫಲಿತಾಂಶ ನಿಮ್ಮ ಆಯ್ಕೆಯಲ್ಲಿ ಬಹು ಮುಖ್ಯ ಪಾತ್ರ ವಹಿಸುವುದು.

# ಚೌಚೌ

## ಶಿಕ್ಷಕರಿಲ್ಲದ ಶಾಲೆ

**ನೂ**ತನ ಹಾವೇರಿ ಜಿಲ್ಲೆಯ ಹಾನಗಲ್ ತಾಲ್ಲೂಕಿನ ನೀರಲಗಿ ಗ್ರಾಮದಲ್ಲಿ ಹಿರಿಯ ಪ್ರಾಥಮಿಕ ಶಾಲೆ ಇದ್ದು, ಈ ಶಾಲೆಯಲ್ಲಿ ಸುಮಾರು ೪೦೦ ಮಕ್ಕಳು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಶಾಲೆಯಲ್ಲಿ ಕೇವಲ ಇಬ್ಬರು ಶಿಕ್ಷಕರು ಇದ್ದಾರೆ. ಈ ಶಿಕ್ಷಕರು ೧ ರಿಂದ ೭ನೇ ತರಗತಿವರೆಗಿನ ವಿದ್ಯಾರ್ಥಿಗಳನ್ನು ನಿಭಾಯಿಸುವದೇ ದುಸ್ತರವಾಗಿರುವಾಗ ವಿದ್ಯೆ ಕಲಿಸುವದಂತು ದೂರ ಉಳಿಯಿತು. ನಮ್ಮ ಸರ್ಕಾರ ಪ್ರಾಥಮಿಕ ಶಿಕ್ಷಕಣಕ್ಕೆ ಹೆಚ್ಚು ಒತ್ತು ಕೊಡುತ್ತಿದ್ದರೂ ಇಂತಹ ಪರಿಸ್ಥಿತಿ ಇನ್ನೂ ಮುಂದುವರಿದಿದೆ.

ಈ ಬಗ್ಗೆ ಸಾರ್ವಜನಿಕ ಶಿಕ್ಷಣ ಇಲಾಖೆ ಕಣ್ತೆರೆದು ನೋಡಬಹುದೆ?

**- ಯಶವಂತ ಶಿ. ಜೈನರ**
ನೀರಲಗಿ

## ಅಧ್ಯಕ್ಷೆ ಶಕುಂತಲಾ

**ಮ**ಹಿಳೆಯೊಬ್ಬರು ಅಧಿಕಾರಕ್ಕೆ ಬಂದಾಗ ಪುರುಷರಾಡಳಿತದಿಂದ ಗಬ್ಬೆದ್ದ ಪುರಸಭೆ ಸರಿದಾರಿಗೆ ಹತ್ತೀತೆಂದು ಆಶಿಸುವುದು ಸಹಜ. ಆದರೆ ಮುದ್ದೇಬಿಹಾಳದ ಪ್ರಕರಣದಲ್ಲಿ ಇಂಥ ಆಸೆ ಹುಸಿಯಾಗಿದೆ.

ಪುರಸಭೆಯ ಅಧ್ಯಕ್ಷ ಗದ್ದುಗೆಗೆ ಏರುವ ಮುಂಚೆ ಶಕುಂತಲಾ ಹಿರೇಮಠರು ನೀಡಿದ ಆಶ್ವಾಸನೆಗಳು ಬೆಟ್ಟದಷ್ಟು, ಈಡೇರಿಸಿದ್ದು ಕಡ್ಡಿಯಷ್ಟು ಇಲ್ಲ!

ಅಕ್ರಮಗಳ ಆಗರವಾಗಿರುವ ಇಲ್ಲಿನ ಪುರಸಭೆಯನ್ನು ವಿಸರ್ಜಿಸಿ ಸಮರ್ಥ ಆಡಳಿತಾಧಿಕಾರಿಯನ್ನು ನೇಮಿಸುವುದೊಂದೇ ಬಾಕಿ ಉಳಿದಿದೆ. ಇದು ಇಲ್ಲಿನ ಜನತೆಯ ಒಕ್ಕೊರಲ ಕೂಗು.

**- ಎಚ್.ಆರ್.ಬಾಗವಾನ**
ಮುದ್ದೇಬಿಹಾಳ

## ಶಾಸಕ ಕರ್ಜಗಿ

**ರಾ**ಣೆಬೆನ್ನೂರಿನ ಶಾಸಕ ವಿ.ಎಸ್.ಕರ್ಜಗಿಯವರು ಎಲ್ಲರಂತಲ್ಲ ಎಂಬುದು ನಿಜ. ಈಗ ತಮ್ಮ ಅಧಿಕಾರ ಸ್ಥಾನ ಬಳಸಿಕೊಂಡು ತುಂಗಾ ಮೇಲ್ದಂಡೆ ಯೋಜನೆ ಕಾರ್ಯಗತಗೊಳಿಸಲು ಕಾಲ ಕೂಡಿ ಬಂದಿದೆ. ಯೋಜನೆಯಿಂದ ಈ ಭಾಗದ ಬಹುಪಾಲು ರೈತರ ಬದುಕು ಹಸನಗೊಳ್ಳಲಿದೆ. ಕರ್ಜಗಿಯವರು ಕಾರ್ಯೋನ್ಮುಖರಾಗುವರೇ?

**- ಜಿ.ಎಂ. ಮಠದ**
ರಾಣೆಬೆನ್ನೂರು

## ಕತ್ತೆಮರಿಗೆ ಹಾಲುಣಿಸುವ ನಾಯಿ



ಕುರುಗೋಡಿನ ಎ.ತಿಪ್ಪಣ್ಣನವರ ಮನೆಯಲ್ಲಿ ಕತ್ತೆಯೊಂದು ಮರಿ ಹಾಕಿದೆ. ಈಗ ತಾಯಿಕತ್ತೆ ಕಳುವಾಗಿದೆ. ಪರಿಸ್ಥಿತಿಯ ದಾರುಣತೆಯನ್ನು ಅರಿತೋ ಏನೋ ಸಮೀಪದಲ್ಲಿ ವಾಸವಾಗಿರುವ ನಾಯಿಯೊಂದು ಕತ್ತೆಮರಿಗೆ ಹಾಲುಣಿಸುತ್ತಿದೆ.

ಮನುಷ್ಯರಲ್ಲಿ ಕಾಣೆಯಾಗುತ್ತಿರುವ ದಯೆ, ಪ್ರೀತಿ, ಕರುಣೆ, ಸಹಬಾಳ್ವೆ ತತ್ವಗಳು ಪ್ರಾಣಿಗಳಲ್ಲಿ ಪ್ರಕಟಗೊಳ್ಳುವುದಕ್ಕೆ ಏನೆನ್ನಬೇಕು?

**- ಕೆ. ಬಸವರಾಜು, ಕುರುಗೋಡು**

## ಸಾರಿಗೆ ಸಂಸ್ಥೆಗೊಂದು ಸಲಹೆ

**ದೂ**ರದ ಊರುಗಳಿಗೆ ಹೋಗುವ ಕೆ.ಎಸ್.ಆರ್.ಟಿ.ಸಿ. ಬಸ್ಸುಗಳಲ್ಲಿ ಇಬ್ಬರು ಚಾಲಕರಿರುತ್ತಾರೆ. ವಿಶ್ರಾಂತಿ ಪಡೆಯುವ ಚಾಲಕನಿಗಾಗಿ ಆರು ಸೀಟುಗಳು ಮೀಸಲಾಗಿರುತ್ತವೆ. ಬೇರೆ ಪ್ರಯಾಣಿಕರಿಗೆ ಲಭ್ಯವಾಗಬಹುದಾದ ೬ ಸೀಟುಗಳನ್ನು ಹೀಗೆ ಚಾಲಕ ವಿಶ್ರಮಿಸಲು ಬಳಸುವುದರಿಂದ ಸಂಸ್ಥೆಗೆ ಬಹಳ ನಷ್ಟವಾಗುತ್ತಿದೆ. ಇದನ್ನು ತಪ್ಪಿಸಲು ಎರಡು ದಾರಿಗಳಿವೆ.

೧. ಚಾಲಕನ ಸೀಟಿನ ಮೇಲ್ಭಾಗದಲ್ಲಿ ರೈಲುಗಳಲ್ಲಿರುವಂತೆ ಆಸನ ವ್ಯವಸ್ಥೆ ಮಾಡಬಹುದು.

೨. ಚಾಲಕ ಯಾವ ಊರಿನಲ್ಲಿ ಬದಲಾಗುತ್ತಾನೋ ಅದೇ ಊರಿನಲ್ಲಿ ಇನ್ನೊಬ್ಬ ಚಾಲಕ ಸಿದ್ಧವಾಗಿದ್ದು ಮುಂದಿನ ಪ್ರಯಾಣವನ್ನು ಆತ ಮುಂದುವರಿಸಬಹುದು. ಎರಡನೇ ಚಾಲಕ ಅರ್ಧ ದಾರಿಯ ನಂತರ ಫ್ರೆಷ್ ಆಗಿ ಚಾಲನೆ ಪ್ರಾರಂಭಿಸುವುದರಿಂದ ಸುರಕ್ಷತೆ ದೃಷ್ಟಿಯಿಂದಲೂ ಅನುಕೂಲ. ಈ ಚಾಲಕರಿಗೆ ಬಸ್ ನಿಲ್ದಾಣಗಳಲ್ಲಿರುವ ವಿಶ್ರಾಂತಿ ಕೊಠಡಿಗಳನ್ನು ಒದಗಿಸಿದರೆ ಚಾಲಕರಿಗಾಗಲೀ ಸಂಸ್ಥೆಗಾಗಲೀ ಆರ್ಥಿಕ ಹೊರೆ ಬೀಳುವುದಿಲ್ಲ.

**- ಕೆ.ಆರ್. ನಂದಕುಮಾರ,**
ಸಾಗರ

# ಕೆಲಸದಾಕೆ ಸೋನುಮಾಲಿನಿ ಸಂದರ್ಶನ

**ಕೆ**ಲಸದಾಕೆಯ ಹೆಸರು ಸೋನುಮಾಲಿನಿ! ವಿಶ್ವನ ಮನೆಗೆ ಅವಳು ಬಂದಿದ್ದು ಆಕಸ್ಮಾತ್ ಆಗಿ. ಗೆಳೆಯ ರಾಮಣ್ಣನಿಗೆ ವರ್ಗವಾಯಿತು. ಅವನ ಮನೆಯಲ್ಲಿ ಕೆಲಸ ಮಾಡುತ್ತಿದ್ದ ಸೋನುಮಾಲಿನಿಯನ್ನು ವಿಶ್ವನಿಗೆ ಪರಿಚಯಿಸಿದ್ದ.

ಸೋನು ಹೆಸರಿಗೆ ತಕ್ಕಂತೆ ಇದ್ದಳು. ವಯಸ್ಸು ಇಪ್ಪತ್ತು ದಾಟಿದ್ದರೂ ತಿಳಿಯುವಂತಿಲ್ಲ. ತಿಳಿಯದಿದ್ದಾಗ ಕೇಳುವಂತಿಲ್ಲ.

''ಏನಮ್ಮಾ, ಈ ಮೊದಲು ಎಲ್ಲೆಲ್ಲಿ ಕೆಲ್ಸ ಮಾಡಿದ್ದೆ?'' ವಿಶ್ವ ಅವಳನ್ನು ಕೇಳಿದ. ಮಡದಿ ವಿಶಾಲೂ ಬಂದು ವಿಶ್ವನ ಪಕ್ಕ ಕುಳಿತಳು. ಒಂದು ವಿಧದಲ್ಲಿ 'ಸಂದರ್ಶನ'ವೇ ಶುರುವಾಗಿತ್ತು.

''ಮುರುಗನ್ ಮೆಟಲ್ ಫ್ಯಾಕ್ಟರೀಲಿ ಇದ್ದೆ ಸಾರ್. ಕೆಲಸಗಾರರು ಎದ್ದು ನಿಂತರು. ಫ್ಯಾಕ್ಟರಿ ಮುಚ್ಚಿಗಿಕೊಳ್ಳು, ನಾನು ಈಚೆ ಬಂದೆ'' ಸೋನು ವೈಯಾರದಿಂದ ಹೇಳಿದಳು.

''ರಾಮಣ್ಣೋರ ಮನೇಲಿ ಎಷ್ಟು ಸಂಬಳ ಕೊಡ್ತಾ ಇದ್ರು?'' ವಿಶಾಲೂ ಪ್ರಶ್ನಿಸಿದಳು.

''ಅವರು ನಮ್ಮೂರವರೇ ಅಕ್ಕ. ಕೈಯಲ್ಲಿ ದುಡ್ಡು ಇದ್ದಾಗೆಲ್ಲ ಕೊಡೋವರು. ಅವರ ಕೈ ಖಾಲಿ ಆದಾಗ ನಾನು ಕೆಲವು ಸಲ ಅವರಿಗೆ ಸಾಲ ಕೊಡ್ತಿದ್ದೆ''

ಈಕೆ ಭಾರೀ ಕುಳವೇ ಸರಿ ಎನ್ನಿಸಿತ್ತು. ಇವಳನ್ನು ಮನೆಗೆಲಸಕ್ಕೆ ಇಟ್ಟುಕೊಂಡರೆ ಮುಂದೆ ತನಗೆ ಸಹಾಯ ಆಗಬಹುದು ಎಂಬ ತೀರ್ಮಾನಕ್ಕೆ ವಿಶ್ವ ಬಂದ.

''ನಿನಗೆ ಸೋನುಮಾಲಿನಿ ಅಂತ ಯಾರು ಹೆಸರು ಇಟ್ಟದ್ದು?'' ಎಂದು ವಿಶ್ವ ಕೇಳಿದ ಕೂಡಲೇ ಮಡದಿ ಸಿಟ್ಟಾದಳು.

''ಅದನ್ನು ಕಟ್ಟಿಕೊಂಡು ನಿಮಗೇನು ಆಗಬೇಕ್ರಿ? ಈ ಮನೆಗೆಲಸಕ್ಕೂ ಅವಳ ಹೆಸರಿಗೂ ಏನು ಸಂಬಂಧ?''

''ಅಕ್ಕಾವರೇ, ನಮ್ತಾಯೀಗೆ ಹಿಂದಿ ಸಿನಿಮಾ ಅಂದರೆ ಪ್ರಾಣ. ನಮ್ತಾಯಿ 'ಸೀತಾ ಔರ್ ಗೀತಾ' ಸಿನಿಮಾ ನೋಡಿದ ದಿನ ನಾನು ಹುಟ್ಟಿದ್ದಂತೆ. ಅದಕ್ಕೆ ನನಗೆ ಸೋನುಮಾಲಿನಿ ಅಂತ ಹೆಸರಿಟ್ಟರು''

''ಹೇಮಾಮಾಲಿನಿ ಅಂತಾನೇ ಹೆಸರು ಇಡಬಹುದಿತ್ತಲ್ಲ?'' ವಿಶ್ವ ಮತ್ತೆ ಕೆದಕಿದ.

''ಧರ್ಮೇಂದ್ರಪ್ಪನಿಗೆ ಕೋಪ ಬರಬಹುದು ಅಂತ ಸ್ವಲ್ಪ ಬದಲಿಸಿದರು ಸಾರ್. ಹೇಮಾ ಅಂದ್ರೂ ಒಂದೇ, ಸೋನಾ ಅಂದ್ರೂ ಒಂದೇನಂತೆ?''

''ರೀ, ಇಂಟರ್‌ವ್ಯೂನಲ್ಲಿ ಕೆಲಸಕ್ಕೆ ಸಂಬಂಧಪಟ್ಟ ಪ್ರಶ್ನೆಗಳನ್ನು ಮಾತ್ರ ಕೇಳಬೇಕು'' ಎಂದು ವಿಶಾಲೂ ಎಚ್ಚರಿಕೆ ನೀಡಿದಳು.

ಸೋನುಮಾಲಿನಿ ಸುಂದರಳಾಗಿದ್ದಳು. ತಿಳಿನೀಲಿ ಸೀರೆ ಉಟ್ಟು, ಅದಕ್ಕೆ ಒಪ್ಪುವ ರವಿಕೆ ತೊಟ್ಟು, ನೀಲಾಂಬರ ತಲೆಯಲ್ಲಿಟ್ಟು ಮನೆ ಯಾಕೆ ಎಂಬಂತೆ ಸಿಂಗರಿಸಿಕೊಂಡಿದ್ದಳು.

''ನೀನು ಇಷ್ಟೆಲ್ಲಾ ಚೆನ್ನಾಗಿ ಡ್ರೆಸ್ ಮಾಡಿಕೊಂಡು ಬಂದ್ರೆ ಈ ಮನೆ ಯಜಮಾನಿ ಯಾರು ಅಂತ ನೋಡಿದ ಜನಕ್ಕೆ ಅನುಮಾನ ಬರುತ್ತೆ'' ವಿಶ್ವ ತಡೆಯಲಾರದೆ ಹೇಳಿಬಿಟ್ಟ. ಅವಳು ಮುಗುಳ್ನಕ್ಕು, ''ನಿಮಗೆ ಅನುಮಾನ



ಬರ್ದ್ರೇ ಇದ್ರೆ ಸಾಕು'' ಎಂದಳು.

ವಿಶಾಲೂಗೆ ಅಸಹನೆ ಪ್ರಾರಂಭವಾಗಿತ್ತು.

''ರೀ, ಸಬ್‌ಜೆಕ್ಟ್ ಬಿಟ್ಟು ಹೋಗಬೇಡಿ.''

''ಇಂಟರ್‌ವ್ಯೂನಲ್ಲಿ ಈ ರೀತಿ ಕೇಳ್ತಾರೆ ಕಣೆ''

''ಆದರೆ ನಮ್ಮ ಮನೇಲಿ ಕೇಳೋ ಅಗತ್ಯ ಇಲ್ಲ''

''ಮತ್ತೆ ಏನು ಪ್ರಶ್ನೆ ಹಾಕಲಿ?''

''ಸಂಬಳ, ಸಮಯ ಇದರ ಬಗ್ಗೆ ಕೇಳಿ ಸಾಕು'' ಎಂದು ವಿಶಾಲೂ ನುಡಿದಾಗ ವಿಶ್ವ ವಿಷಯಕ್ಕೆ ಬಂದ.

''ನೋಡು ಸೋನೂ....''

''ಪೂರ್ತಿ ಹೆಸರು ಕರೀರಿ ಅವಳನ್ನ''

''ನೋಡು ಸೋನೂ ಮಾಲಿನಿ, ನೀನು ಎಷ್ಟು ಸಂಬಳ ನಿರೀಕ್ಷಿಸ್ತಾ ಇದ್ದೀಯ?''

''ನಿರೀಕ್ಷೆಗೇನು ಸಾರ್? ನಾನು ಪಿ.ಯು.ಸಿ ಓದಿದ್ದೀನಿ. ಚೀಫ್ ಇಂಜನಿಯರ್, ಡಿಪಾರ್ಟ್‌ಮೆಂಟ್ ಆಫ್ ವೆಸಲ್ ಕ್ಲೀನಿಂಗ್ ಅಂಡ್ ಡ್ರೆಸ್ ವಾಷಿಂಗ್ ಅಂತ ಒಂದು ಇವತ್ತು ಇದ್ದಿದ್ರೆ ಆ ಕೆಲ್ಸ ನನಗೇ ಸಿಕ್ಕಿರೋದು. ನನಗೆ ಬಂಗ್ಲೆ, ಕಾರು ಕೊಟ್ಟು ಮನೆಗೆಲಸಕ್ಕೆ ಎರಡು ಜನಾನ ಕೊಟ್ಟಿರೋವರು''

ವಿಶ್ವ ತಬ್ಬಿಬ್ಬಾಗಿಬಿಟ್ಟ. ಇವಳು ಬಹಳ ಎತ್ತರದಲ್ಲಿ ಇದ್ದಾಳೆ ಎನ್ನಿಸಿತು. ಪ್ರತಿನಿತ್ಯ ಇವಳನ್ನು ಸ್ಕೂಟರಲ್ಲಿ ಕರೆತಂದು ಮತ್ತೆ ಮನೆಗೆ ವಾಪಸು ಕಳಿಸಬೇಕಾದ ಜವಾಬ್ದಾರಿ ತನ್ನ ಮೇಲೆ ಬೀಳಬಹುದೆಂದು ಭಯಪಟ್ಟ. ಆ ಭಯದ ಜೊತೆ ಜೊತೆಗೇ ಖುಷಿಯೂಪಟ್ಟ.

''ಸಾರ್, ನಾನು ದುರಾಸೆ ಪಡೊಲ್ಲ. ನಿಮಗೂ ಕಷ್ಟ ಇರುತ್ತೆ ಅಂತ ನನಗೆ ಗೊತ್ತು, ತಿಂಗಳಿಗೆ ೨೦೦ ರೂಪಾಯಿ ಕೊಡಿ ಸಾಕು''

ಹೋದ ಜೀವ ಬಂದಂತಾಯ್ತು. ಇಂಥ ಸುಂದರ ಹುಡುಗಿ ಗಲ್ಲು ಗಲ್ಲು ಹೆಜ್ಜೆಯಿಡುತ್ತಾ ಮನೆತುಂಬಾ ಓಡಾಡಿಕೊಂಡು ಇರಲು ಮಾತ್ರವೇ ೨೦೦ ಕೊಡಬಹುದು ಎಂದುಕೊಂಡ.

''ಆಗಬಹುದು ೨೦೦ ರೂಪಾಯಿಗೆ ನಾವು ಒಪ್ಪಿದ್ದೀವಿ. ಅಲ್ವೇನೇ ವಿಶಾಲೂ'' ಎಂದು ಮಡದಿಯ ಮುಖ ನೋಡುವ ಮೊದಲೇ ಸೋನೂ ಮಾತು ಮುಂದುವರೆಸಿದಳು.

''೨೦೦ ರೂಪಾಯಿ ಮೂಲ ವೇತನ ಸಾರ್. ಬೇಸಿಕ್ ಪೇ! ಅದಕ್ಕೆ ೧೫೦ ಪರ್ಸೆಂಟ್ ಡಿ.ಎ. ಸೇರಿಸಿ. ತುಟ್ಟಿಭತ್ಯ!''

ವಿಶ್ವ ಕ್ಯಾಲುಕುಲೇಟರ್‌ಗೆ ಹುಡುಕಾಡಿದ. ಪತ್ತೆ ಮಾಡಿ ಈಚೆಗೆಳೆದ. ಅಷ್ಟರಲ್ಲಿ ಅವಳೇ ಲೆಕ್ಕ ಮಾಡಿದ್ದಳು.

''೩೦೦ ಆಯ್ತು ಸಾರ್. ಅದನ್ನ ಲೆಕ್ಕ ಮಾಡೋಕೆ ಮಿಷೀನು ಯಾಕೆ?''

''ಹೌದು ೩೦೦ಉ. ಒಟ್ಟು ೫೦೦ ಆಯ್ತು'' ಎಂದು ಕೂಡಿದ ವಿಶ್ವನ ಮುಖ ಬಾಡಿತು. ಅವಳು ಸ್ವಲ್ಪ ಜಾಸ್ತಿ ಕೇಳುತ್ತಿದ್ದಾಳೆ ಎನ್ನಿಸಿ ಮಡದಿಯ ಮುಖ ನೋಡಿದ. ಸ್ವಲ್ಪ ಕಡಿಮೆ ಮಾಡಿಕೊಳ್ಳಮ್ಮ ಎಂದು ಕೇಳುವ ಮೊದಲೇ ಅವಳು 'ಬಾಡಿಗೆ ಭತ್ಯ' ಕ್ಕೆ ಬಂದಳು.

''ಎಚ್.ಆರ್.ಎ. ೧೦೦ ರೂಪಾಯಿ ಸೇರಿಸಿಕೊಳ್ಳಿ''

''ಏನಮ್ಮಾ ಇದು? ೬೦೦ ರೂಪಾಯಿ ಆಯ್ತಾ?''

''ಸಿಟಿ ಅಲೋಯೆನ್ಸ್ ೫೦ ರೂಪಾಯಿ ಸೇರ್ಸಿ ಸಾರ್''

''ಹಾಂ! ೬೫೦ ಕೊಡಬೇಕಾ?'' ವಿಶ್ವನಿಗೆ ಭಯ ಶುರುವಾಯಿತು. ಯಾವುದೋ ಫ್ಯಾಕ್ಟರಿಯಲ್ಲಿ ಈ ಮೊದಲು ಕೆಲಸ ಮಾಡುತ್ತಿದ್ದೆ ಎಂದವಳು ಹೇಳಿದಾಗಲೇ ಹುಶಾರಾಗಬೇಕಿತ್ತು.

''ದಿನಕ್ಕೆ ಎರಡು ಸಲ ಕೆಲ್ಸಕ್ಕೆ ಬರಬೇಕಾಗುತ್ತಾ?''

''ಹೌದಮ್ಮಾ, ಊಟ ಆದ ಮೇಲೆ ಪಾತ್ರೆಗಳು ಇರುತ್ತಲ್ಲ. ಇಲ್ಲ, ನೀನು ತೊಳೀಬೇಕು ಅಥವಾ ನಾನು ತೊಳೀಬೇಕು'' ಎಂದ ವಿಶ್ವ.

''ಸಾಕು ಸುಮ್ನಿರ್ರೀ, ಮನೆ ವಿಷಯ ಎಲ್ಲರಿಗೂ ಹೇಳಬೇಡಿ'' ಎಂದು ವಿಶಾಲೂ ದಬಾಯಿಸಿದಳು.''

''ಹಾಗೆ ಎರಡು ಸಲ ಬರಬೇಕಾದರೆ ೫೦ ರೂಪಾಯಿ SPLIT DUTY ALLOWANCE ಅಂತ ಸೇರಿಸಬೇಕು ಸಾರ್''

ಅವಳ ಜ್ಞಾನ ವೈಶಾಲ್ಯ ಕಂಡು ವಿಶ್ವ ಹಿಗ್ಗಿದ. ಆದರೆ ಆ ಹಣ ತಾನೇ ಕೊಡಬೇಕಾಗುತ್ತದೆ ಎಂದು ತಿಳಿದಾಗ ಕುಗ್ಗಿದ.

''ಅಲ್ಲಿಗೆ ೭೦೦ ಆಯ್ತು'' ಎಂದಳು ವಿಶಾಲೂ ಮಾತು ಮುಗಿಸಲು.

''ಮುಗೀತಾ?''

''ಅಷ್ಟೇ ಅಕ್ಕ. ದಿನಕ್ಕೆ ೧೦ ರೂಪಾಯಿ ಟಿ.ಎ. ಕೊಟ್ರೆ ಆಯ್ತು. ಬಸ್ ಚಾರ್ಜು''.

''ಮುನ್ನೂರು ರೂಪಾಯಿ?''

''ಮಳೆ ಬಂದ ದಿನ ಆಟೋದಲ್ಲಿ ಬಂದು ಹೋಗ್ತೀನಿ''

''ಒಟ್ಟು ಎಷ್ಟಾಗುತ್ತೆ?'' ವಿಶ್ವ ಕುತೂಹಲ ತಡೆಯದೆ ಕೇಳಿದ.

''ಮುನ್ನೂರು ಕೊಡಿ ಸಾಕು. ನಾನು ದುರಾಸೆ ಪಡೋ ಹೆಂಗಸಲ್ಲ''.

''ಅಲ್ಲಮ್ಮಾ, ಸಾವಿರ ರೂಪಾಯಿ ಮನೆಗೆಲಸದವಳಿಗೆ ಕೊಟ್ರೆ ನಮ್ಮ ಗತಿ ಏನು?''

''ಸಾರ್, ಸರ್ಕಾರ ಈಗ ಕನಿಷ್ಠ ವೇತನ ದಿನಕ್ಕೆ ೪೦ ಅಂತ ಹೇಳಿದೆ. ಆ ಪ್ರಕಾರ ನೀವು ೧೨೦೦ ಕೊಡಬೇಕಾಗುತ್ತೆ''

''ಸರಿ ಬಿಡಮ್ಮ. ನೋಡೋಣ. ಯೋಚನೆ ಮಾಡಿ ಹೇಳಿ ಕಳಿಸ್ತೀವಿ'' ಎಂದಳು ವಿಶಾಲೂ.

''ವರ್ಷಕ್ಕೆ ಎರಡು ಸೀರೆ. ದೀಪಾವಳಿಗೊಂದು, ಗಣೇಶ ಅಥವಾ ಯುಗಾದಿಗೊಂದು''.

''ಕೊಡ್ತೀನಿ, ಇವೆ''

''ಹಳೇದಲ್ಲಕ್ಕ. ಹೊಸವು. ನೀವು ಉಟ್ಟ ಸೀರೇನ ನಾನು ಉಟ್ರೆ ಅಣ್ಣಾವ್ರು ಸೀರೆ ನೋಡಿ ನನ್ನ ಮಿಸ್ಟೇಕ್ ಮಾಡಿಕೊಂಡರೆ ಕಷ್ಟ''

ವಿಶ್ವ ಉಗುಳು ನುಂಗಿದ. ಅವಳನ್ನು ಆಚೆ ಕಳಿಸುವುದು ಹೇಗೆ ಎಂಬುದು ತಿಳಿಯದೆ ಚಡಪಡಿಸಿದ.

''ನೋಡು ಸೋನುಮಾಲಿನಿ. ನಂಗ್ಯಾಕೋ ಸ್ವಲ್ಪ ದುಬಾರಿ ಅನ್ಸುತ್ತೆ'' ಎಂದ ವಿಶ್ವ ಮಡದಿಯತ್ತ ನೋಡಿದ.

''ಈ ಫಸ್ಟ್ ಒಳಗೆ ನನ್ನ ನೀವು ಕರ್ಕೊಂಡ್ರೆ ಶೇಕಡಾ ೧೦ ರಿಯಾಯಿತಿ ತೋರಿಸ್ತೀನಿ ಸಾರ್. ಸೀರೆ ಮಾತ್ರ ಕೊಡಿ. ರವಿಕೆ ನಂದೇ ಇರಲಿ''

''ಹೌದೌದು, ರವಿಕೆ ಹೊಲಿಸಿ ಕೊಡೋದು ಅಂದ್ರೆ ನಮಗೆ ಸೈಜು ತಿಳಿಯೊಲ್ಲ'' ಎಂದು ಬಾಯಿತಪ್ಪಿ ವಿಶ್ವ ಹೇಳಿದಾಗ ವಿಶಾಲೂ ಕೆರಳಿದಳು.

''ಇರ್ಲಿ ನಡಿಯಮ್ಮ, ತಿಳಿಸ್ತೀವಿ'' ಎಂದಳು.

''ಮಳೆ ಬರ್‍ತಾ ಇದೆ ಅಕ್ಕ. ೨೦ ರೂಪಾಯಿ ಕೊಡಿ ಅಥವಾ ಛತ್ರಿ ಇದ್ರೆ ಕೊಡಿ''

ಛತ್ರಿ ಕೊಡುವುದು ಅಪಾಯ ಎನ್ನಿಸಿತು. ಅವಳು ಮತ್ತೆ ಬಾರದೆಹೋದರೆ ಛತ್ರಿ ಅನ್ಯಾಯ. ವಾಪಸ್ ಕೊಡಲು ಬಂದರೆ ಮತ್ತೆ ಅವಳಿಗೆ ಆಟೋ ಚಾರ್ಜು ಕೊಡಬೇಕು. ವಿಶಾಲೂ ಬಹಳ ಹೊತ್ತು ಯೋಚಿಸಿ ಅವಳ ಕೈಲಿ ೨೦ ರೂಪಾಯಿ ಹಾಕಿ ಕೈಮುಗಿದಳು.

○ ಎಂ. ಎಸ್. ನರಸಿಂಹಮೂರ್ತಿ

# ಕೃಷಿಯಲ್ಲಿ ಸ್ವಾವಲಂಬನೆ : ಒಂದು ಚಿಂತನೆ

○ ವಿಜಯ್ ಅಂಗಡಿ ಎಂ.ಎಸ್ಸಿ (ಕೃಷಿ)
ಪ್ರಸಾರ ನಿರ್ವಾಹಕರು
ಕೃಷಿರಂಗ ವಿಭಾಗ,
ಆಕಾಶವಾಣಿ, ಹಾಸನ - ೫೭೩ ೨೦೧

ನಮ್ಮ ಪೂರ್ವಜರೆಲ್ಲಾ ಸಂಪೂರ್ಣ ಸ್ವಾವಲಂಬಿಗಳು. ಪ್ರತಿಯೊಂದು ಸಮಸ್ಯೆಗೂ ತಮ್ಮದೇ ಆದ ಮಾರ್ಗವನ್ನು ಅವರು ಹುಡುಕಿ ಪರಿಹರಿಸಿಕೊಳ್ಳುತ್ತಿದ್ದರು. ಆದರೆ ನಾವಿಂದು ಸಂಪೂರ್ಣ ಪರಾವಲಂಬಿಗಳಾಗಲು ಹೊರಟಿದ್ದೇವೆ. ಒಂದಲ್ಲಾ ಒಂದಕ್ಕೆ ನಾವು ಅನೇಕರ ಮೇಲೆ ಅವಲಂಬಿಸಬೇಕಾಗಿದೆ.

'ಈ ಜಗತ್ತಿಗೆ ಕಾಲಿಟ್ಟ ಮೊದಲ ಮಾನವನೇ ರೈತ, ಆತನ ಕಸುಬಿನ ಮೇಲೆ ನಮ್ಮೆಲ್ಲಾ ಜೀವನ ಅವಲಂಬನೆ 'ಆಗಿದೆ' ಎಂದಿದ್ದಾರೆ ಎಮರ್‌ಸನ್. ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಹೇಳಿರುವಂತೆ, 'ಎಲ್ಲಕ್ಕೂ ರೈತರು ಬಿಡಿಬಿಡಿಯಾಗಿ ಶೋಷಕರ, ಲಾಭ ಬಡುಕರ ಸಂಕೀರ್ಣ ಜಾಲಗಳಿಗೆ ಸಿಕ್ಕಿಹೋಗಿದ್ದಾರೆ'. ಈ ವಿಚಾರವು ಇಂದು ಇನ್ನೂ ಹೆಚ್ಚು ಪ್ರಸ್ತುತವಾಗಿದೆ. ಪ್ರತಿಯೊಂದು ಹಂತದಲ್ಲಿ ರೈತ ಕಡೆಗಣಿಸಲ್ಪಟ್ಟಿದ್ದಾನೆ. ದವಸ ಧಾನ್ಯಗಳನ್ನು ತನಗೆ, ತನ್ನ ಕುಟುಂಬಕ್ಕಾಗಿ ಬೆಳೆದು, ಇತರರ ಹೊಟ್ಟೆ ತುಂಬಿಸುವ ರೈತನ ಶ್ರಮವನ್ನು ನೆನಪಿಸುವವರೇ ಕಡಿಮೆ. ಹಾಸನ ಜಿಲ್ಲೆಯ ಆಲೂರು ತಾಲೂಕಿನ ಚನ್ನಾಪುರ ಗ್ರಾಮದ ಹಿರಿಯ ಅನುಭವಿ ರೈತರಾದ ಚಂದ್ರಶೇಖರ್ ಅವರು ಹೇಳುವಂತೆ 'ಯಾವ ರೈತನೂ ಲಾಭಕ್ಕಾಗಿ, ಹಣಕ್ಕಾಗಿ ಬೇಸಾಯ ಮಾಡುತ್ತಿಲ್ಲ, ತನಗೆ ತನ್ನ ಸಂಸಾರಕ್ಕೆ ಬೆಳೆ ಪಡೆದು ಹೆಚ್ಚಾದುದನ್ನು ಮಾರಾಟ ಮಾಡಿ ಸಿಗುವ ಹಣದಲ್ಲೇ ತೃಪ್ತಿ ಪಡುತ್ತಿರುವುದರಿಂದ ನಮ್ಮ ಭಾರತದ ಕೃಷಿ ವಾಣಿಜ್ಯಗೊಂಡಿಲ್ಲ. ಒಂದು ಸಮಯ ನಮ್ಮ ರೈತರೇನಾದರೂ ವ್ಯಾಪಾರೀ ಮನೋಭಾವನೆಯಲ್ಲಿ ಕೃಷಿ ಕೈಗೊಂಡರೆ ಪ್ರಪಂಚವೇ ಅಲ್ಲೋಲ ಕಲ್ಲೋಲವಾದೀತು' ಎನ್ನುತ್ತಾರೆ.

## ಸಂಕರ ತಳಿಗಳು

ಆಧುನಿಕ ಬೇಸಾಯ ವಿಜ್ಞಾನವು ನಮ್ಮ ಕೃಷಿಕರನ್ನು ಹೆಚ್ಚೆಚ್ಚು ಪರಾವಲಂಬಿಗಳಾಗುವಂತೆ ಪ್ರೇರೇಪಿಸುತ್ತಿದೆ. ಉತ್ಕೃಷ್ಟವಾದ ನಾಟಿ ತಳಿಗಳನ್ನು ಬಳಸುತ್ತಿದ್ದ ರೈತರು ಈಗ ಸಂಕರ ತಳಿಗಳ ಆಯ್ಕೆಗೆ ಮಾರು ಹೋಗಿದ್ದಾರೆ. ರೋಗ-ಕೀಟಗಳ ಬಾಧೆಯನ್ನು ಹೆಚ್ಚಾಗಿ ಸಹಿಸಿಕೊಂಡು ಸಂತೃಪ್ತಿಯ ಇಳುವರಿಯನ್ನು ಕೊಡುತ್ತಿದ್ದ ಸ್ಥಳೀಯ ತಳಿಗಳನ್ನು ಕಡೆಗಣಿಸಲಾಗಿದೆ. ದೂರದ ಪಟ್ಟಣಕ್ಕೆ ಹೋಗಿ ದಿನವಿಡೀ ಸಮಯ ಹಾಳು ಮಾಡಿ ಕೊಂಡಾದರೂ ಹೈಬ್ರಿಡ್ ತಳಿಗಳ ಬೀಜಗಳನ್ನು ಖರೀದಿಸಿಕೊಂಡು ಬಳಸುವ ರೈತರು ಹೆಚ್ಚುತ್ತಿದ್ದಾರೆ. ನಿಜ ಬೆಲೆಗಿಂತ ಮೂರ್‍ನಾಲ್ಕು ಪಟ್ಟು ಹೆಚ್ಚು ಬೆಲೆಯನ್ನಿಟ್ಟರೂ ಕೊಳ್ಳುವ ಚಪಲ ನಮ್ಮ ಕೃಷಿಕರಲ್ಲಿ ಬಹಳವಾಗಿದೆ.

## ಗೊಬ್ಬರಗಳ ಬಳಕೆ

ರಾಸಾಯನಿಕ ಗೊಬ್ಬರಗಳ ಖರೀದಿ ಮತ್ತು ಬಳಕೆಯಲ್ಲಿ ಕೃಷಿಕರ ಮನೋಭಾವನೆ ಹಿಂದೆ ಇದ್ದದ್ದಕ್ಕಿಂತ ಈಗ ಸಾಕಷ್ಟು ಬದಲಾವಣೆಯಾಗಿದೆ. ಮನೆಯಲ್ಲೇ ಜಾನುವಾರುಗಳನ್ನು ಸಾಕಿ, ಅನೇಕ ಸತ್ವಾಂಶಗಳ ಸಗಣಿಗಂಜಲನ್ನು ಕೂಡಿ ಹಾಕಿ-ಅವುಗಳ ಪಾಲನೆಪೋಷಣೆ ಮಾಡುವುದು ಅನೇಕರಿಗೆ ಹಿಡಿಸುತ್ತಿಲ್ಲ. ಅದರಲ್ಲೂ ನಮ್ಮ ನಾಟಿ ತಳಿಗಳನ್ನು ಕಡೆಗಣಿಸಿ, ನಮ್ಮಲ್ಲಿ ಕಷ್ಟಪಟ್ಟು ಹೊಂದಿಕೊಳ್ಳುವಂತಹ ವಿದೇಶಿ ತಳಿಗಳನ್ನು ತಂದು ಸಾಕಲಾಗುತ್ತಿದೆ. ಹೊಲದಲ್ಲಿ ಲಭಿಸುವ ಸಾವಯವ ಪದಾರ್ಥಗಳಿಂದ ಗೊಬ್ಬರ ತಯಾರಿಸದೇ ಅವುಗಳನ್ನು ಸುಟ್ಟು ಬೂದಿಯನ್ನಾಗಿ ಮಾಡಲಾಗುತ್ತಿದೆ. ಸಸ್ಯ ಮತ್ತು ಪ್ರಾಣಿ ಜನ್ಯ ಸಾವಯವ ಪದಾರ್ಥಗಳನ್ನು

**ದಿನೇ ದಿನೇ ನಾವು ಹೆಚ್ಚೆಚ್ಚು ಪರಾವಲಂಬಿಗಳಾಗುತ್ತಿದ್ದೇವೆ. ಸ್ವದೇಶದ ಉತ್ಕೃಷ್ಟ-ಸ್ವಾದಿಷ್ಟ ತಳಿಗಳನ್ನು ಕಳೆದುಕೊಳ್ಳುತ್ತಿದ್ದೇವೆ. ಕಡಿಮೆ ಸತ್ವಾಂಶದ ಆಹಾರ ಧಾನ್ಯಗಳು ಹೈಬ್ರಿಡ್ ತಳಿಗಳು ಹೆಚ್ಚು ವಿಸ್ತೀರ್ಣವನ್ನು ಆಕ್ರಮಿಸಿ ಮನುಷ್ಯರಲ್ಲೂ ರೋಗ ನಿರೋಧಕ ಶಕ್ತಿ ಕಡಿಮೆ ಆಗುತ್ತಿದೆ. ಅಧಿಕವಾಗಿ ರಾಸಾಯನಿಕ ಗೊಬ್ಬರ-ಔಷಧಿಗಳನ್ನು ಬಳಸಿ ಶುಚಿಯಾದ ವಾತಾವರಣವನ್ನು ಕಲುಷಿತಗೊಳಿಸುತ್ತಿದ್ದೇವೆ. ಮಾರಾಟದಲ್ಲಿ ಮಧ್ಯವರ್ತಿಗಳು ಪ್ರವೇಶಿಸಿರುವುದರಿಂದ ತಕ್ಕ ಬೆಲೆ ಸಿಗದೇ ರೈತ ಮುಂದೆ ಬರಲು ಆಗುತ್ತಿಲ್ಲ. ಪರಾವಲಂಬಿಗಳಾಗುತ್ತಿರುವುದೇ ಈ ಎಲ್ಲಾ ಬೆಳವಣಿಗೆಗೆ ಕಾರಣ. ಇದಕ್ಕೆ ಪರಿಹಾರ ಸ್ವಾವಲಂಬನೆ ಮತ್ತು ಸಹಕಾರಿ ಮಾರ್ಗ.**

## ಐದು ಸೂತ್ರಗಳು

| ಪರಾವಲಂಬಿ | ಸ್ವಾವಲಂಬಿ |
|---|---|
| ೧. ಹೈಬ್ರಿಡ್ ತಳಿಗಳು | ೧. ಸುಧಾರಿತ ನಾಟಿ ತಳಿಗಳು |
| ೨. ರಾಸಾಯನಿಕ ಗೊಬ್ಬರಗಳು | ೨. ಸಸ್ಯ ಜನ್ಯ ಮತ್ತು ಪ್ರಾಣಿ ಜನ್ಯ ಸತ್ವಯುತ ಸಾವಯವ ಗೊಬ್ಬರಗಳು |
| ೩. ರಾಸಾಯನಿಕ ಔಷಧಿಗಳು | ೩. ಸಸ್ಯಮೂಲಿಕೆಗಳು |
| ೪. ಮಧ್ಯವರ್ತಿಗಳ ಮಾರಾಟ ವ್ಯವಸ್ಥೆ | ೪. ಸಹಕಾರಿ ಮಾರಾಟ ವ್ಯವಸ್ಥೆ |
| ೫. ವಿದೇಶಿಗಳಿಗೆ ರಫ್ತು | ೫. ಸ್ವದೇಶಗಳ ಮಾರುಕಟ್ಟೆಯನ್ನು ಸುಧಾರಿಸಿ ಬಲಪಡಿಸುವುದು. |

ನಂಬಿಕೆ
ಉತ್ತರಿಸುತ್ತವೆ
ನನ್ನ
ಕವನಗಳು
ಗೆಳತಿಯ
ಮೌನಪುಟದ
ಪ್ರಶ್ನೆಗಳಿಗೆ
- ಜೆ. ಪ್ರೇಮಾನಂದ

ಬಳಸುವತ್ತ ಹೆಚ್ಚು ಗಮನ ಕೊಡದೇ ಕೃತಕ ಗೊಬ್ಬರಗಳ ಚಮತ್ಕಾರಕ್ಕೆ ಮರುಳಾಗಿ ಇವುಗಳನ್ನು ಉಪ್ಪಿನಕಾಯಿಯಂತೆ ಬಳಸುವ ಬದಲಿಗೆ ಊಟದಂತೆ ಉಪಯೋಗಿಸುತ್ತಿದ್ದಾರೆ.

### ಔಷಧಿಗಳ ಉಪಯೋಗ

ರಾಸಾಯನಿಕ ಔಷಧಿಗಳ ಬಳಕೆಯಲ್ಲಿ ನಮ್ಮ ರೈತರು ಪೂರ್ಣ ಪರಾವಲಂಬಿಗಳೇ ಎನ್ನಬಹುದು. ಸಸ್ಯಗಳಿಗೆ ಬಾಧಿಸುವ ರೋಗ-ಕೀಟಗಳ ಹತೋಟಿಗೆ ಕಟು ವಿಷಯುಕ್ತ ರಾಸಾಯನಿಕಗಳನ್ನು ಬಳಸಿ ವಾತಾವರಣವನ್ನು ಕಲುಷಿತಗೊಳಿಸಿ ಇರುವ ಪರಾವಲಂಬಿ ಜೀವಿಗಳನ್ನು ಸಾಯಿಸುತ್ತಿದ್ದಾರೆ. ಹೀಗಾಗಿ ಹೆಚ್ಚುತ್ತಿರುವ ಹಾನಿಕಾರಕ ಕೀಟಗಳನ್ನು ನಿಯಂತ್ರಿಸಲು ದುಬಾರಿ ಔಷಧಿಗಳನ್ನು ತಂದು ಸಿಂಪಡಿಸಲಾಗುತ್ತಿದೆ. ಬೀಜಕ್ಕೆ ಉಪಚರಿಸಿ, ಮಣ್ಣಿಗೆ ಹಾಕಿ, ಬೆಳೆಗೆ ಸಿಂಪಡಿಸಿ ರೋಗ-ಕೀಟ ಹೋದವಲ್ಲಾ ಎಂದು ನಿಟ್ಟುಸಿರು ಬಿಡುತ್ತಾರೆ. ಆದರೆ ಈ ಕೀಟಗಳನ್ನು ಸೃಷ್ಟಿಯು ಇನ್ನಷ್ಟು ಬಲಿಷ್ಠವಾಗಿ ರೂಪಿಸಿ ಔಷಧಿಗಳಿಗೆ ಬಗ್ಗದಂತೆ ಮಾಡುತ್ತಿದೆ. ಅನುಭವಿ ರೈತರೊಬ್ಬರ ಹೇಳಿಕೆಯಂತೆ 'ನಮ್ಮ ಭೂಮಿಯನ್ನು ತಾಯಿಯಂತೆ ಪರಿಗಣಿಸಿ ಉಪಚರಿಸಿದರೆ ತೊಂದರೆ ಇಲ್ಲ, ಇಲ್ಲವಾದರೆ ಮುಂದೆ ಎದುರಾಗುವ ಸಮಸ್ಯೆಗಳನ್ನು ನಾವು ಅನಿವಾರ್ಯವಾಗಿ ಅನುಭವಿಸಲೇಬೇಕು' ಎನ್ನುವುದು ಚಿಂತಿಸಬೇಕಾದ ವಿಚಾರ.

### ಮಾರಾಟ

ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡುವ ವಿಚಾರದಲ್ಲಿ ನೋಡುವುದಾದರೆ ಬಹುಪಾಲು ಮಧ್ಯವರ್ತಿಗಳ ಹಿಡಿತದಲ್ಲಿದೆ. ಹಗಲಿರುಳು ದುಡಿದು ಮೈ ಹಣ್ಣಾಗಿಸಿಕೊಂಡ ರೈತನಿಗೆ ಸಿಗುವುದಕ್ಕಿಂತ ಹೆಚ್ಚು ಲಾಭವನ್ನು ಮಧ್ಯವರ್ತಿಯು ತನ್ನ ಅಲ್ಪ ಶ್ರಮದಿಂದ ಪಡೆಯುತ್ತಿದ್ದಾನೆ. ಎಲ್ಲಾ ಕೃಷಿ ಉತ್ಪನ್ನಗಳಿಗೆ ರೈತನಿಂದು ಪರಾವಲಂಬಿಯ ಮಾರಾಟ ವ್ಯವಸ್ಥೆಯಲ್ಲಿ ಸಿಲುಕಿದ್ದಾನೆ. ಸಹಕಾರಿ ತತ್ವದ ಮಾರಾಟ ಮಾರ್ಗ ಇನ್ನೂ ಕ್ಷಿಪ್ರವಾಗಿ ಬೆಳೆಯಬೇಕು. ಊರು-ಊರಿಗೊಂದು ಸಹಕಾರಿ ಮಾರಾಟ ಸಂಘಗಳು ಸ್ಥಾಪನೆ ಆದರೆ ಮಾತ್ರ ಬೆವರು ಸುರಿಸಿದ ರೈತನಿಗೆ ತಕ್ಕ ಪ್ರತಿಫಲ ಸಿಗಬಹುದು. ಇದಕ್ಕಾಗಿ ರೈತರಲ್ಲಿ ಒಗ್ಗಟ್ಟು ಬೇಕೇ ಬೇಕು.

### ಸ್ವಂತ ಶ್ರಮ

ಕೃಷಿಯಲ್ಲಿ ಇತ್ತೀಚೆಗೆ ಅನೇಕ ಕಡೆ ಸ್ವತಃ ಜಮೀನಿನ ಮಾಲಿಕ ಮತ್ತು ಆತನ ಕುಟುಂಬದವರು ನೇರವಾಗಿ ಕೆಲಸಗಳಲ್ಲಿ ತೊಡಗದೇ ಸ್ವಪ್ರತಿಷ್ಠೆಯಿಂದಲೋ ಅಥವಾ ಉನ್ನತ ವಿದ್ಯಾಭ್ಯಾಸದಿಂದಲೋ ಆಳುಗಳ ಮೇಲೆ ಪೂರ್ಣವಾಗಿ ಅವಲಂಬನೆಯಾಗುತ್ತಿದ್ದಾರೆ. 'ತಾನು ಮಾಡಿದ್ದು ಉತ್ತಮ, ಮಗ ಮಾಡಿದ್ದು ಮಧ್ಯಮ, ಆಳು ಮಾಡಿದ್ದು ಹಾಳು' ಎನ್ನುವ ನಾಣ್ಣುಡಿಯಂತೆ ಆದಷ್ಟು ಕೃಷಿಕರು ಪರರ ಮೇಲೆ ಅವಲಂಬನೆಯಾಗದೇ ತಮ್ಮ ಸ್ವಂತ ಪರಿಶ್ರಮದಿಂದ ಕೃಷಿ ಕೆಲಸಗಳನ್ನು ಮಾಡಿಕೊಂಡರೆ ಕೃಷಿ ಸಂತೃಪ್ತಿಕೊಡುವ ಕಸುಬಾಗುವುದು. ●



ಹಲಸು : ಏನನ್ನೂ ಬೇಡದ ಫಲವೃಕ್ಷ

# ಹಳ್ಳೂರಿನಲ್ಲಿ ಹಾಳಾಗುತ್ತಿರುವ ಕಲಾಕುಸುಮ



ವಿಶ್ವೇಶ್ವರ ದೇವಾಲಯ

**ಬಾ**ಗಲಕೋಟೆಯಿಂದ ಹತ್ತು ಕಿಲೋ ಮೀಟರ್ ದೂರದಲ್ಲಿನ 'ಹಳ್ಳೂರು' ಎಂಬ ಗ್ರಾಮ ಗಮನ ಸೆಳೆಯುವುದು ಇಲ್ಲಿರುವ ಬಸದಿ ಮತ್ತು ವಿಶ್ವೇಶ್ವರ ದೇವಾಲಯಗಳಿಂದ. ಸುಮಾರು ಎಂಟನೆಯ ಶತಮಾನದಲ್ಲಿ ರಾಷ್ಟ್ರಕೂಟರಿಂದ ನಿರ್ಮಾಣವಾದ ಜೈನ ಬಸದಿ ಸಂಪೂರ್ಣವಾಗಿ ಮೂಲೆಗುಂಪಾಗಿದ್ದರೆ, ವಿಶ್ವೇಶ್ವರ ದೇವಾಲಯ ಸಾರ್ವಜನಿಕರ ಸ್ವತ್ತಾಗಿ ಮೂಲ ರೂಪವನ್ನ ಕಳೆದುಕೊಂಡಿದೆ. ಈ ದೇವಾಲಯವನ್ನು ಸ್ಥಳೀಯರು ಬಸವೇಶ್ವರ ದೇವಾಲಯವೆಂದು ಗುರುತಿಸುತ್ತಾರೆ.

**ವಿನ್ಯಾಸ** : ತ್ರಿಚಲ ವಿಮಾನವನ್ನು ಹೊಂದಿದ ಈ ದೇವಾಲಯ ಅಂತರಾಳ, ಗೂಢಮಂಟಪ ಮತ್ತು ಸಭಾಮಂಟಪವನ್ನು ಹೊಂದಿದೆ. ಎದುರು ಬದಿರಿನಲ್ಲಿ ಎರಡು ಮುಖಮಂಟಪವನ್ನ ನಾವಿಲ್ಲಿ ಕಾಣಬಹುದು. ಉತ್ತರ ಮತ್ತು ದಕ್ಷಿಣ ಭಾಗದ ಭಿತ್ತಿಗಳಲ್ಲಿ ಸರಳ-ಸುಂದರವಾದ ಹನ್ನೆರಡು ಸ್ತಂಭಗಳಿವೆ. ಅಲಂಕೃತವಾದ ಈ ಕುಬ್ಬಾಕಾರದ ಸ್ತಂಭಗಳು ಗಮನೀಯ. ಈ ಆಲಯ ೭೦x೩೦ ಅಡಿ ವಿಸ್ತೀರ್ಣದಲ್ಲಿದ್ದು ಕೆಂಪುಕಲ್ಲಿನಿಂದ ಕಟ್ಟಲ್ಪಟ್ಟಿದೆ. ಈ ಆಲಯ ಚೋಳರ (ಕ್ರಿ.ಶ. ೮೭೦-೧೦೭೦) ಕಾಲದಲ್ಲಿ ನಿರ್ಮಾಣವಾಗಿದೆ ಎಂದು ಇತಿಹಾಸಕಾರರು ನಿರ್ಧರಿಸಿರುವರು.

ಇಲ್ಲಿ ಎರಡು ಶಾಸನಗಳು ಲಭ್ಯವಾಗಿವೆ. ಗೋಡೆಯಲ್ಲಿರುವ ಸುಮಾರು ಕ್ರಿ.ಶ. ೧೧ ನೇ ಶತಮಾನದ ಶಾಸನ ಅಪೂರ್ಣವಾಗಿದ್ದು ಸ್ಪಷ್ಟವಾಗಿ ಗುರುತಿಸಲಾಗುವುದಿಲ್ಲ. ಹೊರ ಭಾಗದಲ್ಲಿರುವ ಕಲ್ಯಾಣ ಚಾಲುಕ್ಯ ಒಂದನೆಯ ಜಗದೇಕ ಮಲ್ಲನ (೧೦೩೩-೩೪) ಶಾಸನ ಅಸ್ಪಷ್ಟವಾಗಿದ್ದು ''ಅರಸನು ಕೊಲ್ಲಿಪಾಕಿಯಲ್ಲಿ ಬೀಡು ಬಿಟ್ಟಾಗ ಮಹಾಸಾಮಂತ ನಾಗಾತಿಯ ರಸನಿಂದ ಪುರದಕೇರಿಯ ದೇವರಿಗೆ ಭೂದಾನ'' ಎಂಬ ವಿಷಯವನ್ನು ಹೇಳುತ್ತದೆ.

ಇಷ್ಟೆಲ್ಲಾ ವಿಶೇಷಗಳ ಈ ದೇವಾಲಯ ಪ್ರವಾಸಿಗರಿಂದ ಹಾಗೂ ಪ್ರಾಚ್ಯ ಇಲಾಖೆಯಿಂದ ದೂರು ಉಳಿದಿರುವುದು ವಿಷಾದನೀಯ.

○ **ದ.ರಾ.ಪುರೋಹಿತ್**
ಕಲಾದಗಿ

ವೃದ್ಧರು ಹಾಗೂ ನವಪೀಳಿಗೆಗೆ

## ಗುಟಕಾ ತಿನ್ನುವ ಸ್ಪರ್ಧೆ !

ಇದು ಒಂದು ಒಳ್ಳೆಯ ಸುಸಂಧಿ, ಕಳೆದುಕೊಳ್ಳಬೇಡಿ.

1. ಪ್ರಥಮ ಬಹುಮಾನ : ಮೃತ್ಯು
2. ದ್ವಿತೀಯ ಬಹುಮಾನ : ನಪುಂಸಕತ್ವ
3. ತೃತೀಯ ಬಹುಮಾನ : ಕ್ಯಾನ್ಸರ್

ಪ್ರವೇಶ ಶುಲ್ಕ : 4-00, 1-50, 1-25

ಪ್ರವೇಶ ಪತ್ರ ದೊರೆಯುವ ಸ್ಥಳ. ಪಾನಬೀಡಾ ಅಂಗಡಿ ಹಾಗೂ ಕಿರಾಣಿ ಅಂಗಡಿ.

ಬಹುಮಾನ ವಿತರಣಾ ಸಮಾರಂಭ ಮಾನ್ಯ ಶ್ರೀಯಮರಾಜ ಇವರ ಅಮೃತ ಹಸ್ತದಿಂದ ನೆರವೇರುವುದು.

ಸಮಾರಂಭ ನಡೆಯುವ ಸ್ಥಳ : ''ಸ್ಮಶಾನಭೂಮಿ''

ಗುಟಕಾ ತಿನ್ನುವ ಎಲ್ಲರಿಗೂ, ಆದರದ ಆಮಂತ್ರಣ.

ವಿಳಾಸ:
ಯಮರಾಜ ಕಮೀಟಿ, ಸ್ಮಶಾನಭೂಮಿ

ಸ್ಥಳದಾನ : **ಸಿ.ಎಸ್.ಮಠ, ಅರ್ಜುಣಗಿ**

## ಈ ಹುಡುಗನನ್ನ ಹೇಗೆ ನಂಬಲಿ?

ನನ್ನ ಒಬ್ಬ ಹುಡುಗ ತುಂಬಾ ವರ್ಷದಿಂದ ಪ್ರೀತಿಸುತ್ತಿದ್ದ. ನಾನು ಒಪ್ಪಿಗೆ ಕೊಟ್ಟೆ. ಮನೆಯಲ್ಲಿ ಮದುವೆ ವಿಚಾರ ಮಾಡಿದ. ತುಂಬಾ ವರದಕ್ಷಿಣೆ ಕೇಳಿದ. ನಮ್ಮಿಂದ ಸಾಧ್ಯವಾದಷ್ಟು ಕೊಡುತ್ತೇವೆಂದರೆ ಅದಕ್ಕೆ ಅವನು ಒಪ್ಪಲಿಲ್ಲ. ೨ ವರ್ಷಗಳ ಹಿಂದೆ ೪ ಜನರ ಮುಂದೆ ಸಂಬಂಧ ಕಳೆದು ಹೋಯಿತು, ಮತ್ತೆ ಅವನನ್ನ ನೋಡಲೇ ಇಲ್ಲ. ಸತ್ಯವಾಗಿ ದೈಹಿಕ ಸಂಬಂಧ ಇಲ್ಲ.

ನನಗೆ ಬೇರೆ ಸಂಬಂಧದಲ್ಲಿ ನಿಶ್ಚಿತಾರ್ಥವಾಯಿತು. ಆದರೆ ಮದುವೆ ೨೦ ದಿನ ಇರುವಾಗ ರಿಂಗ್ ವಾಪಸ್ ಬಂತು. ಕಾರಣ ನನ್ನ ಮೇಲೆ ಇಲ್ಲಸಲ್ಲದ ಅಪವಾದ. ಈಗ ಆ ಹುಡುಗನೇ ಹೋಗಿ ನಾವು ಲವ್ ಮಾಡುತ್ತಿದ್ದೇವೆ ಅಂತ ಹೇಳಿದ್ದಾನೆ. ಬೇರೆ ಜನರ ಮುಂದೆ ನಾನೇ ಮದುವೆಯಾಗುತ್ತೇನೆಂದು ಹೇಳುತ್ತಿದ್ದಾನೆ.

ನನಗೆ ಇಷ್ಟವಿಲ್ಲ. ರಿಂಗ್ ವಾಪಸ್ ಬಂದ ಮೇಲೆ 'ಮದುವೆ' ಪದ ಕೇಳಿದರೆ ಕೆಟ್ಟಯೋಚನೆ ಬರುತ್ತದೆ. ಬೇರೆ ಸಂಬಂಧ ಬರುತ್ತಿವೆ. ನನಗೆ ಇಷ್ಟವಾಗುತ್ತಿಲ್ಲ, ಜೀವನವೇ ಬೇಡವಾಗಿದೆ. ಅವನೊಬ್ಬ ಗೋಮುಖ ವ್ಯಾಘ್ರ, ಧನಪಿಶಾಚಿ ಅಂತ ಎಷ್ಟು ದೂರ ಇದ್ದರು ಬಿಡುತ್ತಿಲ್ಲ. ಈ ಹುಡುಗನ ಹೇಗೆ ನಂಬಲಿ? ಅವನು ಪ್ರೀತಿಸುತ್ತಾನೆಂದು ಹೇಗೆ ತಿಳಿಯಲಿ?

ರೂಪಕಲಾ

### ಸಲಹೆ

ನೀವು ಮೊದಲು ಪ್ರೀತಿಸಿದ ಹುಡುಗ ಯೋಗ್ಯನಲ್ಲವೆಂದು ನಿಮ್ಮ ಸಮಸ್ಯೆಯಲ್ಲೇ ಸ್ಪಷ್ಟಪಡಿಸಿದ್ದೀರಿ. ಆತನೊಡನೆ ನಿಮಗೆ ಯಾವ ಸಂಪರ್ಕವೂ ಇಲ್ಲದಿದ್ದ ಮೇಲೆ ಅವನೊಡನೆ ಮದುವೆ ರದ್ದು ಪಡಿಸಿಕೊಂಡಿದ್ದು ಒಳ್ಳೆಯದೇ ಆಗಿದೆ.

ನಿಮ್ಮ ಬೇರೆ ಸಂಬಂಧದಲ್ಲಿ ನಿಶ್ಚಿತಾರ್ಥವಾದಾಗಲೂ ಆ ಹುಡುಗ ತನ್ನ ಕೈವಾಡ ತೋರಿಸಿರಬಹುದೆಂದು ಹೇಳಿಕೊಂಡಿರುವಿರಿ. ನಿಮ್ಮನ್ನು ವರಿಸಲಿರುವ ಗಂಡು ನಿಜಕ್ಕೂ ನಿಮ್ಮನ್ನು ಪ್ರೀತಿಸುವುದಾದರೆ ಮೂರನೆಯ ವ್ಯಕ್ತಿಯ ಮಾತು ಕೇಳಿ ನಿಮ್ಮ ಕೈ ಬಿಡುತ್ತಿರಲಿಲ್ಲ. ವೈವಾಹಿಕ ಜೀವನಕ್ಕೆ ನಂಬಿಕೆ ಎನ್ನುವುದು ಬಹಳ ಮುಖ್ಯವಾದ ಹಾಗೂ ಭದ್ರವಾದ ತಳಪಾಯ. ಅವರೊಂದಿಗೆ ನಿಮ್ಮ ಮದುವೆಯ ಮಾತು ಮುರಿದಿದ್ದು ನಿಮಗೆ ಒಳಿತೇ ಆಯಿತೆಂದುಕೊಳ್ಳಿ.

ಇಷ್ಟೆಲ್ಲಾ ಪ್ರಕರಣಗಳ ನಂತರ ನಿಮಗೆ ಮದುವೆ ಎಂದರೆ ಬೇಸರ ಬಂದಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ನಿಮ್ಮ ವಯಸ್ಸು ಎಷ್ಟೆಂದು ನೀವು ನಿರ್ದಿಷ್ಟವಾಗಿ ತಿಳಿಸಿಲ್ಲ. ಯಾವ ವಯಸ್ಸಿನಲ್ಲೇ ಆಗಲಿ ಹೆಣ್ಣಿಗೆ ಮದುವೆಯಿಂದಲೇ ಮುಕ್ತಿ ಸಿಗಬೇಕೆಂಬ ನಿಯಮವೇನೂ ಇಲ್ಲ. ನಿಮಗಿನ್ನೂ ಒಳ್ಳೆಯ ಭವಿಷ್ಯವಿದೆ. ನೀವು ಓದುತ್ತಿದ್ದರೆ ಯಾವ ವಿಷಯವನ್ನೂ ಪರಿಗಣಿಸದೇ ಓದು ಮುಂದುವರೆಸಿ. ಓದು ಮುಗಿಸಿರುವಿರಾದರೆ ಉದ್ಯೋಗಕ್ಕೆ ಪ್ರಯತ್ನಿಸಿ. ಹೆಣ್ಣಿಗೆ ಆರ್ಥಿಕ ಸ್ವಾತಂತ್ರ್ಯ ಬಹಳ ಮುಖ್ಯ. ನೀವು ನಾಲ್ಕು ಜನರೊಡನೆ ಬೆರೆತರೆ ನೀವೇ ನಿಮ್ಮ ಜೀವನದಲ್ಲಿ ಸ್ವತಃ ನಿರ್ಧಾರ ಕೈಗೊಳ್ಳುವ ಸಾಮರ್ಥ್ಯ ಪಡೆಯುತ್ತೀರಿ.



ಆಪ್ತ ಸಮಾಲೋಚನೆ

ಉಷಾ ನವರತ್ನರಾಮ್

ನೀವು ಮೊದಲು ಪ್ರೀತಿಸಿದ ಹುಡುಗ ಅಯೋಗ್ಯನೆಂದು ತಿಳಿದು ಅವನನ್ನು ನಂಬುವುದರಲ್ಲಾಗಲಿ, ಪ್ರೀತಿಸುವುದರಲ್ಲಾಗಲಿ ಯಾವ ಅರ್ಥವೂ ಇಲ್ಲ. ಪ್ರಪಂಚ ವಿಶಾಲವಾಗಿದೆ. ಮುಂದೆ ನಿಮಗೆ ಅನುರೂಪನಾದ ವರ ಸಿಗುವ ಸಾಧ್ಯತೆ ಇದೆ. ಮದುವೆ ಎನ್ನುವುದು ಆಜೀವಪರ್ಯಂತ ಹೊಂದಿಕೊಂಡು ಪತಿ-ಪತ್ನಿಯರು ಪರಸ್ಪರ ಪ್ರೀತಿ, ನಂಬಿಕೆ, ವಿಶ್ವಾಸದಿಂದ ಬಾಳಬೇಕಾದ ಸಂಬಂಧ. ಈ ವಿಷಯದಲ್ಲಿ ದುಡುಕಿ ಯಾವ ನಿರ್ಧಾರವನ್ನು ತೆಗೆದುಕೊಳ್ಳಬೇಡಿ. ನಿಮಗೆ ತಕ್ಕ ಜೀವನ ಸಂಗಾತಿ ಸಿಗಲೆಂದು ಹಾರೈಸುತ್ತೇನೆ

## ಮುಗ್ಧ ಪ್ರೀತಿಯೆದುರು ಮೌನಿ

ನಾನು ಹತ್ತೊಂಬತ್ತು ವರ್ಷದ ಹುಡುಗಿ. ಒಬ್ಬ ಹುಡುಗ ನನ್ನನ್ನು ಬಹಳ ವರ್ಷದಿಂದ ಪ್ರೀತಿಸುತ್ತಾ ಇದ್ದ. ನನಗೆ ಬಹಳ ವರ್ಷವಾದ ಮೇಲೆ ಗೊತ್ತಾಯಿತು. ನಾನು ಅವನನ್ನ ತಿರಸ್ಕರಿಸಬೇಕು ಅಂತ ನಿರ್ಧಾರ ಮಾಡಿದ್ದೆ. ಆದರೆ ಅವನ ಮುಗ್ಧವಾದ ಪ್ರೀತಿ ಮುಂದೆ ನಾನು ಮೌನವಾದೆ. ನನಗೆ ಅವನ ಸ್ವಭಾವ ಬಹಳ ಹಿಡಿಸಿದೆ.

ಅವನನ್ನು ಎಲ್ಲಾ ರೀತಿಯಿಂದ ಪರೀಕ್ಷಿಸಿದೆ. ಅವನು ಎಲ್ಲದಕ್ಕೆ ನನಗೆ ಸಮನಾದ. ಆದರೆ ಈ ಸಂಬಂಧ ಮುಂದುವರೆಯುವುದಕ್ಕೆ ಸಾಧ್ಯ ಇಲ್ಲ. ಈ ವಿಷಯ ಅವನಿಗೂ ಗೊತ್ತು ಇದೆ. ಏಕೆಂದರೆ ನನ್ನ ತಂದೆಗೆ ಅವನನ್ನು ಕಂಡರೆ ಆಗಿಬರುವುದಿಲ್ಲ. ಆದರೆ ನಾನು ನನ್ನ ತಂದೆಯ ಮಾತನ್ನು ಮೀರುವುದಿಲ್ಲ. ಅವರ ಸಂತೋಷನೆ ನನ್ನ ಸಂತೋಷ. ಈ ವಿಷಯ ಅವನಿಗೆ ಗೊತ್ತು ಇದೆ. ಆದರೆ ಕೆಲವು ದಿನಗಳಿಂದ ನನ್ನ ತಂದೆ ನನ್ನ ಮೇಲೆ ಬಹಳ ಸಿಟ್ಟು ಮಾಡುತ್ತಾ ಇದ್ದಾರೆ. ಅವರದು ಸಂಶಯ ಪಡುವಂಥ ಸ್ವಭಾವ. ಇದನ್ನೆಲ್ಲಾ ನೋಡಿ ನಾನು ಬಹಳ ದುಃಖದಿಂದ ಇದ್ದೇನೆ. ಅದಕ್ಕೆ ಈಗಲೆ ಅವನಿಗೆ ನನ್ನನ್ನೂ ಮರೆಯಲು ಹೇಳಬೇಕು ಅಂತ ವಿಚಾರ ಮಾಡಿದ್ದೇನೆ. ನಾನು ಈ ರೀತಿ ಪ್ರೀತಿಸುವುದರಿಂದ ಅವರ ಮನಸ್ಸಿಗೆ ದುಃಖವಾಗಬಹುದು. ಅದಕ್ಕೆ ನನ್ನ ಈ ವಿಷಯ ಅವರಿಗೆ ಗೊತ್ತಾಗುವುದರ ಮೊದಲೇ ನಾನು ಸಂಬಂಧದಿಂದ ದೂರವಾಗಬೇಕು ಅಂತ ವಿಚಾರ ಮಾಡಿದ್ದೇನೆ. ಆದರೆ ನನ್ನ ಸ್ನೇಹಿತೆ ಇದಕ್ಕೆ ಬೇಡ ಅಂತ ಹೇಳುತ್ತಾ

ಇದ್ದಾಳೆ. ಅನ್ಯಾಯವಾಗಿ ನಿನ್ನ ಪ್ರೀತಿನ ಏಕೆ ಬಲಿ ಕೊಡುತ್ತೀಯಾ ಅಂತ ಹೇಳುತ್ತಾ ಇದ್ದಾಳೆ. ಅದಕ್ಕೆ ನಾನು ಏನು ಮಾಡಲಿ? ನಾನು ಅವನಿಗೆ ಒರಟಾಗಿ ಹೇಳಿದರೆ ಅವನು ತನ್ನ ಜೀವ ಕಳೆದುಕೊಳ್ಳಬಹುದು. ಏಕೆಂದರೆ ಈಗ ಒಂದು ಸಲ ಹಾಗೆ ಆಗಿದೆ. ದಯವಿಟ್ಟು ಇದಕ್ಕೆ ಸಲಹೆ ಕೊಡಿ.

ರಾಧಾ, ಬಾಗಲಕೋಟೆ

## ಸಲಹೆ

ನೀವು ಒಬ್ಬ ಹುಡುಗನನ್ನು ಪ್ರೀತಿಸಿರುವುದಾಗಿ ತಿಳಿಸಿದ್ದೀರಿ, ನಿಜ. ಆದರೆ ಅವರ ವಯಸ್ಸು, ಹುದ್ದೆ ನಿರ್ದಿಷ್ಟವಾಗಿ ತಿಳಿಸಿಲ್ಲ. ನೀವು ಆತನನ್ನು ಬಹಳ ವರ್ಷಗಳಿಂದ ನಿಷ್ಠೆಯಿಂದ ಪ್ರೀತಿಸುತ್ತಿರುವುದು ಸಂತೋಷದ ಸಂಗತಿ. ಆದರೆ ನಿಮ್ಮ ತಂದೆಯವರು ಅವನನ್ನು ಏಕೆ ಇಷ್ಟಪಡುತ್ತಿಲ್ಲ? ನಿಮ್ಮ ತಂದೆಯವರು ಹಿರಿಯರು. ಯಾವ ತಂದೆಯೂ ಮಗಳಿಗೆ ಕೆಡುಕು ಬಯಸಲಾರರು. ನಿಮ್ಮ ತಂದೆಯೊಡನೆ ಸಮಾಲೋಚನೆ ಮಾಡಿ ಅವರು ನೀವು ಮೆಚ್ಚಿದ ವ್ಯಕ್ತಿಯನ್ನು ಏಕೆ ಇಷ್ಟಪಡುತ್ತಿಲ್ಲವೆಂದು ಸ್ಪಷ್ಟಪಡಿಸಿಕೊಳ್ಳಿ, ನೀವು ಪ್ರೀತಿಸಿದ ವ್ಯಕ್ತಿ ವಿದ್ಯಾವಂತರೇ? ಒಳ್ಳೆಯ ಉದ್ಯೋಗದಲ್ಲಿರುವರೇ? ಮುಂದೆ ನಿಮಗೆ ಸುಖ ಜೀವನ ನೀಡುವ ಅರ್ಹತೆ ಅವರಿಗೆ ಇದೆಯೇ? ಅವರಿಗೆ ಯಾವ ದುರಭ್ಯಾಸವೂ ಇಲ್ಲವೇ? ಮುಂತಾದ ಪ್ರಶ್ನೆಗಳೆಲ್ಲಾ ಪರಿಶೀಲಿಸಿ ಉತ್ತರ ಪಡೆಯಿರಿ. ಇವೆಲ್ಲಾ ಅರ್ಹತೆಗಳಿದ್ದರೂ ನಿಮ್ಮ ತಂದೆಯವರು ಆತನನ್ನು ಮೆಚ್ಚದಿದ್ದರೆ ನಿಮಗೆ ಮುಂದುವರೆಯುವ ಧೈರ್ಯವಿದೆಯೇ?

ನೀವು ಕಾನೂನಿನ ಪ್ರಕಾರ ಪ್ರಾಪ್ತ ವಯಸ್ಸಿಗೆ ಬಂದಿರುವುದರಿಂದ ನೀವು ಪ್ರೀತಿಸಿದ ಹುಡುಗನೊಡನೆ ಸ್ವತಂತ್ರವಾಗಿ ವಿವಾಹ ಮಾಡಿಕೊಳ್ಳಬಹುದು. ಆದರೆ ನೀವು ಪ್ರೀತಿಸಿರುವ ವ್ಯಕ್ತಿ ನಿಮ್ಮ ತಂದೆಯನ್ನು ಎದುರಿಸಿ ನಿಮ್ಮನ್ನು ಮದುವೆಯಾಗಲು ಶಕ್ತರಾಗಿದ್ದಾರೆಯೇ ಎಂದು ತಿಳಿದುಕೊಳ್ಳಿ, ಮದುವೆ ಎನ್ನುವುದು ಬದುಕಿನಲ್ಲಿ ಬಹಳ ಮುಖ್ಯವಾದ ತಿರುವು. ಅಂಥ ಗಂಭೀರವಾದ ವಿಚಾರದಲ್ಲಿ ದುಡುಕದೇ ಜಾಗರೂಕತೆಯಿಂದ ಹೆಜ್ಜೆಯಿಡುವುದು ಕ್ಷೇಮ.

ನಿಮ್ಮ ಗೆಳತಿ, ಗೆಳೆಯರ ನೆರವು ಪಡೆದು ನೀವು ಕಾನೂನುಬದ್ಧವಾಗಿ ವಿವಾಹವಾಗಬಹುದು. ನಿಮ್ಮ ಪ್ರಿಯಕರನೊಂದಿಗೆ ನಿಮ್ಮ ಸಮಸ್ಯೆಯನ್ನು ಮನಬಿಚ್ಚಿ ತೋಡಿಕೊಳ್ಳಿ, ಅವರು ನಿಮ್ಮನ್ನು ನಿಜವಾಗಿ ಪ್ರೀತಿಸುವುದಾದರೆ ನಿಮ್ಮ ಮೇಲೆ ವಿನಾಕಾರಣ ಕೋಪಿಸಿಕೊಳ್ಳುವುದಿಲ್ಲ. ಅವರು ಗುಣದಲ್ಲಿ, ಹುದ್ದೆಯಲ್ಲಿ ಯೋಗ್ಯರಾಗಿದ್ದು ನಿಮಗೆ ರಕ್ಷಣೆ ನೀಡುವಂಥವರಾದರೆ ಯಾವ ಅಳುಕೂ ಇಲ್ಲದೇ ಮುನ್ನಡೆಯಿರಿ.

ನೀವು ಪ್ರೀತಿಸಿದ ವ್ಯಕ್ತಿ ಉದ್ಯೋಗದಲ್ಲಿ ಇರದೇ ಇದ್ದರೆ ನೀವು ಕೆಲಕಾಲ ಮದುವೆಯಾಗದಿರುವುದು ಒಳ್ಳೆಯದು. ವೈವಾಹಿಕ ಜೀವನದಲ್ಲಿ ಬರಿಯ ಪ್ರೀತಿಯೊಂದೇ ಮುಖ್ಯವಲ್ಲ. ನೀವು ಸಂಸಾರ ನಡೆಸಲು ಆರ್ಥಿಕ ನೆರವೂ ಅಗತ್ಯ. ನಿಮಗಿನ್ನೂ ಚಿಕ್ಕ ವಯಸ್ಸು. ನೀವಿನ್ನು ನಾಲ್ಕಾರು ವರ್ಷಗಳು ತಡೆದರೆ ನಿಮ್ಮ ಮನಸ್ಸು ವಿಕಸಿತಗೊಳ್ಳುತ್ತದೆ. ಮದುವೆಯ ಬಗ್ಗೆ ನೀವೇ ಸ್ವತಂತ್ರವಾಗಿ ನಿರ್ಧಾರ ತೆಗೆದುಕೊಳ್ಳುವ ಸಾಮರ್ಥ್ಯವನ್ನು ಹೊಂದುವಿರಿ.

ನಿಮ್ಮ ಪ್ರಿಯಕರ ನಿಮಗಾಗಿ ಕಾಯಲು ಸಿದ್ಧರಾಗಿದ್ದರೆ ನೀವಿನ್ನು ನಾಲ್ಕಾರು ವರ್ಷಗಳು ವಿವಾಹವಾಗಬೇಡಿ. ಅವರು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದು ನಿಮ್ಮನ್ನು ಸ್ವೀಕರಿಸುವುದಾದರೆ ನಿಮ್ಮ ತಂದೆಯವರ ವಿರುದ್ಧ ಮದುವೆ ಮಾಡಿಕೊಳ್ಳಬಹುದು. ಕ್ರಮೇಣ ನಿಮ್ಮವರ ಒಳ್ಳೆಯ ಗುಣಗಳ ಪರಿಚಯವಾದಾಗ ನಿಮ್ಮ ತಂದೆಯವರೇ ನಿಮ್ಮಲ್ಲಿ ರಾಜಿಯಾಗಬಹುದು. ಮುಂದೆ ಹೆಜ್ಜೆಯಿಡುವ ಮುನ್ನ ಒಳಿತು ಕೆಡುಕುಗಳನ್ನು ಪರಾಮರ್ಶಿಸಿ ಮುಂದುವರೆಯಿರಿ. ಇದು ನಿಮ್ಮ ಭವಿಷ್ಯದ ಪ್ರಶ್ನೆಯೆಂದು ನಿಮಗೆ ನೆನಪಿರಲಿ.

### ಉಷಾ ನವರತ್ನರಾಮ್ ಅವರೊಡನೆ

# ಆಪ್ತ ಸಮಾಲೋಚನೆ

ಬದುಕಿನ ಹಾದಿಯಲ್ಲಿ ಎದುರಾಗುವ ಸಮಸ್ಯೆಗಳು ಒಂದೆರಡಲ್ಲ. ಸಮಸ್ಯೆ ಎದುರು ನಿಂತು ಘರ್ಜಿಸಿದಾಗ ಹಣೆಗೆ ಕೈಹೊತ್ತು ಕೂತರೆ ಪರಿಹಾರ ತಂತಾನೇ ಹೊಳೆಯಲಾರದು. ಸಮಸ್ಯೆ ಖಾಸಗಿ ಬದುಕಿಗೆ ಸಂಬಂಧಿಸಿದ್ದರಂತೂ ನುಂಗಲೂ ಆಗದೆ ಉಗುಳಲೂ ಆಗದೆ ತೊಳಲಾಡುವವರೇ ಹೆಚ್ಚು. ಇಂತಹ ಸಂದರ್ಭದಲ್ಲಿ ಒಳಗಿನ ಗೋಳನ್ನೆಲ್ಲ ತೋಡಿಕೊಳ್ಳಲು ಒಬ್ಬ ಆಪ್ತ ವ್ಯಕ್ತಿ ಸಿಕ್ಕರೆ ಅರ್ಧ ದುಃಖ ಶಮನಗೊಳ್ಳುತ್ತದೆ. ನಿಮ್ಮ ತೀರಾ ಖಾಸಗಿ ಸಮಸ್ಯೆಗಳಿಗೆ ಪರಿಹಾರ ಸೂಚಿಸಲು ಈ ಅಂಕಣ ಪ್ರಾರಂಭಿಸುತ್ತಿದ್ದೇವೆ.

ನಿಮ್ಮ ಯಾವುದೇ ವೈಯಕ್ತಿಕ ಸಮಸ್ಯೆ, ಸಾಮಾಜಿಕ-ಕೌಟುಂಬಿಕಬಿಕ್ಕಟ್ಟು ಕುರಿತು ಚುಟುಕಾಗಿ, ನಿರ್ದಿಷ್ಟವಾಗಿ ಬರೆದು ಕಳಿಸಿ. ಇದು ಕೇವಲ ಹೆಂಗಸರಿಗೇ ಮೀಸಲಾದ ಅಂಕಣವಲ್ಲ. **ಈ ವಿಭಾಗಕ್ಕೆ ಗಂಡಸರೂ ತಮ್ಮ ಸಮಸ್ಯೆಗಳನ್ನು ಬರೆದು ಕಳಿಸಬಹುದು.** ಅನುಭವೀ ಬರಹಗಾರ್ತಿ **ಉಷಾ ನವರತ್ನರಾಮ್** ಅವರು ನಿಮ್ಮ ಪ್ರಶ್ನೆಗಳಿಗೆ, ಸಮಸ್ಯೆಗಳಿಗೆ ಪರಿಹಾರ ಸೂಚಿಸುತ್ತಾರೆ. ಪತ್ರದಲ್ಲಿ ನಿಮ್ಮ ಹೆಸರು, ವಿಳಾಸ ನಮೂದಿಸುವ ಅಗತ್ಯವಿಲ್ಲ.

ವಿಳಾಸ:

**ಬಿಸಿಲ ಬದುಕು** ಮಾಸ ಪತ್ರಿಕೆ

**ಆಪ್ತ ಸಮಾಲೋಚನೆ** ವಿಭಾಗ, ಅಂಚೆ ಪೆಟ್ಟಿಗೆ ೭೫೫೧

ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

# ಮತ್ತೆ ರೂಪಾಯಿಯ ಅಪಮೌಲ್ಯವೇ?

ನಮ್ಮ ರೂಪಾಯಿಗೆ ಅಪಮೌಲ್ಯದ ಅಂಟು ರೋಗವೆ? ಅದು ಅಪಮೌಲ್ಯದ ಹಾದಿಯನ್ನು ಹಿಡಿದಿದೆಯೇ? ಅದರ ಮೌಲ್ಯದಲ್ಲಿ ಅಸ್ಥಿರವೆ? ಹೀಗೆ ಜನ ಸಾಮಾನ್ಯರಲ್ಲಿ ರೂಪಾಯಿಯ ಬಗ್ಗೆ ಸಂದೇಹದ ಅಲೆಗಳು ಎದ್ದಿವೆ. ಇದರ ಜೊತೆಗೆ 'ಹಣ'ದ ಒಳ್ಳೆಯ ಲಕ್ಷಣಗಳನ್ನು ನಮ್ಮ ರೂಪಾಯಿ ಹೊಂದಿದೆಯೇ ಎಂಬ ಅನುಮಾನ ಜನತೆಯನ್ನು ಕಾಡುತ್ತಿದೆ.

ಕೆಲದಿನಗಳಿಂದ ಡಾಲರಿನೆದುರು ರೂಪಾಯಿಯ ಮೌಲ್ಯ ಹೆಚ್ಚುತ್ತಿದೆ. ವಿದೇಶಿ ವ್ಯಾಪಾರದಲ್ಲಿ ನಮ್ಮ ದೇಶ ಇತರ ದೇಶಗಳೊಡನೆ (ಡಾಲರ ದೇಶಗಳೊಡನೆ) ತನ್ನ ರೂಪಾಯಿಯನ್ನು ವಿನಿಮಯ ಮಾಡಿಕೊಳ್ಳುವಾಗ ಭಾರತಕ್ಕೆ ಡಾಲರು ದುಬಾರಿಯಾಗುವುದು. ಇದು ಪರೋಕ್ಷವಾಗಿ ದೇಶದ ರಫ್ತು ವ್ಯಾಪಾರವನ್ನು ಕುಗ್ಗಿಸುತ್ತದೆ. ಆಮದು ಹೆಚ್ಚಾಗಿ ರಫ್ತು ಕಡಿಮೆಯಾದರೆ ಸಂದಾಯ ಬಾಕಿಯು ಪ್ರತಿಕೂಲವಾಗುತ್ತದೆ. ಅಂದರೆ ನಾವು ವಿದೇಶಗಳಿಗೆ ಕೊಡುವ ಬಾಕಿ ಹಣ ಹೆಚ್ಚುತ್ತದೆ. ಬಾಕಿ ಹಣವನ್ನು ಕೊಡಲು ಸರಕಾರ ಹೆಚ್ಚುವರಿ ನೋಟುಗಳನ್ನು ಮುದ್ರಿಸಿ ಚಲಾವಣೆಗೆ ತರಬೇಕು ಅಥವಾ ವಿದೇಶಗಳಿಂದ ಇಲ್ಲವೆ ಅಂತಾರಾಷ್ಟ್ರೀಯ ಹಣಕಾಸಿನ ಸಂಸ್ಥೆಗಳಿಂದ ಸಾಲವನ್ನು ಪಡೆದು ಬಾಕಿ ಹಣವನ್ನು ಪಾವತಿ ಮಾಡಬೇಕಾಗುವುದು. ಈ ಎರಡು ಮಾರ್ಗಗಳು ಕಠಿಣವಾಗಿವೆ. ಹೀಗಾಗಿ ಸರಕಾರ ಅನಿವಾರ್ಯವಾಗಿ ರೂಪಾಯಿಯನ್ನು ಅಪಮೌಲ್ಯಗೊಳಿಸಲು ಮುಂದಾಗುತ್ತದೆ.

ಅಪಮೌಲ್ಯವೆಂದರೆ ರೂಪಾಯಿಯ ಬಾಹ್ಯ ಮೌಲ್ಯ ಕಡಿಮೆಯಾಗುವುದು. ಇದರಿಂದ ಪರರಾಷ್ಟ್ರಗಳ ಹಣವನ್ನು ಕೊಳ್ಳುವ ರೂಪಾಯಿಯ ಶಕ್ತಿ ಕಡಿಮೆಯಾಗುತ್ತದೆ. ಸರಕಾರ ದೇಶದ ರೂಪಾಯಿಯ ಬಾಹ್ಯ ಮೌಲ್ಯವನ್ನು ರಿಝುರ್ವ್ ಬ್ಯಾಂಕಿನ ಮೂಲಕ ನಿಯಂತ್ರಿಸುತ್ತದೆ. ಇದು ಅದರ ಕರ್ತವ್ಯ. ಅಂತಾರಾಷ್ಟ್ರೀಯ ಮಟ್ಟದಲ್ಲಿ ರೂಪಾಯಿಯ ಪೂರೈಕೆ ಹಾಗೂ ಬೇಡಿಕೆಯ ಮಧ್ಯದ ಅಂತರ ದೇಶದ ಆಮದು ಹಾಗೂ ರಫ್ತುಗಳ ಮೂಲಕ ಹೆಚ್ಚು ಇಲ್ಲವೆ ಕಡಿಮೆಯಾಗುವುದು. ದೇಶದ ರಫ್ತು ವ್ಯಾಪಾರ ಹೆಚ್ಚಾದರೆ ರೂಪಾಯಿಗೆ ಬೇಡಿಕೆ ಅಧಿಕವಾಗುತ್ತದೆ. ಆದರೆ ಆಮದು ಹೆಚ್ಚಾದರೆ ವಿದೇಶಿ ಹಣಕ್ಕೆ ಅಧಿಕ ಬೇಡಿಕೆ ದೊರೆಯುತ್ತದೆ. ಭಾರತದ ವಿದೇಶಿ ವ್ಯಾಪಾರದಲ್ಲಿ ಬಹು ವರ್ಷಗಳಿಂದ ಆಮದು ವ್ಯಾಪಾರದ ಮೌಲ್ಯವೇ ಹೆಚ್ಚಾಗಿರುತ್ತದೆ. ಹೀಗಾಗಿ ದೇಶ ತನ್ನ ರಫ್ತು ವ್ಯಾಪಾರ ಹೆಚ್ಚಿಸಲು ಅನೇಕ ಭಗೀರಥ ಪ್ರಯತ್ನಗಳನ್ನು ಮಾಡುತ್ತಿದೆ. ಅದರಲ್ಲೊಂದು ರೂಪಾಯಿಯ ಅಪಮೌಲ್ಯ.




ನಮ್ಮ ರೂಪಾಯಿಗೆ ಮೇಲಿಂದ ಮೇಲೆ ಅಪಮೌಲ್ಯದ ರೋಗ ಬರುತ್ತಲೇ ಇದೆ. ಸ್ವಾತಂತ್ರ್ಯಗೊಂಡ ನಂತರ ಸೆಪ್ಟೆಂಬರ್ ೧೯೪೯, ಜೂನ್ ೧೯೬೬ ಹಾಗೂ ಜುಲೈ ೧೯೯೧ ಹೀಗೆ ಮೂರು ಬಾರಿ ಸರಕಾರ ರೂಪಾಯಿಯನ್ನು ಅಪಮೌಲ್ಯಕ್ಕೆ ಗುರಿಪಡಿಸಿದೆ. ನೆರೆಯ ರಾಷ್ಟ್ರಗಳೂ (ಪಾಕಿಸ್ತಾನ ಬಾಂಗ್ಲಾದೇಶ) ಇತ್ತೀಚೆಗಷ್ಟೇ ತಮ್ಮ ಹಣವನ್ನು ಅಪಮೌಲ್ಯಗೊಳಿಸಿವೆ. ಇದೊಂದು ಅಂಟು ರೋಗವಾಗಿರುವುದರಿಂದ ಈ ದಶಕದಲ್ಲಿ ಮತ್ತೊಂದು ರೂಪಾಯಿಯ ಅಪಮೌಲ್ಯವನ್ನು ನೋಡುವ ಲಕ್ಷಣಗಳು ಭಾರತದ ಅರ್ಥವ್ಯವಸ್ಥೆಗೆ ಇದೆ.

ಭಾರತೀಯ ನಿರ್ಯಾತದಾರರ ಒಕ್ಕೂಟವು ರೂಪಾಯಿಯನ್ನು ಕನಿಷ್ಠ ಶೇಕಡಾ ೧೦ರಷ್ಟು ಅಪಮೌಲ್ಯಗೊಳಿಸಬೇಕೆಂಬ ಒತ್ತಾಯವನ್ನು ಸರಕಾರದ ಮೇಲೆ ವಿಧಿಸುತ್ತಿದೆ. ಇದರಿಂದ ಪ್ರತಿ ಡಾಲರ್ ೪೦ ರೂಪಾಯಿಗಳಿಗೆ ವಿನಿಮಯವಾಗುತ್ತದೆ. ನಮ್ಮ ಸರಕುಗಳು ವಿದೇಶಿಯರಿಗೆ ಕಡಿಮೆ ಬೆಲೆಗೆ ದೊರೆಯುತ್ತವೆ. ನಮ್ಮ ಸರಕು-ಸೇವೆಗಳಿಗೆ ಬೇಡಿಕೆ ಹೆಚ್ಚಾಗಿ ರಫ್ತು ವ್ಯಾಪಾರ ಅಧಿಕವಾಗುವುದು ಎಂಬುವುದು ಸಂಘಟನೆಯ ಆಶಾಭಾವನೆಯಾಗಿದೆ. ಆದರೆ ಇತಿಹಾಸದ ಘಟನೆಗಳು ಇದಕ್ಕೆ ನಕಾರಾತ್ಮಕ ಉತ್ತರವನ್ನು ನೀಡುತ್ತವೆ. ಪ್ರತಿ ಸಾರಿ ರೂಪಾಯಿಯ ಅಪಮೌಲ್ಯಕ್ಕೆ ಸರಕಾರ ಕೊಡುತ್ತಾ ಬಂದಿರುವ ಉತ್ತರ 'ದೇಶದ ರಫ್ತು ವ್ಯಾಪಾರ ಹೆಚ್ಚಿಸುವುದು ಹಾಗೂ ಆಮದು ವ್ಯಾಪಾರವನ್ನು ನಿಯಂತ್ರಿಸುವುದು' ಎಂದು. ಆದರೆ ಸ್ವಾತಂತ್ರ್ಯದ ನಂತರ ನಾವು ಮೂರು ಬಾರಿ ನಮ್ಮ ರೂಪಾಯಿಯನ್ನು ಅಪಮೌಲ್ಯಗೊಳಿಸಿದ್ದರೂ, ಆ ವರ್ಷಗಳಲ್ಲಿ ಹಾಗೂ ತದನಂತರದ ವರ್ಷಗಳಲ್ಲಿ ನಮ್ಮ ದೇಶದ ಆಮದು ವ್ಯಾಪಾರ ಹೆಚ್ಚಾಗಿದೆಯೇ ಹೊರತು ರಫ್ತು ವ್ಯಾಪಾರವಲ್ಲ ಅಥವಾ ದೇಶದ ರಫ್ತು ವ್ಯಾಪಾರ ಆಮದು ವ್ಯಾಪಾರವನ್ನು ದಾಟುವಲ್ಲಿ ಅಸಮರ್ಥವಾಗಿದೆ.

ರೂಪಾಯಿಯ ಅಪಮೌಲ್ಯ ಸರಕಾರಕ್ಕೆ ಅನಿವಾರ್ಯವಾದರೆ ಅದು ಈ ಕೆಳಗಿನ ಅಂಶಗಳನ್ನು ಎಚ್ಚರಿಕೆಯಿಂದ ನಿಭಾಯಿಸಬೇಕಾಗುತ್ತದೆ:

೧. ರಫ್ತು ಮಾಡುವ ಸರಕುಗಳ ಅನುಭೋಗವನ್ನು ಸ್ವದೇಶದಲ್ಲಿ ನಿಯಂತ್ರಿಸಬೇಕು.
೨. ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ನಮ್ಮ ಸರಕುಗಳಿಗೆ ಹೆಚ್ಚುವ ಬೇಡಿಕೆಯನ್ನು ಪೂರೈಸಲು ಉತ್ಪಾದನೆಯನ್ನು ಬೃಹತ್ ಪ್ರಮಾಣದಲ್ಲಿ ಕೈಕೊಳ್ಳಬೇಕು.
೩. ಉತ್ಪಾದನೆಯನ್ನು ಹೆಚ್ಚಿಸಲು ವಿದೇಶಗಳನ್ನು ಅವಲಂಬಿಸಿರ ಕೂಡದು.




೪. ಉತ್ಪಾದನೆ ಹೆಚ್ಚಿಸುವಾಗ ಅದರ ಉತ್ಪಾದನಾ ವೆಚ್ಚ ಮತ್ತು ವಸ್ತುವಿನ ಬೆಲೆ ಅಧಿಕವಾಗಬಾರದು.

೫. ವಿದೇಶಿ ಸಾಲದ ಹೊರೆ ಕಡಿಮೆ ಇರಬೇಕು.

೬. ಸರಕಾರ ಯೋಜನಾಬದ್ಧವಾಗಿ ರೂಪಾಯಿಯನ್ನು ಅಪಮೌಲ್ಯಗೊಳಿಸಿ ಅದಕ್ಕೆ ತಕ್ಕ ಹಾಗೆ ತನ್ನ ಹಣಕಾಸಿನ ನೀತಿಯನ್ನು ರಚಿಸಬೇಕು.

ಈ ಎಲ್ಲ ಮೇಲಿನ ಅಂಶಗಳ ಕಡೆಗೆ ಸರಕಾರ ಗಮನಹರಿಸಿದಾಗ ರೂಪಾಯಿಯ ಅಪಮೌಲ್ಯದಲ್ಲೂ ಭಾರತ ಯಶಸ್ಸನ್ನು ಗಳಿಸಬಹುದಾಗಿದೆ. ಸಾಲಗಾರರ (ವಿದೇಶಿ) ಒತ್ತಡಕ್ಕೋ ಅಥವಾ ರಫ್ತು ಒಕ್ಕೂಟಗಳ ಒತ್ತಡಕ್ಕೋ ಮಣಿದು ರೂಪಾಯಿಯನ್ನು ದಿಢೀರನೆ ಅಪಮೌಲ್ಯಗೊಳಿಸಿದರೆ ಇದರ ದುಷ್ಪರಿಣಾಮಗಳು ಅರ್ಥವ್ಯವಸ್ಥೆಯ ಮೇಲೆ ಭೀಕರವಾಗಿರುವವು.

○ ಶಿವಯೋಗಿ ಕಬ್ಬಿಣಕಂತಿಮಠ

# ಏಜೆಂಟರಿಗೆ ವಿಶೇಷ ಸೂಚನೆ

ಎಲ್ಲರಿಗೂ ಗೊತ್ತಿದ್ದಂತೆ ಏಜೆಂಟರಿಗೆ ಠೇವಣಿಯ ಭಾರ ಹೊರಿಸದೆ ಶೇಕಡಾ ೩೦ರಷ್ಟು ಕಮೀಷನ್ ನೀಡುವ ವಿನೂತನ ಪ್ರಯೋಗವನ್ನು ಮಾಡಿರುವ 'ಬಿಸಿಲ ಬದುಕು' ಪತ್ರಿಕೆಗೆ ಏಜೆಂಟರಿಂದ ಅತ್ಯಂತ ಪ್ರೋತ್ಸಾಹದಾಯಕ ಪ್ರತಿಕ್ರಿಯೆ ವ್ಯಕ್ತವಾಗಿದೆ. ಬಹುಪಾಲು ಏಜೆಂಟರು ತಮಗೆ ದೊರೆತಿರುವ ಈ ಸದವಕಾಶವನ್ನು ಸದುಪಯೋಗಪಡಿಸಿಕೊಂಡು ಪತ್ರಿಕೆ ಹಾಗೂ ಓದುಗರ ವಿಶ್ವಾಸ ಗಳಿಸಿದ್ದಾರೆ. ಆದರೆ ಕೆಲವೇ ಕೆಲವು ಏಜೆಂಟರು ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ವಿಫಲರಾಗಿ ಸಕಾಲಕ್ಕೆ ಏಜೆನ್ಸಿ ಬಿಲ್ ಪಾವತಿ ಮಾಡುತ್ತಿಲ್ಲ. ಇಂತಹವರಿಗೆ ಈ ಮೂಲಕ ಅಂತಿಮ ಎಚ್ಚರಿಕೆ ನೀಡುತ್ತಿದ್ದೇವೆ:

ಪ್ರತಿ ತಿಂಗಳು ೫ನೇ ತಾರೀಖಿನೊಳಗೆ ಬೇಡಿಕೆಯ ಪ್ರತಿಗಳಿಗೆ ಮುಂಗಡ ಹಣ ಕಳಿಸದ, ಪತ್ರಿಕೆಯ ಪ್ರಸಾರ ಹೆಚ್ಚಿಸಲು ಪ್ರಯತ್ನಿಸದ ಏಜೆಂಟರ ಏಜೆನ್ಸಿಯನ್ನು ಯಾವ ಮುಲಾಜೂ ಇಲ್ಲದೆ ರದ್ದುಪಡಿಸಲಾಗುವುದು.

ಬಾಕಿ ಉಳಿಸಿಕೊಂಡವರು ಸೆಪ್ಟೆಂಬರ್ ೩೦ ರೊಳಗೆ ಬಾಕಿ ಚುಕ್ತಾ ಮಾಡದಿದ್ದರೆ ಅವರ ಬಗ್ಗೆ ಎಲ್ಲಾ ಪತ್ರಿಕೆಗಳಿಗೆ ಮಾಹಿತಿ ನೀಡಿ 'ಕಪ್ಪು ಪಟ್ಟಿ'ಗೆ ಸೇರಿಸಲಾಗುವುದು.

ಇಂತಹವರ ವಿರುದ್ಧ ಕಟ್ಟುನಿಟ್ಟಿನ ಕಾನೂನು ಕ್ರಮ ಕೈಗೊಳ್ಳುವುದರೊಂದಿಗೆ ಅವರ ಹೆಸರುಗಳನ್ನು ಪತ್ರಿಕೆಯಲ್ಲಿ ಬಹಿರಂಗ ಪಡಿಸಲಾಗುತ್ತದೆ.

ಯಾವುದೇ ಉದ್ಯಮಿ, ರಾಜಕಾರಣಿಯ ಕೈಗೊಂಬೆಯಾಗಿರದ 'ಬಿಸಿಲ ಬದುಕು' ಮಾಸ ಪತ್ರಿಕೆಗೆ ಓದುಗರ, ಏಜೆಂಟರ, ಜಾಹೀರಾತುದಾರರ ಸಹಕಾರವೇ ಬಂಡವಾಳ ಎಂಬುದನ್ನು ಮತ್ತೊಮ್ಮೆ ಏಜೆಂಟರ ಗಮನಕ್ಕೆ ತರುತ್ತಿದ್ದೇವೆ. ನಾಡಿನ ಮೂಲೆ ಮೂಲೆಗಳಿಂದ ಬೇಡಿಕೆ ಗಳಿಸುತ್ತ ಎಲ್ಲರ ನಿರೀಕ್ಷೆ ಮೀರಿ ಪ್ರಸಾರ ಹೆಚ್ಚಿಸಿಕೊಳ್ಳುತ್ತಿರುವ ಈ ನಿಮ್ಮ ಪತ್ರಿಕೆ ಮುಂಬರುವ ದಿನಗಳಲ್ಲಿ ಹಲವಾರು ವಿನೂತನ ಯೋಜನೆಗಳನ್ನು ಕಾರ್ಯ ರೂಪಕ್ಕಿಳಿಸಲಿದೆ. ಇದಕ್ಕೆ ನಿಮ್ಮೆಲ್ಲರ ಪ್ರಾಮಾಣಿಕ ಬೆಂಬಲ ಅಪೇಕ್ಷಿಸುತ್ತೇವೆ.

- ಸಂಪಾದಕ

# ಚರ್ಮರೋಗ ಲೈಂಗಿಕರೋಗ ನಿಮ್ಮ ತಿಳಿವಳಿಕೆ ಎಷ್ಟು?

○ ಡಾ. ಕೆ.ವಿ. ಶೆಣೈ
ಹಿರಿಯ ತಜ್ಞರು, ಕುಷ್ಠ ರೋಗ ನಿಯಂತ್ರಣ
ಕುಂದಾಪುರ, ದ.ಕ.

ಅಜ್ಞಾನ ಮತ್ತು ಭೀತಿ ಇವು ಮಾನವನ ಪರಮ ಶತ್ರುಗಳು. ಇವು ಒಂದಕ್ಕೊಂದು ಪೂರಕವೂ ಉತ್ಪಾದಕವೂ ಆಗಿವೆ. ಚರ್ಮ ರೋಗಗಳ ಬಗ್ಗೆ ಜನಸಾಮಾನ್ಯರಲ್ಲಿ ಸರಿಯಾದ ತಿಳಿವಳಿಕೆಯಿಲ್ಲ. ಇದರಿಂದಾಗಿ ಈ ರೋಗಗಳನ್ನು ಶೀಘ್ರ ಗುಣಪಡಿಸಲು ಕಷ್ಟ ಸಾಧ್ಯವಾಗಿದೆ. ಸಾಮಾನ್ಯವಾಗಿ ಚರ್ಮವ್ಯಾಧಿ ಗೋಚರಿಸಿದಾಗ, ವಾತಾವರಣದ ಬದಲಾವಣೆ ಎಂದಾಗಲೀ, ತಿನ್ನುವ ಆಹಾರದಿಂದ ಎಂದಾಗಲೀ, ದಿನನಿತ್ಯ ಶರೀರ ನೈರ್ಮಲ್ಯಕ್ಕೆ ಬಳಸುವ ಕೆಲವೊಂದು ಸಾಧನಗಳಿಂದಾಗಲೀ ಅಥವಾ ನಮ್ಮ ಜಾತಕದಲ್ಲಿ ಅಂಗಾರಕ ದೋಷದಿಂದಾಗಲೀ ಬಂದಿದೆ ಎಂಬ ನಂಬಿಕೆ ಬರುತ್ತದೆ. ಆದರೆ ಪ್ರತಿಯೊಂದು ಚರ್ಮ ವ್ಯಾಧಿಗೂ ಅದರದೇ ಆದ ಕಾರಣಗಳಿವೆ.

ಪ್ರಚಲಿತವಿರುವ ಒಂದು ಸಾಮಾನ್ಯ ಚರ್ಮವ್ಯಾಧಿ ಗಜಕರ್ಣ (ECZEMA). ಹುಣ್ಣಿಮೆಯ ಸಮಯದಲ್ಲಿ ಇದು ಜಾಸ್ತಿಯಾಗಿ ಅಮವಾಸ್ಯೆಯ ಸಮಯದಲ್ಲಿ ಕಡಿಮೆಯಾಗುವುದು ಇದರ ಸ್ವಭಾವ. ಇದು ದೇಹದಲ್ಲಿ ಉಂಟಾಗುವ ಆಂತರಿಕ ಬದಲಾವಣೆಯಿಂದ ಉಂಟಾಗುವ ಖಾಯಿಲೆ. ಚರ್ಮದಲ್ಲಿ ಕಂಡು ಬರುವ ಹುಳುಕಜ್ಜಿ (Scabies), ಮಕ್ಕಳಲ್ಲಿ ಕಾಣಿಸಿಕೊಳ್ಳುವ ಕಜ್ಜಿ ಇವು ವೈಯಕ್ತಿಕ ನೈರ್ಮಲ್ಯದ ಕೊರತೆಯಿಂದ ಬರುವ ಖಾಯಿಲೆ. ಆದರೆ ಇವು ನಾವು ಉಪಯೋಗಿಸುವ ಆಹಾರದಿಂದ ಬರುವ ಕಾಯಿಲೆ ಎಂಬ ತಪ್ಪು ತಿಳುವಳಿಕೆ ಸಾಮಾನ್ಯ ಜನರಲ್ಲಿ ಇದೆ. ಪಿತ್ತದ ಗ್ರಂಥಿಯ ಖಾಯಿಲೆ (Urticaria) ನಾವು ತಿನ್ನುವ ಯಾವುದೋ ಆಹಾರವೋ ಔಷಧಿಯೋ ಒಗ್ಗದ ಕಾರಣ ದಿಂದಾಗಿ ಬರುತ್ತದೆ. ಶರೀರ ಮಜ್ಜನಕ್ಕಾಗಿ ಉಪಯೋಗಿಸುವ ಸಾಬೂನಿನಿಂದ ಚರ್ಮವ್ಯಾಧಿ ಜಾಸ್ತಿಯಾಗುತ್ತದೆ ಎಂಬ ತಪ್ಪು ತಿಳುವಳಿಕೆಯಿಂದಾಗಿ ಕಡಲೆ ಹಿಟ್ಟನ್ನೋ ಅಥವಾ ಅಂತಹದೇ ವಸ್ತುಗಳನ್ನೋ ಉಪಯೋಗಿಸುವ ಪದ್ಧತಿ ನಮ್ಮಲ್ಲಿ ಬಳಕೆಯಲ್ಲಿದೆ. ಆದರೆ ಯಾವುದು ಒಳ್ಳೆಯದು ಎಂದು ಭಾವಿಸುತ್ತೇವೋ ಅದರಿಂದ ದುಷ್ಪರಿಣಾಮಗಳು ಉಂಟಾಗುವ ಸಾಧ್ಯತೆಯಿದೆ. ಕಡಲೆಹಿಟ್ಟಿನ ಸಣ್ಣ ಕಣಗಳು ಕಜ್ಜಿ ಅಥವಾ ಗಾಯಗಳೊಳಗೆ ಸೇರಿಕೊಂಡು ಗಾಯ ಜಾಸ್ತಿಯಾಗುವುದೇ ವಿನಾ ಗುಣವಾಗುವ ಸಾಧ್ಯತೆ ಕಡಿಮೆ.

ಇನ್ನು ಗುಹ್ಯ ರೋಗಗಳ ವಿಚಾರವಾಗಿಯಂತೂ ತುಂಬಾ ತಪ್ಪು ಕಲ್ಪನೆಗಳಿವೆ. ಸಾರ್ವಜನಿಕ ಕಕ್ಕಸು ಬಳಕೆಯಿಂದ, ಖಾರವಾದ ಪದಾರ್ಥಗಳ ಸೇವನೆಯಿಂದ, ಸರಿಯಾದ ಪ್ರಮಾಣದ ಆಹಾರ ಸೇವಿಸದೆ ಇರುವುದರಿಂದ, ಪೂರ್ವ ಜನ್ಮದ ಪಾಪದ ಫಲದಿಂದ, ದೈವ ಶಾಪದಿಂದ, ಗ್ರಹಗತಿಯ ದೋಷದಿಂದ, ಮಾಟ, ನಕ್ಷತ್ರ ಫಲದಿಂದ, ಭೂತಪ್ರೇತ ಬಾಧೆಯಿಂದ, ಮುಷ್ಟಿಮೈಥುನದಿಂದ ಗುಹ್ಯ ರೋಗ ಬರುತ್ತದೆ ಎಂಬ ಭಾವನೆ ಸಾಮಾನ್ಯರಲ್ಲಿ ಇದೆ. ಆದರೆ ಯಾವುದೇ ಗುಹ್ಯ ರೋಗವು ಖಂಡಿತವಾಗಿ ಅನೈತಿಕವಾದ ಸಂಬಂಧದಿಂದಲೇ ಬರುತ್ತದೆ ವಿನಾ ಮೇಲಿನ ಯಾವುದೇ ಕಾರಣವಿರುವುದಿಲ್ಲ. ಇದು ಕೇವಲ ತಾನು ಮಾಡಿದ ತಪ್ಪನ್ನು ಮರೆಮಾಚಲು ಹೇಳುವ ನೆಪವೇ ಆಗಿದೆ.

ನಮ್ಮಲ್ಲಿ ಕೋಕೇನ್ ಎಂಬ ಔಷಧಿಯನ್ನು ತೆಗೆದುಕೊಂಡರೆ ಲೈಂಗಿಕ ಶಕ್ತಿ ಜಾಸ್ತಿಯಾಗುತ್ತದೆ, ಮದ್ಯಪಾನ ಮಾಡಿದರೆ ಲೈಂಗಿಕ ಸಾಮರ್ಥ್ಯ ಅಧಿಕವಾಗುತ್ತದೆ ಎಂಬ ತಪ್ಪು ನಂಬಿಕೆಯಿದೆ. ಆದರೆ ಈ ಅಮಲು ಪದಾರ್ಥಗಳಿಂದ ಲೈಂಗಿಕ ಶಕ್ತಿ ಖಂಡಿತಾ ವೃದ್ಧಿಸುವುದಿಲ್ಲ. ಮದ್ಯಪಾನದ ಬಗ್ಗೆ ಶೇಕ್ಸ್‌ಪಿಯರ್ ಬಹಳ ಚೆನ್ನಾಗಿ ತಿಳಿಸಿದ್ದಾನೆ. Alcohol induce the desire but take away the performance. ಹಾಗಾಗಿ ಮದ್ಯ ಅಥವಾ ಕೋಕೇನ್ ಸೇವಿಸಿ, ಕೊನೆಯಲ್ಲಿ ಲೈಂಗಿಕ ದುರ್ಬಲತೆಯನ್ನು ಹೊಂದಿದವರು, ತಮ್ಮ ಅಸಮರ್ಥತೆಗೆ ತಮ್ಮ ಪತ್ನಿಯೇ ಕಾರಣವೆಂದು ದೂಷಿಸುತ್ತಾರೆ.

**ಮದ್ಯ ಅಥವಾ ಕೋಕೇನ್ ಸೇವನೆಯಿಂದ ಲೈಂಗಿಕ ದುರ್ಬಲತೆ ಹೊಂದಿದವರು ತಮ್ಮ ಅಸಮರ್ಥತೆಗೆ ಪತ್ನಿಯೇ ಕಾರಣವೆಂದು ದೂಷಿಸುತ್ತಾರೆ**

ಪ್ರತಿಯೊಬ್ಬ ಮನುಷ್ಯನೂ ವಯಸ್ಸಿನ ಬದಲಾವಣೆಗೆ ಬದ್ಧ, ದೈಹಿಕ ಹಾರ್ಮೋನುಗಳ ಬದಲಾವಣೆಗೆ ಒಳಗಾಗಿ ಚರ್ಮದ ಮೇಲಿರುವ (ಎಣ್ಣೆ ಸೂಸುವ) ಗ್ರಂಥಿಗಳಿಂದ ಮುಖದ ಮೇಲೆ ಮೊಡವೆಗಳು ಕಾಣಿಸಿಕೊಳ್ಳುತ್ತವೆ. ಚಾಕಲೇಟು, ಬಿಸ್ಕೀಟು, ಎಣ್ಣೆ ತಿಂಡಿ ಜಾಸ್ತಿಯಾಗಿ ತಿಂದರೆ ಮೊಡವೆ ಉಂಟಾಗುತ್ತದೆ ಎನ್ನುವವರಿಗೆ ಜ್ಞಾನಶೂನ್ಯರು ಎನ್ನದಿರಲಾದೀತೆ? ವೈದ್ಯಕೀಯ ಸಂಶೋಧನೆ ಹಾಗೂ ಚರ್ಮರೋಗ ತಜ್ಞರ ಸುದೀರ್ಘವಾದ ಅನುಭವದಿಂದ ಚಾಕಲೇಟು, ಎಣ್ಣೆ ತಿಂಡಿಗಳಿಂದ ಮೊಡವೆಗಳು ಖಂಡಿತಾ ಬರುವುದಿಲ್ಲ ಎಂಬುದು ಸತ್ಯ ವಿಚಾರ.

ಬಿದ್ದ ಗಾಯಗಳಿಗೆ ಅಥವಾ ಯಾವುದೇ

ಗಾಯಗಳಿಗೆ ಔಷಧಯುಕ್ತ ಪಟ್ಟಿ (Medicated Plaster) ಮತ್ತು ನೀರು ನಿರೋಧಕ ಪಟ್ಟಿ (Waterproof Plaster) ಯನ್ನು ಹಚ್ಚಿ ಮತ್ತೆ ಓಡಾಡಿರಿ. ಇದು ದಿನ ನಿತ್ಯ ದೂರದರ್ಶನದಲ್ಲಿ ಕಂಡುಬರುವ ಪ್ರಚಾರ. ಆದರೆ ಇದರಲ್ಲಿರುವ ಸತ್ಯಾಂಶ ಎಷ್ಟು ಎಂದು ತಿಳಿದಾಗ ಪ್ರಚಾರದ ಗುಟ್ಟು ಬಯಲಾದೀತು. ತೇವ ನಿರೋಧಕ ಪಟ್ಟಿ ಹಚ್ಚಿದಾಗ ಗಾಯದ ಭಾಗವು ಮುಚ್ಚಲ್ಪಟ್ಟು, ಅಲ್ಲಿ ರೋಗಾಣುಗಳು ಉಲ್ಬಣವಾಗುವುದಕ್ಕೆ ಕಾರಣವಾಗುತ್ತದೆ.

ಬಹು ಪುರಾತನವೂ, ಕಳಂಕಪೂರಿತವೂ ಆದ ಇನ್ನೊಂದು ಕಾಯಿಲೆಯಾದ ಕುಷ್ಠರೋಗ ನಾಗನ ಶಾಪ, ಪೂರ್ವಜನ್ಮದ ಪಾಪ, ಸರ್ಪವನ್ನು ಕೊಲ್ಲುವುದರಿಂದ ಬರುತ್ತದೆ; ಅಥವಾ ಇದೊಂದು ಲೈಂಗಿಕ ರೋಗ, ವಂಶ ಪಾರಂಪರ್ಯವಾದದ್ದು, ಇದು ಜೇಡ ಕಡಿತದಿಂದ ಬರುವ ರೋಗ ಎಂಬ ಮೂಢ ನಂಬಿಕೆ ಸಾಮಾನ್ಯರಲ್ಲಿ ಇದೆ. ಇದು ನರ ಮತ್ತು ಚರ್ಮವನ್ನು ಬಾಧಿಸುವ ಒಂದು ಕಾಯಿಲೆ. ಲೆಪ್ರಾಬ್ಯಾಸಿಲೆ ಎಂಬ ಸೂಕ್ಷ್ಮಾಣು ನರಗಳ ಮೇಲೆ ಪರಿಣಾಮ ಬೀರುವುದರಿಂದ ಚರ್ಮದ ಮೇಲೆ ಸ್ಪರ್ಶ ಜ್ಞಾನವಿಲ್ಲದ ಬಿಳಿ ಅಥವಾ ತಾಮ್ರ ಬಣ್ಣದ ಮಚ್ಚೆ ಕಾಣಿಸಿಕೊಳ್ಳುತ್ತದೆ. ಆದರೆ ಅಂಗವಿಕಲತೆಯನ್ನು ಕುಷ್ಠ ರೋಗದಲ್ಲಿ ಗುರುತಿಸಿದರೂ ಇದು ರೋಗ ಚಿಹ್ನೆಯಲ್ಲ. ಬದಲಾಗಿ ರೋಗಿಯ ಅಜಾಗ್ರತೆಯ ಫಲ. ಚಿಕಿತ್ಸೆಯೇ ಇಲ್ಲ ಎಂದು ತಿಳಿದಿದ್ದ ಈ ರೋಗವನ್ನು ಈಗ ಬಹಳ ಕಡಿಮೆ ಅವಧಿಯಲ್ಲಿ ಗುಣಪಡಿಸಲಾಗುತ್ತಿದೆ. ಇದು ವೈದ್ಯಕೀಯ ಮುನ್ನಡೆಗೆ ಸಾಕ್ಷಿ.

ಯಾವುದೇ ವಿಚಾರವಾದ ನೈಜತೆಯ ಅರಿವಿಲ್ಲದಾಗ ಅದೊಂದು ಸಮಸ್ಯೆಯಾಗಿ ಪರಿಣಮಿಸುತ್ತದೆ. ಸಮಸ್ಯೆ ಎದುರಾದಾಗ ಅಜ್ಞಾನಯುಕ್ತ ಭೀತಿ, ಮೂಢ ನಂಬಿಕೆ ನಮ್ಮಲ್ಲಿ ಮನೆ ಮಾಡುತ್ತದೆ. ಆರೋಗ್ಯದ ವಿಚಾರವಾಗಿಯಂತೂ ಇದು ಗಂಡಾಂತರಕಾರಿ ಸಮಸ್ಯೆಯೇ ಆಗುತ್ತದೆ. ಇದರಿಂದ ಮನುಷ್ಯ, ದೈಹಿಕವಾಗಿ ಮಾನಸಿಕವಾಗಿ, ಹಾಗೆಯೇ ಸಾಮಾಜಿಕವಾದ ಅಧಃಪತನದತ್ತ ಜಾರುತ್ತಾನೆ. ೨೦೦೦ನೇ ವರ್ಷಕ್ಕೆ ಕೇವಲ ಬೆರಳೆಣಿಕೆಯ ಅವಧಿಯಿದೆ. ಅಂದಾಗ ಇದನ್ನು ಸಾಧಿಸಲು, ಅಜ್ಞಾನದ ಅಂಧಕಾರದ ಕೋಟೆಯನ್ನು ಕಿತ್ತೊಗೆದು ಹೊರಬರಲೇಬೇಕು. ●

## ಅರಳುತ್ತಿರುವ ಸಂಗೀತ ಕುಸುಮ

# ಕುಮಾರಿ ರಾಜಶ್ರೀ ಗೊಬ್ಬೂರ

ಕವಿ ಚಕ್ರವರ್ತಿ ರನ್ನನ ಜನ್ಮಭೂಮಿಯಾದ ಮುಧೋಳದಲ್ಲಿ ಸಾಹಿತ್ಯ ಸಂಗೀತ ಕಲಾ ಪ್ರತಿಭೆಗಳಿಗೆ ಬರವಿಲ್ಲ. ಅವುಗಳಲ್ಲಿ ಕೋಗಿಲೆಯನ್ನು ನಾಚಿಸುವ ಸುಮಧುರ ಕಂಠದ ಯುವ ಗಾನ ಕಿಶೋರಿ ರಾಜಶ್ರೀ ಗೊಬ್ಬೂರ ಒಬ್ಬಳು. ರಾಜಶ್ರೀ ಹಾಡುತ್ತಿದ್ದರೆ ಅದು ಹಾಡಲ್ಲ ಗಂಧರ್ವಗಾನ, ಬೀಸುವ ತಂಗಾಳಿಯ ನರ್ತನ; ಹರಿಯುವ ನದಿಯ ತರಂಗ ಲಹರಿಯಂತೆ. ವಾರಿಗೆಯ ಹುಡುಗಿಯರೊಂದಿಗೆ ಕುಂಟಾ ಬಿಲ್ಲೆ ಆಡಬೇಕಾದ ಈ ಪೋರಿ ಸಂಗೀತದ ದಾಸಿಯಾಗಿದ್ದಾಳೆ.



ಬಿಜಾಪೂರದಲ್ಲಿ ಡಿ.ಸಿ.ಸಿ ಬ್ಯಾಂಕ್‌ನಲ್ಲಿ ಲೆಕ್ಕಾಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಿರುವ ಗೊಬ್ಬೂರರ ಇವರ ಮುದ್ದಿನ ಕುವರಿಯಾದ ರಾಜಶ್ರೀ ಜನಿಸಿದ್ದು ಸಿಂದಗಿ ತಾಲೂಕಿನ 'ಕೊಂಡಗೋಳಿ' ಎಂಬಲ್ಲಿ. ಸದ್ಯಕ್ಕೆ ಮುಧೋಳದ R.M.G ಪ್ರೌಢ ಶಾಲೆಯಲ್ಲಿ ೯ನೇ ತರಗತಿಯಲ್ಲಿ ಓದುತ್ತಿರುವ ಈ ಬಾಲೆಗೆ ಸಂಗೀತದ ಬಗ್ಗೆ ಚಿಕ್ಕಂದಿನಲ್ಲಿಯೇ ಆಸಕ್ತಿ ಬೆಳೆಯಿತು. ಇವಳಿಗೆ ಗುರುವಾಗಿ ಮಾರ್ಗದರ್ಶಕರಾಗಿ ಬಂದವರು ಮುಧೋಳದ ಸಂಗೀತ ವಿದ್ವಾನ್ ನಿಂಗಪ್ಪ ಡಂಗಿ ಗವಾಯಿಗಳು. ರಾಜಶ್ರೀ ಕಳೆದ ನಾಲ್ಕೈದು ವರ್ಷಗಳಿಂದ ತನ್ನ ಸಂಗೀತ ಗುರುಗಳಾದ ನಿಂಗಪ್ಪ ಡಂಗಿಯವರ ಬಳಿ ಶಾಸ್ತ್ರೀಯ ಸಂಗೀತಾಭ್ಯಾಸ ಮಾಡುತ್ತಿದ್ದಾಳೆ.

ಈವರೆಗೆ ರಾಜಶ್ರೀ ಸಂಗೀತ ಸಾಧನೆ ಅಮೋಘವಾಗಿದೆ. ಹುಬ್ಬಳ್ಳಿಯ ಎರಡತ್ತಿನ ಮಠ, ಮೂರು ಸಾವಿರ ಮಠದ ಜಗದ್ಗುರುಗಳ ಸಾನ್ನಿಧ್ಯದಲ್ಲಿ ಹಾಗೂ ಬಾದಾಮಿಯ ಶಿವಯೋಗಿ ಮಂದಿರದಲ್ಲಿ, ಮಹಾಲಿಂಗಪೂರದಲ್ಲಿ ಗದುಗಿನ ಡಾ. ಪುಟ್ಟರಾಜ ಗವಾಯಿಗಳ ಸನ್ಮಾನ ಸಮಾರಂಭದಲ್ಲಿ ತನ್ನ ಸಂಗೀತ ಪ್ರತಿಭೆಯನ್ನು ತೋರಿಸಿದ್ದಾಳೆ. ಪ್ರತಿವರ್ಷ ಮುಧೋಳದಲ್ಲಿ ಜರುಗುವ ದಿ.ಪಂಚಾಕ್ಷರಿ ಗವಾಯಿಗಳ ಪುಣ್ಯಾರಾಧನೆ ಕಾರ್ಯಕ್ರಮದಲ್ಲಿ ಹಾಡುತ್ತ ಬಂದಿದ್ದಾಳೆ. ಅಲ್ಲದೇ ಬಿಜಾಪುರದ ನವರಸಪೂರ ಸಂಗೀತೋತ್ಸವ, ಹಾಗೆಯೇ ಮುಧೋಳದಲ್ಲಿ ಜರುಗಿದ ೬೪ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿಯೂ ಕೂಡ ತನ್ನ ಸುಮಧುರ ಕಂಠದ ಗಾಯನದಿಂದ ಅನೇಕ ಸಂಗೀತ ಪ್ರೇಮಿಗಳ ಮನಸ್ಸನ್ನು ಸೂರೆಗೊಂಡಿದ್ದಾಳೆ. ಈಕೆ ಅನೇಕ ಬಹುಮಾನ ಪ್ರಶಸ್ತಿ ಅರ್ಹತಾ ಪತ್ರಗಳನ್ನು ಪಡೆದಿದ್ದು ಈ ರನ್ನನಾಡಿಗೆ ಒಂದು ಹೆಮ್ಮೆಯ ಸಂಗತಿ.

ಈ ಭಾಗದ ಜನತೆಗೆ ರಾಜಶ್ರೀಯ ಸಂಗೀತ ಸುಧೆ ಚಿರಪರಿಚಿತ. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಹಾಗೂ ವಚನ ಸಂಗೀತ ಗಾಯನ ಕ್ಷೇತ್ರದಲ್ಲಿ ಆಸಕ್ತಿ ಹೊಂದಿರುವ ಕು. ರಾಜಶ್ರೀ ಗೊಬ್ಬೂರ ರಾಜ್ಯ ಸರ್ಕಾರ ನಡೆಸುವ ಹಿಂದೂಸ್ತಾನಿ ಶಾಸ್ತ್ರೀಯ ಜೂ. ಸಂಗೀತ ಗ್ರೇಡ ಪರೀಕ್ಷೆ ಮತ್ತು ನೆರೆಯ ಮಹಾರಾಷ್ಟ್ರ ಸರ್ಕಾರ ನಡೆಸುವ ಗಂಧರ್ವ ಮಹಾವಿದ್ಯಾಲಯ ಮಾಧ್ಯಮ ಪ್ರಥಮ ಪರೀಕ್ಷೆಯಲ್ಲಿ ಪ್ರಥಮದರ್ಜೆಯಲ್ಲಿ ಉತ್ತೀರ್ಣಳಾಗಿದ್ದಾಳೆ. ಸುಗಮಸಂಗೀತ, ಭಾವಗೀತೆ, ಭಕ್ತಿಗೀತೆಗಳೊಂದಿಗೆ ಸುಮಾರು ೩೦ ರಾಗಗಳನ್ನು ಲಯ ಶ್ರುತಿ, ತಾಳದೊಂದಿಂಗೆ ಹಾಡುವ ರಾಜಶ್ರೀ, ಮಹಾನ್ ಸಂಗೀತ ದಿಗ್ಗಜರಂತಾಗಲು ಇಷ್ಟ ಪಡುವಳು!

❍ ಹಂಸಗೀತೆ ಮುಧೋಳ

# ಭಾರತದ ಅಷ್ಟ ಭ್ರಷ್ಟಾಚಾರ್ಯರು



## ಪಕ್ರಾಂತ ಯುದ್ಧ

○ ಎನ್.ಕೆ. ಕುಲಕರ್ಣಿ
''ಪರಿಮಳ''
ರೇಲ್ವೆ ಗೂಡ್ಸ್‌ಶೆಡ್ ಬಳಿ, ಧಾರವಾಡ-೭

ಎಂಟು ಪಾಂಚವಾರ್ಷಿಕ ಯೋಜನೆಗಳನ್ನು ಯಶಸ್ವಿಯಾಗಿ ಪೂರೈಸಿದ 50ರ ಸ್ವತಂತ್ರ ಭಾರತವನ್ನು ತಮ್ಮ ಕೈಲಾದ ಮಟ್ಟಿಗೆ ಲೂಟಿ ಮಾಡಿದ ಅಷ್ಟ ಭ್ರಷ್ಟಾಚಾರ್ಯರನ್ನು ಭಕ್ತಿಯಿಂದ ಸ್ಮರಣೆ ಮಾಡುವುದೀಗ ಪ್ರಸ್ತುತವಲ್ಲವೆ? ಒಂದೊಂದು ಯೋಜನೆಗೆ ಒಂದೊಂದಾದರೂ ಮೈಲುಗಲ್ಲು ಎನಿಸಿದ ಸ್ಕೀಮ್ (Scheme)ಅರ್ಥಾತ್ ಸ್ಕ್ಯಾಮ್ (Sceam) ಎಂದರೆ ಒಂದೊಂದು ಸ್ಕ್ಯಾಮ್‌ನಲ್ಲಿ ಒಬ್ಬೊಬ್ಬರಾದರೂ ಏಸ್ (Ace) ಭ್ರಷ್ಟಾಚಾರ್ಯರು ಬೇಡವೆ? ನಮ್ಮ ದೇಶದ ಒಂದೊಂದು ಪಂಚವಾರ್ಷಿಕ ಯೋಜನೆ ಎಂದರೆ ಎಷ್ಟು ಪುಣ್ಯ ಕೋಟಿ ಸ್ವಾಹಾ ಆಗಬೇಕು-ಯಾರು ಲೆಕ್ಕ ಇಟ್ಟಿದ್ದಾರೆ? ಮಹಾಭಾರತದ ಅಷ್ಟವಸುಗಳಂತೆ ಈ ಅಷ್ಟ ಭ್ರಷ್ಟಾಚಾರ್ಯರು ಸ್ವತಂತ್ರ ಭಾರತದ ಮಹಾ ಚುನಾವಣೆಗಳಲ್ಲಿ ಮತಿ ಅವಶ್ಯವಿಲ್ಲದ ಮತಗಳ ಬೇಟೆಯಾಡಿ, ದೇಶವನ್ನು ಲೂಟಿ ಮಾಡಿ ವಿದೇಶೀ ಸಾಲದ ಮೇರು ಶೈಲವನ್ನು ಮುಗಿಲುದ್ದಕ್ಕೆ ಎತ್ತರಿಸಲು ಗುತ್ತುಗಾರಿಕೆಯ ಎತ್ತುಗಡೆ ಮಾಡಿದ್ದಾರೆ.

ಅಷ್ಟೈಶ್ವರ್ಯಗಳನ್ನು ಪಡೆದ ಈ ಅಷ್ಟ ಕುಬೇರರ ಹೆಸರುಗಳನ್ನು ಊಹಿಸಿಕೊಳ್ಳಲು ನೀವು ಸ್ವಸಮರ್ಥರಿರುವಾಗ ಮತ್ತೆ ನನ್ನ ಬಾಯಿಂದೇಕೆ ಆ ಭಾಗ್ಯ ಪುರುಷರ ಪುಣ್ಯನಾಮೋಚ್ಚರಣೆ? ಒಂದು ಲೋಫರ್ ಸ್ಕ್ಯಾಂ, ಒಂದು ಹರ್ಷದಾಯಕ ಸ್ಕ್ಯಾಂ, ಒಂದು ಹುಲಿಯ ಹಾಲಿನ ಮೇವಿನ ಸ್ಕ್ಯಾಂ, ಒಂದು ಫೋರ್ಜರೀ ಸ್ಕ್ಯಾಂ, ಒಂದು ಕುರ್ಚಿ ರಕ್ಷಣೆಗಾಗಿ ಖುಷಿ ನೀಡಿದ ಕಿಸ್ಸಾಕುರ್ಸೀಕಾ ಸ್ಕ್ಯಾಂ, ವಿದೇಶೀ ಔಷಧಿಗಳ ಆಮದಿನ ಸ್ಕ್ಯಾಂ, ಟೆಲಿಕಮ್ಯೂನಿಕೇಶನ್ ಸ್ಕ್ಯಾಂ ಇತ್ಯಾದಿ ಇತ್ಯಾದಿ ಮೇಜರ್ ಮೈನರ್ ಸ್ಕ್ಯಾಂಗಳನ್ನು ಲೆಕ್ಕ ಹಾಕುತ್ತ ಹೋದಂತೆ ಆಯಾ ವಿಧಾತರ ವಿಶೇಷ ನಾಮಗಳು ತಮ್ಮ ಸ್ಮರಣೆಗೆ ಬಂದೇ ಬರುತ್ತವೆ. ಈ ಮಹಾವರ್ಷದಲ್ಲಿ ಈ ನಾಮಸ್ಮರಣೆ, ಎಂದರೆ ನವವಿಧ ಭಕ್ತಿಗಳಲ್ಲಿ ಒಂದಾದ ಈ ದಿವ್ಯ ನಾಮಸ್ಮರಣೆ ಒಂದೇ ಸಾಲದೆ?



ಮೊದಲು ಮಿಸ್ಟರ್ ಲಕ್ಕೆ ಎಂಬ ಭ್ರಷ್ಟಾಚಾರ್ಯರ ಭಾಗವತ ಪುರಾಣ ಬೇಕೆ? ಈ ಭ್ರಷ್ಟಾಚಾರ್ಯರ ಉಪಾಖ್ಯಾನಗಳೆಲ್ಲ ಬಹುಶಃ ದಶಮಸ್ಕಂಧದಲ್ಲಿಯೆ ವಿಶೇಷವಾಗಿ ನಿರೂಪಿಸಲ್ಪಟ್ಟಿವೆ. ಮೊದಲಿಗೆ ಮಿಸ್ಟರ್, ಅರ್ಥಾತ್ ಮಿನಿಸ್ಟಾರ್ ಅಲ್ಲಲ್ಲ ಮಿನಿಸ್ಟರ್ ಲಕ್ಕೆ ಉಪಾಖ್ಯಾನ. ಮಿಸ್ಟರ್ ಲಕ್ಕೆ ಹತ್ತು ತಿಂಗಳ ಮಗುವಾಗಿದ್ದಾಗಲೆ ತಾಮ್ರದ ನಾಣ್ಯಗಳನ್ನು ನುಂಗುವಲ್ಲಿ ತಿಮಿಂಗಲ ಮರಿಯಾಗಿದ್ದ. ಮೊದಲು ಒಂದು ಅಡ್ಡೇರಿಯನ್ನು ಪೆಪ್ಪರ್‌ಮಿಂಟೆಂದು ತಿಳಿದು ಬಾಯೊಳಗೆ ಹಾಕಿಕೊಂಡ. ಅದು ಗಂಟಲಿಗೆ ಹತ್ತಿ ಒಳಗೆ ನುಂಗಲೂ ಬಾರದೆ ಹೊರಗೆ ಉಗುಳಲೂ ಬಾರದೆ ಕಣ್ಣು ಬೆಳ್ಳಗಾಗಿ ಮೈ ನೀಲಿ ಆಯಿತು. ಆತನ ತಾಯಿ ಅಡ್ರಾಸಿ ಬಂದು ಗಂಟಲೊಳಗೆ ಬೆರಳು ತುರುಕಿ, ಬೆರಳು ಕೊಂಕಿಸಿ ಹೇಗೋ

ಹೊರ ತೆಗೆದಳು.

ಹತ್ತು ತಿಂಗಳ ಮಗುವಿಗೆ ಪಶ್ಚಾತ್ತಾಪ ಎಂಬುದಿರುತ್ತದೆ. ಒಂದೂವರೆ ವರ್ಷದ ಲಕ್ಷ್ಮೆ ಈ ಸಲ ಒಂದು ರೂಪಾಯಿ - ಆಗಿನ ಶುದ್ಧ ಬೆಳ್ಳಿಯ ರೂಪಾಯಿ ಬಾಯೊಳಗೆ ಹಾಕಿಕೊಂಡು ಒದ್ದಾಡಿದ. ಡಾಕ್ಟರರ ಸಹಾಯದಿಂದ ಹೇಗೋ ಹೊರ ತೆಗೆಯಲಾಯಿತು. ಮುಂದೆ ಇಪ್ಪತ್ತು ವರ್ಷದ ಲಕ್ಷ್ಮೆ ತಮ್ಮ ಹೆಡ್‌ಮಾಸ್ತರರ ಮನೆಯಲ್ಲಿ ಅವರ ಮಗಳ ಹುಟ್ಟುಹಬ್ಬದಲ್ಲಿ ಮಗುವಿನ ಕೊರಳಲ್ಲಿ ಹಾಕಿದ್ದ ಪವನದ ಸರದಲ್ಲಿ ಒಂದು ಚಿನ್ನದ ಪದಕ (ಅದೇ ಪವನ)ವನ್ನು ಕಿತ್ತು ಗಳಂ ಕೃತ ಮಾಡಿದ. ಮರುದಿನ ಸಂಡಾಸ್‌ನಲ್ಲಿ ಸಾವರಿನ್ ದೊರಕಿತು. ಲಕ್ಷ್ಮೆ ಸರಕಾರಿ ನೌಕರನಾದ. ದುಡ್ಡು ತಿನ್ನುವುದು Physically ಸಾಧ್ಯವಾಗದೆ ನೂರು ರೂಪಾಯಿ ಕರೆನ್ಸಿ ನೋಟನ್ನು ಮಾತ್ರ ನುಂಗಿ, ಮತ್ತೆ ಮನೆಯಲ್ಲಿ ವಾಂತಿ ಮಾಡಿಕೊಂಡು ಹೊರತೆಗೆದ. ಹೀಗೆ ಲಕ್ಷ್ಮೀರಾಯನ ವಾಂತಿ-ಭೇದಿಗಳು ದುಡ್ಡು ತಿನ್ನುವ entrnce, exitಗಳಾದುವು. ಲಕ್ಷ್ಮೆರಾಯ ಮುಂದೆ ಸಮಾಜ ಪುಢಾರಿಯಾದ. ಚುನಾವಣಾ ಅಭ್ಯರ್ಥಿಯಾದ. ಶಾಸಕನಾದ, ಮಂತ್ರಿಯಾದ. ಮುಖ್ಯಮಂತ್ರಿಯಾದ. ಮೇವಾಗಿ, ಮಾವಾಗಿ ದುಡ್ಡು ತಿಂದು ಜೀರ್ಣಸಿಕೊಳ್ಳತೊಡಗಿದ. ಮಿಡಾಸನಿಗೆ ಮುಟ್ಟಿದ್ದೆಲ್ಲಾ ಚಿನ್ನವಾಗುವ ವರ ಸಿಕ್ಕಿತ್ತು. ಈ ನಮ್ಮ ಲಕ್ಷ್ಮೆಮಿಡಾಸ ಬಂಗಾರದ ಮಡಾಸವನ್ನೆ ಮೈಮೇಲೆ ಧರಿಸಿ, ಅದನ್ನೆ ಹಸಿವೆಯಾದಾಗ ನುಂಗುವ. ಹೀಗೆ ದುಡ್ಡನ್ನು, ಬೆಳ್ಳಿ-ಬಂಗಾರ ಕರೆನ್ಸಿಗಳನ್ನೆಲ್ಲಾ ತಿನ್ನುವವರಿಗೆ ದೋಸೆ, ಆಮ್ಲೆಟ್, ಚಿಕನ್ ಯಾವುದು ರುಚಿ ಎನಿಸೀತು?

ಭ್ರಷ್ಟಾಚಾರ್ಯ ಕೃಷ್ಣಪ್ಪನದು ಇನ್ನೊಂದು ರೀತಿ. ಅದೂ ಭಾಗವತ ದಶಮ ಸ್ಕಂಧದ ಮಾದರಿಯೆ. ದಶಮಸ್ಕಂಧದ ಬಾಲಕೃಷ್ಣ ಬೆಣ್ಣೆ ಕಳ್ಳನೆನಿಸಿದನಲ್ಲವೆ? ನಮ್ಮ ಕೃಷ್ಣಪ್ಪ ಬೆಣ್ಣೆ ಕದಿಯಲಿಲ್ಲ. ಆತನಿಗೆ ಹಿತ್ತಿಲು ಬಾಗಿಲಿನಿಂದ ಬಂದು ಬೆಣ್ಣೆ ಹಚ್ಚುವವರೇ ಬಹಳ ಜನ. ಹೀಗಾಗಿ ಭ್ರಷ್ಟಾಚಾರ್ಯ ಕೃಷ್ಣಪ್ಪನವರು ಕದ್ದು ಬೆಣ್ಣೆ ತಿನ್ನದಿದ್ದರೂ ಹಚ್ಚಿದ ಬೆಣ್ಣೆಯನ್ನೆಲ್ಲಾ ಡಬ್ಬಿ ತುಂಬಿಟ್ಟು ನಿತ್ಯವೂ ಬೆಣ್ಣೆ ದೋಸೆಯಲ್ಲೇ ಮೀಯುವುದು, ಮಲಗುವುದು. ಬೆಣ್ಣೆ ದೋಸೆಯನ್ನೆ ಹಾಸುವುದು ಹೊದೆಯುವುದು. ಬೆಣ್ಣೆ ಹಚ್ಚುವವರಿಗೆ ಕೃಷ್ಣಪ್ಪ 'ಬರೀ ಬೆಣ್ಣೆ ಹಚ್ಬೋದು ಬ್ಯಾಡ್ರಿ. ಬೆಣ್ಣೆ ದೋಸೆ ತಂದು ಕೊಡ್ರಿ,' ಎಂದು ಹೇಳುವ. ಕೃಷ್ಣಪ್ಪ ಬೆಣ್ಣೆ ದೋಸೆಯ ಭ್ರಷ್ಟಪ್ಪನಾಗುವ ಮೊದಲು ಆತನೂ ಮಾಡುತ್ತಿದ್ದ ದಂಧೆ ಇದೇ ಬೆಣ್ಣೆ ಹಚ್ಚುವುದು. ಶಾಲಾ ಪರೀಕ್ಷೆಗಳಲ್ಲಿ ಪಾಸಾಗುವ ಒಳದಾರಿಯೊಂದನ್ನು ಕೃಷ್ಣಪ್ಪ ಕಂಡು ಹಿಡಿದಿದ್ದ. ಪರೀಕ್ಷಕರ ಮನೆಗಳಿಗೆ ಬೆಣ್ಣೆ ಒಯ್ದು ಕೊಡುತ್ತಿದ್ದ. "ಸಾರ್, ನಮ್ಮ ಮನೆಗೆ ಹಳ್ಳಿಯವಳು ಬೆಣ್ಣೆಕೊಡುತ್ತಾಳೆ" "ಪೇಟೆ ರೇಟಗಿಂತ ಸೇರಿಗೆ ಎರಡಾಣೆ ಕಮ್ಮಿ. ಅದಕ್ಕೇ

**ಹೀಗೆ ದುಡ್ಡು,**

**ಬೆಳ್ಳಿ-ಬಂಗಾರ**

**ಕರೆನ್ಸಿ ನೋಟು ತಿನ್ನುವವರಿಗೆ**

**ದೋಸೆ, ಆಮ್ಲೆಟ್, ಚಿಕನ್**

**ಯಾವುದು ರುಚಿ ಎನಿಸೀತು?**

ನಮ್ಮಮ್ಮ ನಿಮ್ಮ ಮನೆಗೆ ಕೊಟ್ಟು ಬಾ ಅಂದಳು" ಎಂದು ಹೇಳುವ. ಮಾಸ್ತರರ ಪತ್ನಿ ಬಾಜೂ ಮನೆಯ ಭಾಗೀರ್ತಿಬಾಯಿ ಅವರ ಬೆಣ್ಣೆ ಡಬ್ಬಿ ಕೊಟ್ಟು- "ಅವರ ಮನೆಗೂ ಎರಡು ಸೇರು ತಗೊಂಡು ಬಾಪ್ಪ. ನಮ್ಮ ಹಾಂಗ ಅವರಿಗೆ ಪುಕ್ಕಟೆ ಕೊಡಬೇಡ ರೊಕ್ಕ ಇಸಿದುಕೋ" ಎಂದು ತಾಕೀತು ಮಾಡಿದರು. ಕೃಷ್ಣಪ್ಪನಿಗೆ ಸ್ವಲ್ಪ ಪಂಚಾಯಿತಿಗಿಟ್ಟಿತು. ಆದರೂ ಕೈಯಿಂದ ವಾಲ್ಕಾಣೆ ಹಾಕಿ ಸೋವಿ ದರದಲ್ಲೇ ಬಾಗೀರ್ತಿ ಬಾಯಿಗೂ ಬೆಣ್ಣೆ ತಂದು ಕೊಟ್ಟು ಮಾಸ್ತರರಿಂದ ಶಾಬಾಸಗಿರಿ ಪಡೆದುದಲ್ಲದೆ ಪಾಸೂ ಮಾಡಿಕೊಂಡ. ಹೀಗೆ ಕೃಷ್ಣಪ್ಪ ಮುಂದೆ ರಾಜಕೀಯ ಧರ್ಮಕ್ಷೇತ್ರದ ದ್ವಾರ ಪ್ರವೇಶಿಸಲು ಒಳಗುಟ್ಟು, ಬಲಮಂತ್ರ, ಒಳ ಹೊಡೆತಗಳನ್ನೆಲ್ಲಾ ರೂಢಿಸಿಕೊಂಡಿದ್ದನೆಂದೇ ಮುಂದೆ ಮಿಸ್ಟರ್ ಬೆಣ್ಣೆ ಅಲ್ಲ ಮಿನಿಸ್ಟರ್ ಫಾರ್ ಬೆಣ್ಣೆ ಎಂದೇ ನಾಮಾಂಕಿತನಾದ.

ಭ್ರಷ್ಟಾಪುರದ ಭ್ರಮಿಷ್ಟಪ್ಪ (ಮೂಲ ಹೆಸರು ಭಿಷ್ಟಪ್ಪ) ಈಗೀಗ ಭ್ರಮಿಷ್ಟನೇ ಆಗಿರುವುದರಿಂದ ಜನರೆಲ್ಲಾ ಆತನನ್ನು ಭ್ರಮಿಷ್ಟಪ್ಪ ಎಂತಲೇ ಸಂಭೋಧಿಸುತ್ತಿದ್ದಾರೆ. ಭ್ರಮಿಷ್ಟಪ್ಪ ಹುಟ್ಟಿನಿಂದಲೇ ಹೋರಾಟಗಾರ. ಎಂಜಿನಿಯರಿಂಗ್ ಪ್ರವೇಶಕ್ಕಾಗಿ ತಾನು ಹಿಂದುಳಿದ ಜಾತಿಯವ ಎಂಬ ಪ್ರಮಾಣ ಪತ್ರಕ್ಕೆ ಅಧಿಕೃತ ಅಧಿಕಾರಿಗಳಿಂದ ಪ್ರಮಾಣ ಪತ್ರ ಪ್ರೊಡ್ಯೂಸ್ ಮಾಡಿದ್ದ. ಪ್ರಮಾಣ ಪತ್ರಕ್ಕೆ ಅಧಿಕೃತ ಅಧಿಕಾರಿಯ ಸಹಿ ಹಾಕುವ ಜಾಗೆಯಲ್ಲಿ ಮೇಣವನ್ನು ಸವರಿದಂತೆ ಅನಿಸುತ್ತಿತ್ತು. "ಯೇ, ಇದೇನೊ ನಿನ್ನ ಪ್ರಮಾಣ ಪತ್ರಕ್ಕೆ ನೀನೇ ಖೋಟಾ ಸಹಿ ಮಾಡಿದ್ದೀಯೇನು?" ಎಂದು ಪ್ರಾಂಶುಪಾಲರು ಚೇಷ್ಟೆ ಮಾಡಿದಾಗ - "ಯಾಕೆ ಸಾರ್ ಸಾಹೇಬರ ಮುಂದೆ ಹೀಗೇ ಹೇಳಿ ಹಿಂದುಳಿದವನಿಗೆ ಪ್ರಾಂಶುಪಾಲರು ಹಿಂಸೆ ಕೊಡುತ್ತಿದ್ದಾರೆ ಅಂತ ಹೇಳಿ ಸಾಹೇಬರನ್ನೆ ಇಲ್ಲಿ ಕಾಂಟೆಸ್ಸಾ ಕಾರಿನಲ್ಲಿ ಕರೆತಂದು ಹಿಂದುಳಿದವರ ಬೆಂಬಲದಿಂದ ನಿಮ್ಮನ್ನೇ ಕಂಬಿ ಎಣಿಸಲಿಕ್ಕೆ ಹಚ್ಚಲೇನು?" ಎಂದು ಕೋಪ-ಕಣ್ಣೀರು ಎರಡೂ ಸೇರಿಸಿ ಉಗ್ಗಡಿಸಿದಾಗ ಪ್ರಾಂಶುಪಾಲರು ಮೆತ್ತಗಾಗಿ ಪ್ರವೇಶ ಕೊಟ್ಟುಬಿಟ್ಟರು. ಅಂದಿನಿಂದ ಭಿಷ್ಟಪ್ಪ ತನ್ನ ಹೆಸರು 'ಬಿಚ್ಚಪ್ಪ' ಎಂದು ಮಾಡಿಕೊಂಡು ಹೆಸರಿನಿಂದ ಜಾತಿ ತಿಳಿಯದಂತೆ ಮಾಡಿಕೊಂಡು ಈಗ ರಾಜಕೀಯ ಕುರುಕ್ಷೇತ್ರ ಸೇರಿಕೊಂಡು ಚುನಾವಣೆಗೊಮ್ಮೆ ಪಾರ್ಟಿ ಬದಲಿಸುತ್ತ ಯಾವಾಗಲೂ 'ಟ್ರೆಜರಿಬೆಂಚ್' ನಲ್ಲೇ ಕುರ್ಚಿಗಿಟ್ಟಿಸಿರುತ್ತಾನೆ. ಈ ಬಿಚ್ಚಪ್ಪ, ಭ್ರಷ್ಟಪ್ಪ ಭ್ರಮಿಷ್ಟಪ್ಪ ಹೇಗಾದ? ಅದಕ್ಕೂ ಒಂದು ಕತೆ ಇದೆ. ಯಾವುದೋ ವಿದೇಶಿ ಬ್ಯಾಂಕ್ ವ್ಯವಹಾರದಲ್ಲಿ ಇನ್ನೊಬ್ಬರ ಖೊಟ್ಟಿ ಸಹಿ ಮಾಡಿ ಸಿಕ್ಕು ಬಿದ್ದ. ಅದರಿಂದಾಗಿ ಕುರ್ಚಿ ಕಳೆದುಕೊಂಡಲ್ಲದೆ ಮರ್ಜನೂ ಕಳೆದುಕೊಟ್ಟ, ಮಾನಾನೂ ಕಳೆದುಕೊಂಡ. ಭ್ರಷ್ಟಪ್ಪ ಹೋಗಿ ಭ್ರಮಿಷ್ಟಪ್ಪನಾಗಿ ಬಿಟ್ಟಿದ್ದಾನೆ. ಇದು ಈ ಹೋರಾಟಗಾರನ ಕತೆ. ವಿವಿಧ ಸ್ವಾಹಾಪತಿಗಳ,ಇನ್ನುಳಿದ ಐವರ ಭ್ರಷ್ಟಾಚಾರ ಕಥೆಯೂ ಹೀಗೇ ಹೊನ್ನು, ಹೆಣ್ಣು, ಮಣ್ಣುಗಳ ಕಥೆ, ವ್ಯಥೆ.

●

# ಕ್ವಿಜ್-೩ರ ಬಹುಮಾನ ವಿಜೇತರು

## ಪ್ರಥಮ ಬಹುಮಾನ

ರೂ. ೫೦೦-೦೦



**ಪಕ್ಕಿರೇಶ ಬ. ಅಕ್ಕಿ**
ಸಾ : ಮಜ್ಜಿಗುಡ್ಡ - ೫೮೨ ೨೦೧
ತಾ : ನವಲಗುಂದ   ಜಿ : ಧಾರವಾಡ



## ದ್ವಿತಿಯ ಬಹುಮಾನ

ರೂ. ೨೦೦-೦೦

**ಬಸವರಾಜ ಡಿ.ಹಳೇಮನಿ**
(ಪ್ರಾಥಮಿಕ ಶಾಲೆ ಎದುರಿಗೆ)
ಅಂಚೆ : ಸಿದ್ದಾಪೂರ - ೫೮೪ ೧೩೦
ತಾ : ಗಂಗಾವತಿ   ಜಿಲ್ಲೆ : ಕೊಪ್ಪಳ

## ಸಮಾಧಾನಕರ ಬಹುಮಾನಗಳು   ತಲಾ ರೂ. ೧೦೦/-

**ರವೀಂದ್ರ ಕುಮಾರ್ ಎಚ್.ಜಿ.**
C/o ಆಶಿಯಾನ ಎಂಟರ್‌ಪ್ರೈಸಸ್, ಬೈರಪ್ಪ ಬಿಲ್ಡಿಂಗ್, ಕಸ್ತೂರಿ ಬಡಾವಣೆ, ಮಾರುತಿ ಥಿಯೇಟರ್ ಹಿಂಭಾಗ, ರಾಜಗೋಪಾಲನಗರ, ಪೀಣ್ಯ, ಬೆಂಗಳೂರು - ೫೬೦ ೦೫೮

**ಸವಿತ ಜಿ.ಡಿ.**
D/o ಜಿ. ದಾನಪ್ಪ
ವಿಲೇಜ್ ಅಕೌಂಟೆಂಟ್, ಗಾಂಧಿನಗರ, ಕಂಬಳೇರ್ ಬೀದಿ, ಸಾಗರ - ೫೭೭ ೪೦೧

**ಸೋಮಪ್ಪ ಡಿ. ಕಿಲಾರಹಟ್ಟಿ**
ಪಿ.ಯು.ಸಿ. ದ್ವಿತೀಯ ವರ್ಷ ಶಿಕ್ಷಣ
ಕೆ.ವ್ಹಿ.ಎಸ್.ಆರ್. ಕಾಲೇಜ್,
ಗದಗ-೫೮೨ ೧೦೧

| | |
|---|---|
| ಮೊದಲ ಬಹುಮಾನ | ರೂ. ೫೦೦/- |
| ಎರಡನೇ ಬಹುಮಾನ | ರೂ. ೨೦೦/- |
| ಸಮಾಧಾನಕರ ಬಹುಮಾನಗಳು (ಮೂರು) | ರೂ. ೧೦೦/- |

**ಕ್ವಿಜ್ - ೪**

- ಇದೇ ಸಂಚಿಕೆ ೬೫ನೇ ಪುಟದಲ್ಲಿರುವ ಕ್ವಿಜ್-೪ ಕೂಪನ್‌ನಲ್ಲಿ ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಆಯಾ ಪ್ರಶ್ನೆಯ ಕೆಳಗೆ ನೀಡಲಾದ ಸ್ಥಳದಲ್ಲಿ ಬರೆಯಿರಿ.
- ಒಬ್ಬರು ಎಷ್ಟು ಪ್ರವೇಶ ಪತ್ರಗಳನ್ನಾದರೂ ಕಳಿಸಬಹುದು. ಮುದ್ರಿತ ಕೂಪನ್ನೇ ಬಳಸಬೇಕು. ಜೆರಾಕ್ಸ್ ಪ್ರತಿ ಪರಿಗಣಿಸುವುದಿಲ್ಲ.
- ಪ್ರಥಮ ಬಹುಮಾನ ಪಡೆದವರ ಭಾವಚಿತ್ರ ಪ್ರಕಟಿಸಲಾಗುವುದು.
- ಸರಿಯುತ್ತರಗಳ ಪ್ರವೇಶ ಪತ್ರಗಳನ್ನೆಲ್ಲಾ ಸೇರಿಸಿ ಲಾಟರಿ ಮೂಲಕ ಬಹುಮಾನಗಳನ್ನು ನಿರ್ಧರಿಸಲಾಗುವುದು.
- ಪ್ರವೇಶ ಪತ್ರ ತಲುಪಲು ಅಂತಿಮ ದಿನಾಂಕ ೧-೧೦-೧೯೯೭

## ಕ್ವಿಜ್ - ೩ರ ಸರಿಯುತ್ತರ

೧. ಕರ್ನಾಟಕ ಏಕೀಕರಣ ನಂತರದ ಮೊದಲ ಮುಖ್ಯಮಂತ್ರಿ ಯಾರು?
**ಎಸ್. ನಿಜಲಿಂಗಪ್ಪ**

೨. ದಾದಾ ಸಾಹೇಬ ಫಾಲ್ಕೆ ಪ್ರಶಸ್ತಿ ಪಡೆದ ಕನ್ನಡ ನಟ ಯಾರು?
**ಡಾ. ರಾಜ್‌ಕುಮಾರ್**

೩. ಚಾಲುಕ್ಯರ ರಾಜಧಾನಿ ಯಾವುದಾಗಿತ್ತು?
**ಬಾದಾಮಿ**

೪. ಜಗತ್ಪ್ರಸಿದ್ಧ ಶಿಲಾ ಬಾಲಕಿಯನ್ನು ಕೆತ್ತಿರುವ ದೇವಾಲಯ ಯಾವ ಊರಿನಲ್ಲಿದೆ?
**ಬೇಲೂರು**

೫. ಜೋಗ ಜಲಪಾತ ಯಾವ ಜಿಲ್ಲೆಯಲ್ಲಿದೆ?
**ಶಿವಮೊಗ್ಗ**

# ಬದುಕಿನ ಸವಾಲು!



ಜೀವನದಲ್ಲಿ ಸಣ್ಣದೋ ದೊಡ್ಡದೋ ಅವಗಢಗಳು ಜರುಗಿದಾಗ ಕೆಲವರಿಗೆ ದಾರಿಯೇ ಕಾಣದಂತಾಗಬಹುದು! ಆದರೆ ಅದನ್ನೇ ಒಂದು ಸವಾಲಾಗಿ ಸ್ವೀಕರಿಸಿ ಇತರರೂ ಬೆರಗಾಗುವಂತೆ ಬದುಕುವವರು ಬಹಳ ವಿರಳ. ಅಂಥ ವಿರಳರಲ್ಲಿ ಬಳ್ಳಾರಿ ಜಿಲ್ಲಾ ಹಗರಿಬೊಮ್ಮನಹಳ್ಳಿ ತಾಲೂಕಿನ ಶಿವಾನಂದ ನಗರದ ಬಳಿ ವಾಸಿಸುತ್ತಿರುವ ಎಸ್.ಎಸ್. ಎತ್ತಿನಮನಿ ಒಬ್ಬರು.

ಎತ್ತಿನಮನಿಯವರು ಗ್ರಾಮೀಣ ಬ್ಯಾಂಕಿನಲ್ಲಿ ಈ ಹಿಂದೆ ಅಧಿಕಾರಿಗಳಾಗಿದ್ದವರು. ಅಧಿಕಾರ ಸ್ಥಾನದಿಂದ ನಿರ್ಗಮಿಸಬೇಕಾದ ಪ್ರಸಂಗ ಬಂದಾಗ ಎದೆಗುಂದದೆ ಸೀದಾ ಹಳ್ಳಿಗೆ ಹಿಂತಿರುಗಿದರು!. ಶಿವಾನಂದ ನಗರದ ಬಳಿಯ ಹಳ್ಳದ ಭೂಮಿಯನ್ನು ಯಾರೋ 'ಪುಣ್ಯಾತ್ಮರು' ಇದು ಬಹಳ ಒಳ್ಳೆಯ ಭೂಮಿ ಎಂದು ಹೇಳಿ ಇವರಿಗೆ ದುಬಾರಿ ಬೆಲೆಗೆ ಮಾರಿದರಂತೆ. ಇವರು ದುಡ್ಡು ಎಣಿಸಿ ಭೂಮಿ ಬಳಿ ಹೋದಾಗ ಅದು ಹಳ್ಳ ಹರಿದಾಡಿ ಉಸುಕು ತುಂಬಿದ ಸವಕಳಿ ಭೂಮಿಯಾಗಿತ್ತು! ಆದರೂ ಬೇಸರಿಸದ ಎತ್ತಿನಮನಿಯವರು ಅಲ್ಲೊಂದು ಕೊಳವೆಬಾವಿ ಹಾಕಿಸಿದರು. ನೀರಾವರಿ ಬೇಸಾಯ ಶುರು ಮಾಡಿದರು. ಕೆಲವೇ ದಿನಗಳಲ್ಲಿ ಸಾಂಪ್ರದಾಯಿಕ ರೈತರೂ ಕೂಡ ಬೆರಗಾಗುವಂತೆ ಸಮೃದ್ಧ ಬೆಳೆ ತೆಗೆಯ ತೊಡಗಿದರು! ತೆಂಗು, ಮಲ್ಲಿಗೆ, ಪಪಾಯಿ, ದಾಳಿಂಬೆ ಹೀಗೆ ತೋಟಗಾರಿಕಾ ಕೃಷಿಯ ಜತೆ ಶೇಂಗಾ, ಸೂರ್ಯಕಾಂತಿಯಂಥ ಸಾಂಪ್ರದಾಯಿಕ ಬೆಳೆಗಳನ್ನೂ ಬೆಳೆಯುತ್ತಿದ್ದಾರೆ.

ನಮ್ಮ ಕೃಷಿ ಕ್ಷೇತ್ರದ ಹೊಸ ಹೊಸ ಸಂಶೋಧನೆಗಳನ್ನು ಬಿಡದೆ ಹಿಂಬಾಲಿಸುವ ಇವರು ಹನಿ ನೀರಾವರಿ, ಎರೆಹುಳು ಗೊಬ್ಬರಗಳ ಬಳಕೆ ಮಾಡಿ ಲಾಭಕರ ಬೆಳೆ ಬೆಳೆಯುತ್ತಿದ್ದಾರೆ. ಕ್ರಿಮಿನಾಶಕಗಳ ದುಷ್ಪರಿಣಾಮದ ಸ್ಪಷ್ಟ ಅರಿವಿರುವ ಇವರು ಬೇವಿನ ಎಲೆ, ಬೆಳ್ಳುಳ್ಳಿ, ಸೀಮೆಎಣ್ಣೆಗಳಿಂದಲೇ ಕ್ರಿಮಿನಾಶಕಗಳನ್ನು ತಯಾರಿಸಿ ತೋಟದ ಬೆಳೆಗಳಿಗೆ ಸಿಂಪಡಿಸುತ್ತಾರೆ. ಹೀಗೆ ಮಾಡಿದಾಗ ಕಂಡುಬಂದ ಒಳ್ಳೆಯ ಪರಿಣಾಮಗಳನ್ನು ಅದೇ ಉತ್ಸಾಹದಿಂದ ಇನ್ನಿತರ ರೈತರಿಗೂ ತೋರಿಸಿ ಪರಿಚಯಿಸುತ್ತಿದ್ದಾರೆ.

ಬಯಲುಸೀಮೆಗಳೇ ಬೆಂಗಾಡುಗಳಾಗುತ್ತಿರುವ ಇಂದಿನ ದಿನಗಳಲ್ಲಿ ಎತ್ತಿನಮನಿಯವರು ಇಳುಕಲು, ಕೊರಕಲು ಭೂಮಿಯ ಬಳಿ ಮಲೆನಾಡಿನ ಊರುಗಳಂತೆ ತೋಟದಲ್ಲಿಯೇ ಪುಟ್ಟ ಮನೆ ಮಾಡಿಕೊಂಡು ಸುಂದರ ತಾಣವನ್ನೇ ನಿರ್ಮಿಸಿದ್ದಾರೆ. ಇಂದು ಇವರ ತೋಟ ನೋಡುವುದೇ ಒಂದು ಸಂತೋಷವಾಗಿದೆ. ತೋಟ ನೋಡಲು ಬಂದವರಿಗೆಲ್ಲ ರಾಮಫಲ ಹಣ್ಣುಗಳ ಆತಿಥ್ಯ ಸಿದ್ಧವಾಗಿರುತ್ತದೆ. ಇದೀಗ ಪ್ರಗತಿಪರ ರೈತರೆಂದೇ ಹೆಸರಾಗಿರುವ ಎತ್ತಿನಮನಿಯವರು ಬ್ಯಾಂಕ್ ಅಧಿಕಾರಿಯ ಜೀವನ ಶೈಲಿಯನ್ನು ಮರೆತೇ ಬಿಟ್ಟಿದ್ದಾರೆ!.

'ಬತ್ತದ ಜೀವನೋತ್ಸಾಹ' ಎಂದರೆ ಇದೇ ಅಲ್ಲವೆ?

○ ಹುರುಕಡ್ಲಿ ಶಿವಕುಮಾರ
ಬಾಚಿಗೊಂಡನಹಳ್ಳಿ



## ಪದ್ಯ - ಗದ್ಯ

ಹೆಣ್ಣು ಪದ್ಯ
ಗಂಡು ಗದ್ಯ
ಗದ್ಯದಲಿ ದೃಷ್ಟಿ
ಪದ್ಯದಲಿ ಸೃಷ್ಟಿ
ಎರಡೂ ಇರಲಿ
ಅದುವೇ ಸಮಷ್ಟಿ.

- ಶಶಿಧರ ಸೂರ್ಯ

# ವಿದ್ಯೋ-ಉದ್ಯೋಗ

# ಆದಾಯ ತೆರಿಗೆ ಅಧಿಕಾರಿ ಆಗುವುದು ಹೇಗೆ?

**ಆಯಾ ವೃತ್ತಿ, ಹುದ್ದೆಗಳಲ್ಲಿ ಯಶಸ್ವಿಯಾದವರ ಮೂಲಕವೇ ವಿದ್ಯಾರ್ಥಿಗಳಿಗೆ ಅಧಿಕೃತವಾಗಿ ವೃತ್ತಿ ಮಾರ್ಗದರ್ಶನ ಮಾಡಿಸುವ ವಿನೂತನ ಪ್ರಯೋಗವಿದು.**

**ಈ ಬಾರಿ ಆದಾಯ ತೆರಿಗೆ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿರುವ ಜಯರಾಮ್ ರಾಯ್‌ಪುರ ಅವರು ನಿಮಗೆ ಈ ಮಾಹಿತಿ ನೀಡಿದ್ದಾರೆ.**

### ಹುದ್ದೆಯ ಮಹತ್ವ

ಭಾರತ ಸರ್ಕಾರದ ಬಹುಮುಖ್ಯ ಹಾಗೂ ಪ್ರಭಾವೀ ಸೇವೆಗಳಲ್ಲಿ ಭಾರತೀಯ ರಾಜಸ್ವ ಸೇವೆ (ಐ.ಆರ್.ಎಸ್.) ಕೂಡಾ ಒಂದು. ಸರ್ಕಾರದ ಪುರೋಗಾಮಿ ಕಾರ್ಯಗಳಿಗೆ ಬೇಕಾಗುವ ಸಂಪನ್ಮೂಲ ಕ್ರೋಢೀಕರಣ ಹಾಗೂ ಸರ್ಕಾರಕ್ಕೆ ಸಂದಬೇಕಾದ ನೇರ ತೆರಿಗೆ ಸಂಗ್ರಹಣೆ ಈ ರೆವಿನ್ಯೂ ಸೇವೆಯ ಮೂಲ ಕರ್ತವ್ಯ. ಆದಾಯ ತೆರಿಗೆ, ಸಂಪತ್ತಿನ ತೆರಿಗೆ, ಉಡುಗೊರೆ ಕರ ಮುಂತಾದವುಗಳ ಸಂಗ್ರಹಣೆಯ ನಿರ್ವಹಣೆಯೇ ಈ ಹುದ್ದೆಯ ಹೂರಣ.

ಸರ್ಕಾರದ ಹೊಣೆಗಾರಿಕೆಗಳಾದ ಕಾನೂನು-ಸುವ್ಯವಸ್ಥೆ, ಹಣ ಚಲಾವಣೆ, ವಿದೇಶಾಂಗ ನೀತಿ ಮುಂತಾದವುಗಳ ಸಾಲಿನಲ್ಲಿ ಕಂದಾಯ ಸಂಗ್ರಹಣೆಗೆ ಅಗ್ರ ಪ್ರಾಶಸ್ತ್ಯ. ಸರ್ಕಾರದ ಈ ಅಂಗ ಊನವಾದರೆ ಇಡೀ ವ್ಯವಸ್ಥೆಯೇ ಪತನಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ದಿನಗಳೆದಂತೆ ರಾಜಸ್ವ ಸೇವೆಯ ಮಹತ್ವ ಅಧಿಕಗೊಳ್ಳುತ್ತ ಸಾಗುತ್ತದೆಯೇ ವಿನಾ ಎಂದಿಗೂ ತನ್ನ ಪ್ರಭಾವವನ್ನು ಕ್ಷಯಿಸಿ ಕೊಳ್ಳುವುದಿಲ್ಲ.

### ಹುದ್ದೆಯ ತಿರುಳು

ತೆರಿಗೆ ಸಂಗ್ರಹಿಸುವುದು ಈ ಹುದ್ದೆಯ ಕೇಂದ್ರ ಕಾಳಜಿ ನಿಜ. ಆದರೆ ವಿಶಾಲಾರ್ಥದಲ್ಲಿ ದೇಶದ ಹಣಕಾಸುಶಿಸ್ತು ಕಾಪಾಡುವುದು ರಾಜಸ್ವ ಸೇವೆಯ ವ್ಯಾಪ್ತಿಗೊಳಪಡುತ್ತದೆ. ಹಣಕಾಸು ವ್ಯವಹಾರಗಳ ಮೇಲೆ ನಿಗಾ ಇಟ್ಟು ವಿವಿಧ ಸರ್ಕಾರಿ ಹಾಗೂ ಅರೆಸರ್ಕಾರಿ ಇಲಾಖೆಗಳಿಗೆ ಬರಬೇಕಾದ ಕಂದಾಯಗಳು ಸಂದಾಯವಾಗುವಂತೆ ನೋಡಿಕೊಳ್ಳುವ ಹೊಣೆಯೂ ಈ 'ಸೇವೆ'ಗೆ ಸೇರುತ್ತದೆ.

ಐ.ಆರ್.ಎಸ್.ಪಾಸು ಮಾಡಿದ ವ್ಯಕ್ತಿ ನೇರವಾಗಿ ಸಹಾಯಕ ಆಯುಕ್ತರಾಗಿ (Assistant Commissioner) ಆದಾಯ ತೆರಿಗೆ ಇಲಾಖೆ ಸೇರುತ್ತಾರೆ. ತರುವಾಯ ಆತನ ಅರ್ಹತೆ ಹಾಗೂ ಸೇವಾ ಹಿರಿತನಕ್ಕೆ ಅನುಗುಣವಾಗಿ ಉಪ ಆಯುಕ್ತ (Deputy Commissioner); ಹೆಚ್ಚುವರಿ ಆಯುಕ್ತ (Additional Commissioner) ಆಯುಕ್ತ (Commissioner), ಮುಖ್ಯ ಆಯುಕ್ತ (Chief Commissioner)ರಾಗಿ ಹಂತ ಹಂತವಾಗಿ ಬಡ್ತಿ ಹೊಂದಬಹುದು.

ಈ ಇಲಾಖೆಯಲ್ಲಿ ತೆರಿಗೆ ನಿಷ್ಕರ್ಷೆ (Assessment) ಹಾಗೂ ತನಿಖೆಗೆ (Investigation) ಸಂಬಂಧಿಸಿದ ಎರಡು ಬಗೆಯ ಹುದ್ದೆಗಳಿರುತ್ತವೆ. ಇವಲ್ಲದೆ ಎನ್‌ಫೋರ್ಸ್‌ಮೆಂಟ್ ನಿರ್ದೇಶನಾಲಯ, ಸೆಬಿ (SEBI) ಮೊದಲಾದ ಭಾರತ ಸರ್ಕಾರದ ಇಲಾಖೆಗಳಲ್ಲಿ ವಿವಿಧ ಬಗೆಯ ಹಲವಾರು ಡೆಪ್ಯುಟೇಶನ್ ಹುದ್ದೆಗಳೂ ಲಭ್ಯವಿರುತ್ತವೆ.

### ತರಬೇತಿ

ಐ.ಆರ್.ಎಸ್. ಪಾಸಾದ ಅಭ್ಯರ್ಥಿಗಳಿಗೆ ತನಿಖಾ ಸಾಮರ್ಥ್ಯ, ಕಾನೂನು ಜ್ಞಾನ, ಲೆಕ್ಕಪತ್ರ ಹಾಗೂ ನಿಯಮಾವಳಿ ತಿಳಿವಳಿಕೆ, ಆಡಳಿತಾತ್ಮಕ ಪರಿಣತಿ ಕುರಿತಂತೆ ಸುಮಾರು ಎರಡು ವರ್ಷಗಳ ಕಾಲ ತರಬೇತಿ ನೀಡಲಾಗುವುದು. ನಾಗಪುರದಲ್ಲಿರುವ ನೇರ ತೆರಿಗೆಗಳ ರಾಷ್ಟ್ರೀಯ ಅಕಾಡೆಮಿ (National Academy of Direct Taxes)ಯಲ್ಲಿ ಈ ತರಬೇತಿಯ ಸೌಲಭ್ಯವಿದೆ.

### ಪ್ರವೇಶ

ಸರ್ಕಾರದ ಉನ್ನತ ಸ್ತರದಲ್ಲಿ ಉದ್ಯೋಗ ಪಡೆಯಲಿಚ್ಛಿಸುವವರಿಗೆ ಐ.ಆರ್.ಎಸ್.ಬಹು ಮುಖ್ಯ ಆಯ್ಕೆಯಾಗಿರುವುದೇನೋ ನಿಜ. ಆದರೆ ಈ ಹುದ್ದೆಗೇರಲು ಆಕಾಂಕ್ಷೆಯೊಂದಿಗೆ ಕಠಿಣ ಪರಿಶ್ರಮ ಹಾಗೂ ಯೋಜನಾಬದ್ಧ ಅಭ್ಯಾಸದ ಬೆಂಬಲವೂ ಅತ್ಯಗತ್ಯ. ಆದಾಯ ತೆರಿಗೆ ಅಧಿಕಾರಿಯಾಗಲು ಕೇಂದ್ರ ಲೋಕಸೇವಾ ಆಯೋಗದವರು ಪ್ರತಿ ವರ್ಷ ನಡೆಸುವ ನಾಗರಿಕ ಸೇವಾ ಪರೀಕ್ಷೆ

# ಜಯರಾಮ್ ರಾಯ್‌ಪುರ

ಸ್ವಭಾವತಃ ಸಹೃದಯಿಯಾದ ಜಯರಾಮ ರಾಯ್‌ಪುರ ಹಾಸನ ಜಿಲ್ಲೆಯ ರಾಯಪುರದವರು. ಕೇಂದ್ರ ನಾಗರಿಕ ಸೇವಾ ಪರೀಕ್ಷೆಯಲ್ಲಿ ಐ.ಆರ್.ಎಸ್. ಶ್ರೇಣಿ ಪಡೆದ ಇವರು ಈಗ ಆದಾಯ ತೆರಿಗೆ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ತೀರಾ ಮಧ್ಯಮ ವರ್ಗದ ಕುಟುಂಬದಿಂದ ಬಂದ ಜಯರಾಂ ಅವರ ತಂದೆ ನಿಂಗೇಗೌಡ ಆರೋಗ್ಯ ಇಲಾಖೆಯಲ್ಲಿ ಪರಿವೀಕ್ಷಕ ರಾಗಿ ನಿವೃತ್ತರಾಗಿದ್ದಾರೆ. ಜಯರಾಮರು ವಿದ್ಯಾರ್ಥಿ ದೆಸೆಯಿಂದಲೂ ಪ್ರತಿಭಾವಂತಿಕೆ ಮತ್ತು ಕ್ರಿಯಾಶೀಲತೆ ಯನ್ನು ಒಟ್ಟೊಟ್ಟಿಗೆ ದುಡಿಸಿಕೊಂಡು ಬಂದಿದ್ದಾರೆ. ಮೈಸೂರಿನ ದಸರಾ ವಸ್ತು ಪ್ರದರ್ಶನ ಆವರಣಕ್ಕೆ ಅಂಟಿಕೊಂಡಂತಿರುವ ಇಟ್ಟಿಗೆ ಗೂಡಿನ ಸರ್ಕಾರಿ ಶಾಲೆಯಲ್ಲಿ ಇವರ ಪ್ರಾಥಮಿಕ ವಿದ್ಯಾಭ್ಯಾಸ. ಮರಿಮಲ್ಲಪ್ಪ ಕಾಲೇಜಿನಲ್ಲಿ ಪ್ರೌಢಶಾಲೆ ಹಾಗೂ ಪಿ.ಯು.ಸಿ. ಮುಗಿಸಿ ಮಹಾರಾಜ ಕಾಲೇಜಿನಲ್ಲಿ ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಹಾಗೂ ಪತ್ರಿಕೋದ್ಯಮ ಐಚ್ಛಿಕ ವಿಷಯಗಳಲ್ಲಿ ಪದವಿ ಪಡೆದು ನೇರವಾಗಿ ದೆಹಲಿಯ ಜವಾಹರಲಾಲ್ ನೆಹರೂ ವಿಶ್ವವಿದ್ಯಾಲಯಕ್ಕೆ ಹೋದರು. ಅಲ್ಲಿ ಎಂ.ಎ.,ಎಂ.ಫಿಲ್ ಪದವಿಯೊಂದಿಗೆ ಕೇಂದ್ರ ನಾಗರಿಕ ಸೇವಾ ಪರೀಕ್ಷೆಯಲ್ಲೂ ತೇರ್ಗಡೆಯಾದರು.



ಸದಾ ಕ್ರಿಯಾಶೀಲ ಬದುಕನ್ನೇ ಅಪ್ಪಿಕೊಳ್ಳುವ, ಹಂಬಲಿಸುವ ಈ ಅಧಿಕಾರಿ ಮೈಸೂರು ಮಹಾರಾಜ ಕಾಲೇಜಿನಲ್ಲಿ ಪದ್ಯ ಬರೆದು, ಲೇಖನ ಗೀಚಿ, ಗೋಡೆ ಪತ್ರಿಕೆ ತಂದು, ನಾಟಕ ತಂಡಕಟ್ಟಿ, ನಾಟಕ ಬರೆದು, ನಿರ್ದೇಶಿಸಿ, ನಟನಾಗಿ ಕಾಲ ಕಳೆದವರು. ದೆಹಲಿಯ ಜವಾಹರ ಲಾಲ್ ನೆಹರೂ ವಿಶ್ವವಿದ್ಯಾಲಯದಲ್ಲಿ ನಡೆದ ದಲಿತರ ವಿಚಾರ ಆಂದೋಲನದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಉತ್ತರ ಭಾರತ ಪ್ರವಾಸ ಮಾಡಿದ್ದಾರೆ. ನೊಂದವರೊಂದಿಗೆ ಸ್ಪಂದಿಸುತ್ತಾ ಅವರಿಗೆ ನೆರವಾಗುತ್ತಾ ಬರುತ್ತಿರುವ ಇವರು ಅಭಿವೃದ್ಧಿ ಕುರಿತ ಅಧ್ಯಯನಶೀಲ ತಂಡ ವೊಂದನ್ನು ಕಟ್ಟುವ ಮಹತ್ವಾಕಾಂಕ್ಷೆ ಯಿಂದ ಅನೇಕ ವರ್ಷಗಳ ಕಾಲ ವಿಫಲ ಯತ್ನ ನಡೆಸಿರುವುದು ವಿಷಾದನೀಯ.

ಕೇಂದ್ರ ನಾಗರಿಕ ಸೇವಾ ಪರೀಕ್ಷೆಯಲ್ಲಿ ಕನ್ನಡವನ್ನು ಐಚ್ಛಿಕ ವಿಷಯವಾಗಿ ತೆಗೆದುಕೊಂಡು ಬರವಣಿಗೆಯಲ್ಲಿ ನಿಪುಣತೆ ಸಾಧಿಸಿದ್ದ ಜಯರಾಂ ಈಗ ಏನನ್ನೂ ಬರೆಯುತ್ತಿಲ್ಲ. ಬರುವ ವಿಜಯ ದಶಮಿಯ ಮರುದಿನ ವೈವಾಹಿಕ ಜೀವನಕ್ಕೆ ಕಾಲಿಡುತ್ತಿರುವ ಈ ಅಧಿಕಾರಿ ಈ ಬಾರಿ 'ಬಿಸಿಲ ಬದುಕು' ಓದುಗರೆದುರು ಪ್ರತ್ಯಕ್ಷರಾಗಿ ಆದಾಯ ತೆರಿಗೆ ಅಧಿಕಾರಿ ಆಗುವ ಆಕಾಂಕ್ಷಿಗಳಿಗೆ ಮಾರ್ಗದರ್ಶನ ಮಾಡಿದ್ದಾರೆ.

ಪಾಸಾಗಬೇಕಾಗುತ್ತದೆ. ಮುಖ್ಯ ಪರೀಕ್ಷೆ ಸಂದರ್ಭದಲ್ಲಿ ಅಭ್ಯರ್ಥಿಗಳು ತಾವು ಸೇರಬಯಸುವ 'ಸೇವೆ'ಗಳನ್ನು ಆದ್ಯತೆಗನು ಸಾರವಾಗಿ ನಮೂದಿಸ ಬೇಕಾಗುತ್ತದೆ. ಈ ಆದ್ಯತಾ ಪಟ್ಟಿಯನ್ನು ಗಮನದಲ್ಲಿಟ್ಟುಕೊಂಡು ಯಶಸ್ವೀ ಅಭ್ಯರ್ಥಿಗಳನ್ನು ವಿವಿಧ ಸೇವೆಗೆ ಆಯ್ಕೆ ಮಾಡುತ್ತಾರೆ. ಲೋಕಸೇವಾ ಆಯೋಗದ ಪರೀಕ್ಷೆಗಳಲ್ಲಿ ಅತ್ಯಂತ ಬೇಡಿಕೆಯ ಸೇವೆಯೆಂದರೆ 'ಭಾರತೀಯ ಆಡಳಿತ ಸೇವೆ' (IAS). ಭಾರತೀಯ ರಾಜಸ್ವ ಸೇವೆ (IRS), ಭಾರತೀಯ ಪೊಲೀಸ್ ಸೇವೆ (IPS) ಮುಂತಾದವು ಐ.ಎ.ಎಸ್. ನಂತರ ಹೆಚ್ಚು ಬೇಡಿಕೆಯುಳ್ಳ ಸೇವೆಗಳ ಪಟ್ಟಿಗೆ ಸೇರುತ್ತವೆ.

### ಅರ್ಜಿ ಹಾಕುವುದು

ಕೇಂದ್ರ ಲೋಕಸೇವಾ ಆಯೋಗದ ಪರೀಕ್ಷೆ ಬಗ್ಗೆ ಪ್ರತಿ ವರ್ಷ ಡಿಸೆಂಬರ್ ತಿಂಗಳಲ್ಲಿ ಎಂಪ್ಲಾಯ್‌ಮೆಂಟ್ ನ್ಯೂಸ್ ಪತ್ರಿಕೆಯಲ್ಲಿ ಜಾಹೀರಾತು ನೀಡಲಾಗುತ್ತದೆ. ಯಾವುದಾದರೂ ವಿಶ್ವವಿದ್ಯಾಲಯದಿಂದ ಪದವಿ ಪಡೆದವರು ಅರ್ಜಿ ಹಾಕಲು ಅರ್ಹರು. ಅಂಚೆಯಲ್ಲಿ ವಿಳಂಬವಾಗಿ ಅಭ್ಯರ್ಥಿಗಳ ಕನಸು ಭಗ್ನಗೊಳ್ಳುವ ಸಾಧ್ಯತೆ ಇರುವುದರಿಂದ ಅರ್ಜಿಗಳನ್ನು ಆದಷ್ಟು ಮುಂಗಡವಾಗಿ ಕಳುಹಿಸುವುದು ಒಳಿತು.

### ಮೊದಲ ಮೆಟ್ಟಿಲು

ಕೇಂದ್ರ ಲೋಕಸೇವಾ ಆಯೋಗದ ಪರೀಕ್ಷೆ ಪಾಸಾಗಬಯಸುವವರು ಮೊದಲಿಗೆ ಪೂರ್ವಭಾವಿ ಪರೀಕ್ಷೆಗೆ (Preliminary Exam) ಹಾಜರಾಗಬೇಕು. ಜೂನ್ ತಿಂಗಳಲ್ಲಿ ನಡೆಸಲಾಗುವ ಈ ಪರೀಕ್ಷೆಗೆ ಹಾಜರಾಗುವ ಅಭ್ಯರ್ಥಿಗಳು ಗಮನಿಸಬೇಕಾದ ಕೆಲವು ಅಂಶಗಳು :

❑ ಪರೀಕ್ಷೆಯು ನವನೂತನ ಮಾದರಿ (Objective type)ಯಲ್ಲಿರುವುದರಿಂದ ಅಧ್ಯಯನ ಮಾಡುವಾಗ ವಿಷಯವನ್ನು ವಿವರಣಾತ್ಮಕವಾಗಿ ಗ್ರಹಿಸದೆ ಮುಖ್ಯಾಂಶಗಳಿಗೆ ಹೆಚ್ಚು ಪ್ರಾಮುಖ್ಯ ಕೊಡಬೇಕು.

❑ ಐಚ್ಛಿಕ ವಿಷಯವು ಅಧ್ಯಯನದ ದೃಷ್ಟಿಯಿಂದ ಸಂಕ್ಷಿಪ್ತವಾಗಿದ್ದು ಅಭ್ಯರ್ಥಿಗೆ ಚಿರಪರಿಚಿತವಾಗಿದ್ದರೆ ಒಳಿತು. ಈ ನಿಟ್ಟಿನಲ್ಲಿ

ಕೆಲವು ಉತ್ತಮ ಆಯ್ಕೆಗಳೆಂದರೆ ರಾಜ್ಯಶಾಸ್ತ್ರ ಭೂಗರ್ಭಶಾಸ್ತ್ರ ಮತ್ತು ಸಮಾಜಶಾಸ್ತ್ರ

❑ ಸಾಮಾನ್ಯ ಅಧ್ಯಯನದ ಪತ್ರಿಕೆಗಾಗಿ ಭಾರತದ ಸಂವಿಧಾನ, ಭಾರತದ ಚರಿತ್ರೆ, ಗಣಿತ ಹಾಗೂ ಪ್ರಚಲಿತ ವಿದ್ಯಮಾನಗಳ ಬಗ್ಗೆ ಗಮನ ಕೇಂದ್ರೀಕರಿಸಿ.

❑ ಪೂರ್ವಭಾವಿ ಪರೀಕ್ಷೆ ಬರೆಯುವಾಗ ವೇಳೆಯನ್ನು ಯೋಜನಾಬದ್ಧವಾಗಿ ಉಪಯೋಗಿಸುವುದು ಬಹಳ ಮುಖ್ಯ. ಪ್ರಶ್ನೆ ಪತ್ರಿಕೆಯ ಯಾವ ಭಾಗವನ್ನೂ ಉತ್ತರಿಸದೆ ಬಿಡಬೇಡಿ.

## ಮುಖ್ಯ ಪರೀಕ್ಷೆ

ಅಕ್ಟೋಬರ್-ನವೆಂಬರ್‌ನಲ್ಲಿ ನಡೆಸುವ ಮುಖ್ಯ ಪರೀಕ್ಷೆಗೆ ಸುಮಾರು ೧೦೦೦೦ ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುತ್ತದೆ. ಸಾಮಾನ್ಯವಾಗಿ ಪೂರ್ವಭಾವಿ ಪರೀಕ್ಷೆಯ ಫಲಿತಾಂಶ ಜುಲೈ ಕೊನೆಯ ವಾರದಲ್ಲಿ ಪ್ರಕಟಗೊಳ್ಳುತ್ತದೆ. ಆದ್ದರಿಂದ ಪೂರ್ವಭಾವಿ ಪರೀಕ್ಷೆ ಪಾಸಾಗುವ ಭರವಸೆಯಿರುವ ಅಭ್ಯರ್ಥಿಗಳು ಈ ಫಲಿತಾಂಶಕ್ಕಾಗಿ ಕಾಯದೆ ಮುಖ್ಯ ಪರೀಕ್ಷೆಗೆ ಸಿದ್ಧತೆ ಪ್ರಾರಂಭಿಸುವುದು ಒಳ್ಳೆಯದು.

❑ ಮುಖ್ಯ ಪರೀಕ್ಷೆಯು ವಿವರಣಾತ್ಮಕ ಮಾದರಿಯಲ್ಲಿರುವುದರಿಂದ ಇಲ್ಲಿ ಭಾಷೆಯ ಮೇಲಿನ ಹಿಡಿತ ಅಭ್ಯರ್ಥಿಯ ನೆರವಿಗೆ ಬರುತ್ತದೆ. ಅಂತೆಯೇ ನಿಮಗೆ ಚೆನ್ನಾಗಿ ಗೊತ್ತಿರುವ ಭಾಷೆಯನ್ನೇ ಪರೀಕ್ಷೆಯ ಮಾಧ್ಯಮವನ್ನಾಗಿ ಆಯ್ದುಕೊಳ್ಳಿ.

❑ ನಿಮಗೆ ನಿಜಕ್ಕೂ ಆಸಕ್ತಿ ಇರುವ ಅಥವಾ ಈ ಮುಂಚೆಯೇ ಅಭ್ಯಾಸ ಮಾಡಿರುವ ವಿಷಯಗಳನ್ನೇ ಐಚ್ಛಿಕ ವಿಷಯಗಳನ್ನಾಗಿ ಆಯ್ಕೆ ಮಾಡಿಕೊಳ್ಳಿರಿ.

ನಿಮ್ಮ ಆಯ್ಕೆಯ ವಿಷಯಗಳಲ್ಲಿ ನಿಮಗೆ ಆಸಕ್ತಿಯಿಲ್ಲದಿದ್ದರೆ ನಾಗರಿಕ ಸೇವಾ ಪರೀಕ್ಷೆಗಳಿಗೆ ಅಧ್ಯಯನ ಮಾಡುವುದು ಒಂದು ಪ್ರಯಾಸದ ಕಾರ್ಯವಾಗಿ ಬೋರ್ ಹೊಡೆಯುತ್ತದೆ.

❑ ಪ್ರಶ್ನೆಗಳಿಗೆ ಉತ್ತರಿಸುವಾಗ ಸಂಬಂಧಿಸಿದ ಎಲ್ಲಾ ಅಂಶಗಳನ್ನು ನೀಡಬೇಕು. ವಿಷಯದ ಬಗ್ಗೆ ಇತರರ ಅಭಿಪ್ರಾಯಗಳೊಂದಿಗೆ ನಿಮ್ಮ ಸ್ವಂತದ ಮೌಲಿಕ ಅಭಿಪ್ರಾಯಗಳನ್ನೂ ವ್ಯಕ್ತಪಡಿಸುವುದು ಉತ್ತಮ. ಸಾಮಾನ್ಯವಾಗಿ ಉತ್ತರ ಪತ್ರಿಕೆಗಳ ಮೌಲ್ಯಮಾಪಕರು ವಿಶ್ವವಿದ್ಯಾಲಯದ ಪರಿಣತ ಪ್ರಾಧ್ಯಾಪಕರಾಗಿರುವುದರಿಂದ ಅಭ್ಯರ್ಥಿಗಳು ಅವರ ಬೌದ್ಧಿಕ ನೆಲೆಯನ್ನು ತಲುಪುವಂತೆ ಉತ್ತರ ಬರೆಯಬೇಕು.

## ಸಂದರ್ಶನ

ಲಭ್ಯವಿರುವ ಹುದ್ದೆಗಳ ಸಂಖ್ಯೆಯ ದುಪ್ಪಟ್ಟು ಅಭ್ಯರ್ಥಿಗಳಿಗೆ ಮಾತ್ರ ಸಂದರ್ಶನ ಭಾಗ್ಯ ಲಭಿಸುತ್ತದೆ.

❑ ಸಂದರ್ಶನವನ್ನು ಧೈರ್ಯದಿಂದ ಎದುರಿಸಿ. ಬೊಗಳೆ ಬಿಡಬೇಡಿ.

❑ ನಿಮ್ಮ ಪಕ್ಷಕ್ಕೆ ನೀವು ಸುಧಾರಿಸಿಕೊಳ್ಳುವ ಸಾಮರ್ಥ್ಯದ ಬಗ್ಗೆ ರಚನಾತ್ಮಕ ಮನೋಧರ್ಮ ತೋರ್ಪಡಿಸಿರಿ.

❑ ನಿಮ್ಮ ಅಭಿಪ್ರಾಯವನ್ನು ಖಚಿತವಾಗಿ ಹೇಳಿ. ಆದರೆ ತಿದ್ದಿಕೊಳ್ಳಲು ಹಿಂಜರಿಯಬೇಡಿ.

❑ ನೇರವಾಗಿ ಮಾತನಾಡಿ. ನಿಮ್ಮ ನಿಲುವುಗಳ ಬಗ್ಗೆ ದೃಢತೆಯಿರಲಿ.

❑ ಬುದ್ಧಿವಂತ ಅಭ್ಯರ್ಥಿ ಮನಸ್ಸು ಮಾಡಿದರೆ ಸಂದರ್ಶನದ ದಿಕ್ಕನ್ನೇ ನಿರ್ದೇಶಿಸಬಹುದು. ಅಭ್ಯರ್ಥಿಯ ಉತ್ತರಗಳು ಸಂಭಾಷಣೆಯ ಮುಂದುವರಿಕೆಗೆ ಅನುವಾಗುವಂತಿರಬೇಕು.

ಒಟ್ಟಾರೆ ನೀವು ಅಧ್ಯಯನದಲ್ಲಿ ನಿಮ್ಮ ಪ್ರಾಮಾಣಿಕ ಪರಿಶ್ರಮ ಹೂಡಿ. ವ್ಯವಸ್ಥಿತ ಸಿದ್ಧತೆ ನಡೆಸಿ. ನಂತರದ ಸ್ಥಾನವನ್ನು ಅದೃಷ್ಟಕ್ಕೆ ನೀಡಿ! ಜತೆಗೆ ಸ್ಪರ್ಧಾತ್ಮಕ ವಾತಾವರಣ ಸೃಷ್ಟಿಸಿಕೊಳ್ಳುವುದೂ ಮುಖ್ಯ. ನಿಮ್ಮಂತೆಯೇ ಸ್ಪರ್ಧಾ ಕಣಕ್ಕಿಳಿದಿರುವ ಗೆಳೆಯರ ಪುಟ್ಟ ಗುಂಪು ರೂಪಿಸಿಕೊಂಡು ಓದಿದ್ದನ್ನು ಚರ್ಚಿಸಿ ಮನನ ಮಾಡಿಕೊಳ್ಳುವ ಕ್ರಮ ಪರಿಣಾಮಕಾರಿಯಾಗಿರುತ್ತದೆ.

ಪರೀಕ್ಷೆಯಲ್ಲಿ ಯಶಸ್ವಿಯಾಗಿ ಮುಂದೆ ಆದಾಯ ತೆರಿಗೆ ಇಲಾಖೆಯಲ್ಲಿ ನೀವು ನನ್ನ ಸಹೋದ್ಯೋಗಿಯಾಗುವಿರೆಂದು ಆಶಿಸುತ್ತೇನೆ. ಹಾರೈಸುತ್ತೇನೆ.

●



**ಪ್ರಕ್ರಿಯೆ**

ನನ್ನವಳು
ಪ್ರೀತಿ ಹೆಚ್ಚಾದಾಗ
ಮುತ್ತಿಕ್ಕುತ್ತಾಳೆ
ಕೋಪ ಹೆಚ್ಚಾದಾಗ
ಮೂತಿಗಿಕ್ಕುತ್ತಾಳೆ

- ನೀ. ಶ್ರೀಶೈಲ

“ಪುಟ್ಟಣ್ಣ-ಅವರ ಮನೇಲಿ ನಾಯಿ ಇಲ್ದೇ ಇದ್ರೂ ಬೋರ್ಡ್ ಇದೆಯಲ್ಲಾ?!”

ಅವರನ್ನ ನೋಡಿದ್ರೆ-ಆ ಮನೆಗೆ ನಾಯಿ ಅವಶ್ಯಕತೆ ಇದೆ ಅಂತ ಅನ್ಸುತ್ತೆ ಪಮ್ಮಿ ?!!








ನಾಯಿ ಇದೆ ಎಚ್ಚರಿಕೆ!

# ಹೋಟೆಲ್ ಮ್ಯಾನೇಜ್‌ಮೆಂಟ್ ಕೋರ್ಸುಗಳು

**ಮಾ**ತು ಬಲ್ಲವನಿಗೆ ಜಗಳವಿಲ್ಲ ಊಟ ಬಲ್ಲವನಿಗೆ ರೋಗವಿಲ್ಲ ಎಂಬುದು ಹಳೆಯ ಗಾದೆ. ಹೊಸಾ ಗಾದೆ ಎಂದರೆ ಅಡುಗೆ ಬಲ್ಲವನಿಗೆ ಐಷಾರಾಮಿ ಬದುಕಿಗೆ ಕೊರತೆ ಇಲ್ಲ ಎಂಬುದು. ನಿಮಗೆ ಚೆನ್ನಾಗಿ ಅಡುಗೆ ಮಾಡಲು ಬರುತ್ತದೆ ಎಂದಾದರೆ ಅದರಲ್ಲೂ ನೀವು ಯಾವುದಾದರೂ ಹೊಟೇಲ್ ಮ್ಯಾನೇಜ್‌ಮೆಂಟ್ ಶಿಕ್ಷಣ ಪೂರ್ಣಗೊಳಿಸಿ ಪದವಿ ಪಡೆದಿದ್ದೀರಿ ಎಂದಾದರೆ ನಿಮ್ಮನ್ನು ಹಿಡಿಯುವವರೇ ಇರುವುದಿಲ್ಲ. ಪಂಚತಾರಾ ಹೊಟೇಲ್‌ಗಳಲ್ಲಿ ನಿಮಗೆ ಅತ್ಯಂತ ಗೌರವ ಕಾದಿರುತ್ತದೆ. ನಿಮಗೆ ಬೇಕಾದ ಸೌಲತ್ತು ನೀಡಿ ನಿಮ್ಮನ್ನು ಉಳಿಸಿಕೊಳ್ಳಲು ಬಯಸುತ್ತಾರೆ. ಯಾಕೆಂದರೆ ಕೆಟರಿಂಗ್ ಪದವಿ ಪಡೆದವರಿಗೆ ವಿದೇಶದಲ್ಲೂ ಭಾರೀ ಬೇಡಿಕೆ ಉಂಟು.

ನೀವು ತಾಜ್ ಹೊಟೇಲ್‌ಗೆ ಹೋಗಿ, ವೆಸ್ಟೆಂಡ್‌ಗೆ ಹೋಗಿ ಅಥವಾ ಒಬೆರಾಯ್‌ನಲ್ಲಿ ಕೇಳಿ ಅಲ್ಲಿನ ಮಾಲಿಕರದ್ದು ಒಂದೇ ದೂರು. ಹೊಟೇಲ್ ಮ್ಯಾನೇಜ್‌ಮೆಂಟ್ ಪದವಿ ಪಡೆದು ಬಂದವರು ಬಹಳದಿನ ಕೆಲಸದಲ್ಲಿ ಉಳಿಯುವುದಿಲ್ಲ. ಹೀಗೆ ಬರುತ್ತಾರೆ ಹಾಗೆ ವಿದೇಶಕ್ಕೆ ಹಾರಿ ಹೋಗುತ್ತಾರೆ ಎಂದು ಅವರು ಹಳಹಳಿದುಕೊಳ್ಳುತ್ತಾರೆ.

ಮ್ಯಾನೇಜ್‌ಮೆಂಟ್ ಪದವಿ ಪಡೆದು ಬಂದವರಿಗೆ ಇಂತಹ ಹೊಟೇಲ್‌ಗಳಲ್ಲಿ ಭಾರೀ ಸಂಬಳವುಂಟು. ಜೊತೆಗೆ ದಿನದ ಆಹಾರವೂ ಉಚಿತ. ಅಲ್ಲದೆ ಶ್ರೀಮಂತ ಗಿರಾಕಿಗಳಿಂದ ಟಿಪ್ಸ್‌ಬೇರೆ. ಎಲ್ಲ ಸೇರಿ ತಿಂಗಳಿಗೆ ೧೦ ಸಾವಿರ ದುಡಿಯುವುದು ಇಲ್ಲಿ ಮಾಮೂಲಿನ ವಿಚಾರ.

ಭಾರತದಲ್ಲಿ ಈಗ ಉದಾರೀಕರಣ ಮತ್ತು ಪಾಶ್ಚಾತ್ಯೀಕರಣದ ಕಾಲ. ಹಾಗಾಗಿ ಇಲ್ಲಿ ಈಗ ವೃತ್ತಿ ಆಧಾರಿತ ಶಿಕ್ಷಣಕ್ಕೆ ಭಾರೀ ಬೆಲೆ. ಅಂತಹ ಪದವಿಗೇ ಹೆಚ್ಚಿನ ಮಾನ್ಯತೆ.

ಹೊಟೇಲ್ ಮ್ಯಾನೇಜ್‌ಮೆಂಟ್ ಶಿಕ್ಷಣದಲ್ಲಿ ಎರಡು ಪ್ರಮುಖ ವಿಧ. ಒಂದು ಕೇಟರಿಂಗ್, ಇನ್ನೊಂದು ಸರ್ವೀಸ್. ಕೇಟರಿಂಗ್‌ನ್ನು ಐಚ್ಛಿಕವಾಗಿ ಪಡೆದು ಪದವಿಗಳಿಸಿದವರಿಗೆ ಪಂಚತಾರಾ ಹೊಟೇಲ್‌ಗಳಲ್ಲಿ ಟ್ರೆನಿ ಚೆಫ್ ಹುದ್ದೆ ಲಭ್ಯವಾಗುತ್ತದೆ. ಇದಕ್ಕೆ ಕನಿಷ್ಟವೆಂದರೂ ೫ ಸಾವಿರ ರೂಪಾಯಿ ವೇತನ ಗ್ಯಾರಂಟಿ. ನಂತರ ಚೆಫ್-೧ , ಚೆಫ್-೨ ಎಂದೆಲ್ಲಾ ಬಡ್ತಿ ಪಡೆಯಬಹುದು. ಈ ಬಡ್ತಿ ಲಭ್ಯವಾಗುವುದರೊಳಗೇ ನೀವು ವಿದೇಶಕ್ಕೆ ಹಾರುವ ಅವಕಾಶವನ್ನು ಪಡೆಯಬಹುದು. ಗಲ್ಫ್ ರಾಷ್ಟ್ರಗಳಲ್ಲಂತೂ ಇದಕ್ಕೆ ಭಾರೀ ಬೇಡಿಕೆ ಇದೆ.

**ಇಂಜಿನಿಯರಿಂಗ್ ಮತ್ತು ವೈದ್ಯ ಹುದ್ದೆಗಳಿಗಿಂತಲೂ ಹೆಚ್ಚು ಆದಾಯ ತರುವ ಈ ಶಿಕ್ಷಣ ತುಸು ವೆಚ್ಚದಾಯಕ. ಆದರೆ ಈ ಕೋರ್ಸು ಮುಗಿಸಿದವರಿಗೆ ವಿದೇಶಗಳಲ್ಲೂ ಮುಗಿಬಿದ್ದು ನೌಕರಿ ನೀಡುತ್ತಾರೆ!**

**○ ದೀಪಾ ರವೀಂದ್ರ**

ಇನ್ನು ನೀವು ಸರ್ವೀಸ್ ವಿಭಾಗದಲ್ಲಿ ಪದವಿ ಪಡೆದರೆ ತಾರಾ ಹೊಟೇಲ್‌ಗಳಲ್ಲಿ ಮೊದಲಿಗೆ ನಿಮಗೆ ಲಭ್ಯವಾಗುವ ಉದ್ಯೋಗ ಟ್ರೆನಿ ಕ್ಯಾಪ್ಟನ್. ಈ ಹುದ್ದೆ ಕೂಡಾ ತುಂಬಾ ಆಕರ್ಷಕ ಸಂಬಳವನ್ನು ಹೊಂದಿದೆ. ಬಣ್ಣ ಬಣ್ಣದ ಬಟ್ಟೆ ತೊಟ್ಟು ನಂತರ ನೀವು ಕ್ಯಾಪ್ಟನ್ ಹುದ್ದೆಗೆ ಏರಬಹುದು. ಆನಂತರ ಸಹಾಯಕ ರೆಸ್ಟೋರೆಂಟ್ ಮ್ಯಾನೇಜರ್ ಆಗಬಹುದು, ಲಾಬಿ ಮ್ಯಾನೇಜರ್ ಆಗಬಹುದು. ಎಲ್ಲವೂ ಇಲ್ಲಿ ಆಕರ್ಷಕ ಪಗಾರದ ಬೇಡಿಕೆ ಹುದ್ದೆಗಳೆ.

ಆದರೆ ಇಂತಹ ಆಕರ್ಷಕ ಹುದ್ದೆಗಳನ್ನು ಪಡೆಯುವುದು ಮಾತ್ರ ಸುಲಭದ ಕೆಲಸವಲ್ಲ. ಯಾಕೆಂದರೆ ಹೊಟೇಲ್ ಮ್ಯಾನೇಜ್‌ಮೆಂಟ್‌ನಲ್ಲಿ ಮೂರು ವರ್ಷ ಮತ್ತು ೫ ವರ್ಷದ ಬೇರೆ ಬೇರೆ ಪದವಿ ಕೋರ್ಸ್‌ಗಳಿವೆ. ಉದ್ಯೋಗಕ್ಕೆ ಭಾರೀ ಬೇಡಿಕೆ ಮತ್ತು ಆಕರ್ಷಕ ವೇತನ ತರುವಂತಹಗಳಾದ್ದರಿಂದ ಪದವಿ ಪಡೆಯುವುದು ತುಂಬಾ ದುಬಾರಿ.

ಇಂಜಿನಿಯರ್ ಮತ್ತು ವೈದ್ಯಕೀಯ ಹುದ್ದೆಗಳಿಗಿಂತಲೂ ಇವು ಹೆಚ್ಚು ಆದಾಯ ತರುವ ಮತ್ತು ಕಡಿಮೆ ರಿಸ್ಕ್ ಇರುವ ಉದ್ಯೋಗಗಳಾದ್ದರಿಂದ ಇದರ ಶಿಕ್ಷಣ ಇಂಜಿನಿಯರಿಂಗ್ ಮತ್ತು ಮೆಡಿಕಲ್ ಶಿಕ್ಷಣಕ್ಕಿಂತ ವೆಚ್ಚದಾಯಕ. ಮೂರು ವರ್ಷದ ಅವಧಿಯ ಪದವಿ ಕೋರ್ಸ್‌ಗೆ ಕನಿಷ್ಠ ಮೂರು ಲಕ್ಷ ರೂಪಾಯಿ ವೆಚ್ಚವಾಗಬಹುದು.

ಪಂಚತಾರಾ ಹೊಟೇಲ್‌ಗಳಲ್ಲಿ ಕೇಟರಿಂಗ್ ಹುಡುಗರನ್ನು ಇಂಜಿನಿಯರ್‌ಗಳಂತೆಯೇ ಗೌರವಿಸುತ್ತಾರೆ. ರೇಡಿಯೋ ಇಂಜಿನಿಯರ್ ರೇಡಿಯೋವನ್ನು ದುರಸ್ತಿ ಮಾಡುವಂತೆ ಇಲ್ಲಿ ಚೆಫ್‌ಗಳು ಅಡುಗೆ ರಿಪೇರಿ ಮಾಡುತ್ತಾರೆ. ಅಡುಗೆಯನ್ನು ಸರ್ವಾಂಗ ಸುಂದರವಾಗಿ ಜೋಡಿಸುತ್ತಾರೆ. ಬಣ್ಣಬಣ್ಣದ ತರಕಾರಿಗಳನ್ನು ವೈವಿಧ್ಯಮಯವಾಗಿ ಕತ್ತರಿಸಿ ಬಾಯಲ್ಲಿ ನೀರೂರುವಂತೆ ಮಾಡುತ್ತಾರೆ.

ಕೇಟರಿಂಗ್‌ನಲ್ಲಿ ಪದವಿ ಪಡೆದ ವಿಶ್ವೇಶ್ವರ ಮೊದಲು ವೆಸ್ಟೆಂಡ್‌ನಲ್ಲಿದ್ದು ನಂತರ ಅಮೇರಿಕಕ್ಕೆ ತೆರಳಿದರು. ಅಲ್ಲಿ ಕೆಲಕಾಲ ವಿವಿಧ ಹೊಟೇಲ್‌ಗಳಲ್ಲಿ ದುಡಿದು, ಮತ್ತೆ ಭಾರತಕ್ಕೆ ಬಂದು ಈಗ ವುಡ್‌ಲ್ಯಾಂಡ್ ಹೊಟೇಲ್‌ನಲ್ಲಿ ಅತ್ಯುನ್ನತ ಪದವಿ ಪಡೆದಿದ್ದಾರೆ. ವಿದೇಶಗಳಿಗೆ ತೆರಳುವುದು ಇಲ್ಲಿ ಮಾಮೂಲು. ಬೆಂಗಳೂರಿನ ಪ್ರತಿಷ್ಠಿತ ಹೊಟೇಲಿನ ಅನುಭವದ ಪ್ರಕಾರ ಅಲ್ಲೂ ಪ್ರತಿ ಎರಡು ವರ್ಷಗಳಿಗೆ ಚೆಫ್‌ಗಳು, ಕ್ಯಾಪ್ಟನ್‌ಗಳು ಬದಲಾಗುತ್ತಾರೆ. ಅವರು ಇನ್ನೂ ಹೆಚ್ಚು ಹಣ ತರುವ ದೇಶಗಳಿಗೆ ಹಾರುತ್ತಾರೆ. ದೇಶದ ಬಹುತೇಕ ಎಲ್ಲ ಪಂಚತಾರಾ ಹೊಟೇಲ್‌ಗಳ ಗತಿಯೂ ಇದೆ.

ದೇಶದಲ್ಲಿ ಬೇಕಾದಷ್ಟು ಹೊಟೇಲ್

# ಯಶಸ್ವಿ ಹೊಟೇಲ್ ಉದ್ಯಮಿ

# ನ್ಯೂ ಶಾಂತಿಸಾಗರದ ಸುರೇಶ್ ಬಿಲ್ಲವ

ಸತತ ಪರಿಶ್ರಮ ಮತ್ತು ಅದೃಷ್ಟದ ಬೆಂಬಲ ವಿದ್ದರೆ ಮನುಷ್ಯ ಏನನ್ನಾದರೂ ಸಾಧಿಸಬಹುದು ಎಂಬುದಕ್ಕೆ ಹೊಚ್ಚಹೊಸ ಉದಾಹರಣೆ ಸುರೇಶ್ ಬಿಲ್ಲವ ಅವರ ಬುದುಕು.

ಸುರೇಶ್ ಅವರಿಗೆ ಇನ್ನೂ ೩೪ ವರ್ಷ. ಯಾವ ವಿಶ್ವವಿದ್ಯಾಲಯದಿಂದಲೂ ಅವರು ಪದವಿ ಪಡೆದಿಲ್ಲ. ಲೆಕ್ಕಪತ್ರದ ಪರೀಕ್ಷೆ ಪಾಸ್ ಮಾಡಿಲ್ಲ. ಮ್ಯಾನೇಜ್‌ಮೆಂಟ್ ಕೋರ್ಸ್‌ಗೆ ಕೂಡಾ ಅವರು ಸೇರಿಲ್ಲ. ಹೊಟೇಲ್ ಮ್ಯಾನೇಜ್‌ಮೆಂಟ್ ತರಗತಿಯಲ್ಲಿ ತರಬೇತಿ ಪಡೆದಿಲ್ಲ. ಆದರೂ ಅವರು ದಿನನಿತ್ಯ ಮ್ಯಾನೇಜ್‌ಮೆಂಟ್ ಪದವೀಧರರನ್ನು ನಾಚಿಸುವಂತೆ ವಹಿವಾಟು ನಡೆಸುತ್ತಾರೆ.

ಇಷ್ಟೆಲ್ಲಾ ಹೇಳಿದ ಮೇಲೆ ಅವರ ಉದ್ಯೋಗ ಏನು ಎಂಬುದನ್ನು ಹೇಳಬೇಕಲ್ಲ. ಅವರದ್ದು ಬೆಂಗಳೂರಿನಲ್ಲಿ ಎರಡು ಹೊಟೇಲ್‌ಗಳಿವೆ. ನ್ಯೂ ಶಾಂತಿಸಾಗರ ಹೊಟೇಲ್‌ನ ಸವಿ ಮತ್ತು ಸವಿನಯ ಸೇವೆಯ ಹಿಂದೆ ಇವರ ಪರಿಶ್ರಮ ಇದೆ. ಬೆಂಗಳೂರು ರಾಜಾಜಿನಗರದಲ್ಲಿರುವ ನ್ಯೂ ಶಾಂತಿಸಾಗರ ಮತ್ತು ದೇವಯ್ಯಪಾರ್ಕ್‌ನಲ್ಲಿರುವ ಫಾಸ್ಟ್‌ಪುಡ್ ಹೊಟೇಲ್‌ಗಳ ಒಡೆಯರಾಗಿರುವ ಸುರೇಶ್ ಬೆಂಗಳೂರಿಗೆ ಮೊದಲು ಬಂದದ್ದು ಬರಿಗೈಲಿ.

೧೯೭೮ರಲ್ಲಿ ಕುಂದಾಪುರ ತಾಲ್ಲೂಕು ಕಟ್‌ಬೇಲ್ತೂರಿನಿಂದ ಸುರೇಶ್ ಬೆಂಗಳೂರಿಗೆ ಬಂದಾಗ ಬಹುಶಃ ತಾನು ಇಷ್ಟು ಎತ್ತರಕ್ಕೆ ಬೆಳೆಯುತ್ತೇನೆ ಎಂದುಕೊಂಡಿರಲಿಲ್ಲ. ಆಗಿನ್ನೂ ಅವರಿಗೆ ೧೫ ವರ್ಷ.

ಎಲ್ಲ ಶಾಲೆ ಕಲಿಯದ ಹುಡುಗರೂ ಮಾಡುವಂತೆ ಸುರೇಶ್ ಕೂಡಾ ಹೊಟೇಲ್‌ನಲ್ಲಿ ಕ್ಲೀನರ್ ಆಗಿಯೇ ತಮ್ಮ ವೃತ್ತಿ ಆರಂಭಿಸಿದರು. ಆಗ ಈಗಿನಂತೆ ಬೆಂಗಳೂರಿನಲ್ಲಿ ಹಲವಾರು ನ್ಯೂ ಶಾಂತಿಸಾಗರ ಹೊಟೇಲ್‌ಗಳಿರಲಿಲ್ಲ. ಇಡೀ ಬೆಂಗಳೂರಿಗೆ ಸದಾಶಿವನಗರದಲ್ಲಿ ಮಾತ್ರ ನ್ಯೂ ಶಾಂತಿಸಾಗರ ಹೊಟೇಲ್ ಇತ್ತು. ಅಲ್ಲಿಂದಲೇ ಈ 'ಮಾಣಿ'ಯ ವೃತ್ತಿ ಪ್ರಯಾಣ ಆರಂಭವಾಯಿತು.

ಆದರೆ ಈ ಮಾಣಿ ಎಲ್ಲ ಮಾಣಿಯರಂತಲ್ಲ. ಕ್ಲೀನರ್‌ನಿಂದ ಸೂಪರ್‌ವೈಜರ್ ಹುದ್ದೆಗೆ ಬೆಳೆದರು. ಕೇವಲ ತಾವು ಮಾತ್ರ ಬೆಳೆಯಲಿಲ್ಲ. ನಮ್ಮ ಒಡೆಯರನ್ನೂ ಬೆಳೆಸಿದರು.

ಬೆಂಗಳೂರಿನಲ್ಲಿ ಕೇವಲ ಒಂದೆಡೆ ಮಾತ್ರ ಇದ್ದ ನ್ಯೂ ಶಾಂತಿ ಸಾಗರ ಎರಡು ಕಡೆ ಆರಂಭವಾಗುವುದಕ್ಕೆ ಪ್ರೇರಕ ಶಕ್ತಿಯಾದರು. ಎರಡರಿಂದ ನಾಲ್ಕು ಕಡೆ ಆರಂಭವಾಗುವುದಕ್ಕೆ ಕಾರಣಕರ್ತರಾದರು.

ಹೀಗೆ ಹಂತ ಹಂತವಾಗಿ ಬೆಳೆದ ಸುರೇಶ್ ೧೯೮೭ರಲ್ಲಿ ಸ್ವಂತ ಹೊಟೇಲ್ ಆರಂಭಿಸುವ ಮಟ್ಟಕ್ಕೆ ಬೆಳೆದು ನಿಂತರು. ೭೮ರಲ್ಲಿ ಕ್ಲೀನರ್ ಆಗಿ ಬಂದವರು ೮೭ರಲ್ಲಿ ಹೊಟೇಲ್ ಒಡೆಯನೇ ಆಗಿಬಿಟ್ಟರು.



ಮಡಿವಾಳದಲ್ಲಿ ಸುರೇಶ್ ಆರಂಭಿಸಿದ ಹೊಟೇಲ್ ಕೂಡಾ ನಿಧಾನಕ್ಕೆ ಪ್ರವರ್ಧಮಾನಕ್ಕೆ ಬರತೊಡಗಿತು. ಅದೇ ಅವರಿಗೆ ೧೯೯೧ರಲ್ಲಿ ರಾಜಾಜಿನಗರದಲ್ಲಿ ನ್ಯೂ ಶಾಂತಿ ಸಾಗರ ಹೊಟೇಲ್ ಆರಂಭಿಸುವುದಕ್ಕೆ ಪ್ರೇರಕವಾಯ್ತು.

ಆರಂಭವಾದ ಕೆಲವೇ ದಿನಗಳಲ್ಲಿ ಸುತ್ತಮುತ್ತಲಿನ ಜನರನ್ನು ಆಕರ್ಷಿಸಿದ ನ್ಯೂಶಾಂತಿಸಾಗರ ಇಂದು ಮಾದರಿ ಹೊಟೇಲ್ ಆಗಿ ಪರಿಣಮಿಸಿದೆ. ಮಾಡಿದರೆ ನ್ಯೂ ಶಾಂತಿ ಸಾಗರದಂತಹ ಹೊಟೇಲ್‌ವೊಂದನ್ನು ಮಾಡಬೇಕು ಎಂಬ ಭಾವನೆಯನ್ನು ಹುಟ್ಟಿಸುವ ಮಟ್ಟಕ್ಕೆ ಬೆಳೆದಿದೆ.

ಸುರೇಶ್ ಸಾಧನೆ ಏನು ಮಹಾ! ದೇಶ ವಿದೇಶಗಳಲ್ಲಿ ಹೊಟೇಲ್ ಕ್ರಾಂತಿ ಮಾಡಿದ ಆರ್.ಪಿ. ಕಾಮತ್, ಪಂಚತಾರಾ ಹೊಟೇಲ್ ಕಟ್ಟಿದ ಒಬೆರಾಯ್ ಅವರೂ ಸಹ ಯಾವ ಪಂಡಿತರಾಗಿದ್ದರು. ಅವರಿಗೇನು ಪದವಿ ಇತ್ತೇ ಎಂದೂ ಕೇಳುವವರಿರಬಹುದು. ಆದರೆ ಅವರ ಕಾಲವೇ ಬೇರೆ. ಈಗಿನ ಕಾಲವೇ ಬೇರೆ. ಆಗ ಹೊಟೇಲ್ ಮ್ಯಾನೇಜ್‌ಮೆಂಟ್ ಕಾಲೇಜುಗಳೇ ಇರಲಿಲ್ಲ. ಈಗ ಮಾರಿಗೊಂದು ಮೊಳಕ್ಕೊಂದು ಇಂತಹ ಕಾಲೇಜುಗಳಿವೆ. ಅಲ್ಲದೆ ಅವರು ಆ ಎತ್ತರಕ್ಕೆ ಬೆಳೆಯಲು ತೆಗೆದುಕೊಂಡ ಸಮಯ ಎಷ್ಟು ಎಂಬುದನ್ನೂ ಗಮನನಿಸಬೇಕಾಗುತ್ತದೆ.

ಸುರೇಶ್ ಅವರಿಗೆ ಕೇಟರಿಂಗ್ ತರಬೇತಿ ಇಲ್ಲ. ಆದರೆ ಅವರ ಹೊಟೇಲಿಗೆ ಕೇಟರಿಂಗ್ ಕಾಲೇಜಿನ ವಿದ್ಯಾರ್ಥಿಗಳು ಕೇಟರಿಂಗ್ ತರಬೇತಿಗೆ ಬರುತ್ತಾರೆ. ಅತ್ಯಂತ ಯಶಸ್ವಿಯಾಗಿ ಕೇಟರಿಂಗ್ ಸೇವೆ ನೀಡುವ ಹೊಟೇಲ್ ಎಂಬ ಖ್ಯಾತಿಗೂ ನ್ಯೂ ಶಾಂತಿ ಸಾಗರ ಕಾರಣವಾಗಿದೆ. ದಿನಕ್ಕೆ ೧೦ ರಿಂದ ೧೫ ಕಡೆ ಕೇಟರಿಂಗ್ ಸೇವೆ ಸಲ್ಲಿಸಿದ ಉದಾಹರಣೆಗಳೂ ಇವೆ ಎಂದು ಮ್ಯಾನೇಜರ್ ಗೋಪಾಲಕೃಷ್ಣ ನಾಯಕ್ ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ.

ಬೆಂಗಳೂರಿನಲ್ಲಿ ರಾಷ್ಟ್ರೀಯ ಕ್ರೀಡೆ ನಡೆದಾಗ ಪತ್ರಕರ್ತರಿಗೆ ಶುಚಿರುಚಿಯ ಊಟ ಬಡಿಸಿದವರೂ ಇವರೇ. ಬಿ.ಇ.ಎಲ್., ಹೆಚ್.ಎಂ.ಟಿ., ಆರ್.ಬಿ.ಐ., ಬಿ.ಎಚ್.ಇ.ಎಲ್., ಮೈಕೋ ಮುಂತಾದ ಖಾಸಗಿ ಹಾಗೂ ಸಾರ್ವಜನಿಕ ವಲಯದ ಉದ್ದಿಮೆಗಳಿಗೆ ಬೃಹತ್ ಪ್ರಮಾಣದಲ್ಲಿ ಸಿಹಿ ತಿಂಡಿ ಪೂರೈಸಿ ಸೈ ಎನ್ನಿಸಿಕೊಂಡಿದ್ದಾರೆ.

ಸುರೇಶ್ ಅವರದ್ದು ಒಂದೇ ನೀತಿಯಂತೆ. ನಮಗೆ ನಷ್ಟವಾದರೂ ಪರವಾಗಿಲ್ಲ. ಹೆಸರು ಕೆಡಬಾರದು. ಶುಚಿಯಲ್ಲಿ, ರುಚಿಯಲ್ಲಿ ರಾಜಿ ಮಾಡಿಕೊಳ್ಳಬಾರದು ಎಂಬುದು ಅವರ ತತ್ವ ಹಾಗಾಗಿಯೇ ಅವರು ಈವರೆಗೆ ನಷ್ಟ ಮಾಡಿಕೊಂಡಿದ್ದಿಲ್ಲ!

ಸುರೇಶ್ ಈಗಲೂ ಅಷ್ಟೆ. ತಾವೂ ಬೆಳೆಯುತ್ತಿದ್ದಾರೆ. ಜೊತೆಗೆ ತಮ್ಮ ಹೊಟೇಲಿನ ಕೆಲಸಗಾರರನ್ನೂ ಬೆಳೆಸುತ್ತಿದ್ದಾರೆ.

ಓದಿನ, ಪದವಿಯ ಬೆಂಬಲವಿಲ್ಲದೆ ಪ್ರತಿಭೆಯಿಂದ ಮೇಲೆ ಬಂದ ಈ ತರುಣ ಇತರರಿಗೆ ಮಾದರಿ, ಸ್ಫೂರ್ತಿ. ●

ಮ್ಯಾನೇಜ್‌ಮೆಂಟ್ ಕಾಲೇಜುಗಳಿವೆ. ಆದರೆ ಪಂಚತಾರಾ ಹೊಟೇಲ್‌ಗಳು ಈ ಕಾಲೇಜುಗಳಿಗೆ ಎ.ಬಿ.ಸಿ. ಎಂದು ದರ್ಜೆಗಳನ್ನು ನಿಗದಿ ಮಾಡಿವೆ. ಆಯಾ ಕಾಲೇಜಿನ ದರ್ಜೆಗನುಗುಣವಾಗಿ ಅಲ್ಲಿನ ವಿದ್ಯಾರ್ಥಿಗಳಿಗೆ ಹುದ್ದೆಗಳು ಲಭ್ಯವಾಗುತ್ತವೆ. ಬೆಂಗಳೂರಿನಲ್ಲಿಯೇ ಸುಮಾರು ೨೦ಕ್ಕೂ ಹೆಚ್ಚು ಹೊಟೇಲ್ ಮ್ಯಾನೇಜ್‌ಮೆಂಟ್ ಕಾಲೇಜುಗಳಿವೆ. ವುಡ್‌ಲ್ಯಾಂಡ್ಸ್ ಹೊಟೇಲ್, ಹರ್ಷಾ ಹೊಟೇಲ್, ಪ್ರೆಸಿಡೆನ್ಸಿ ಸ್ಕೂಲ್ ಆಫ್ ಹೊಟೇಲ್ ಮ್ಯಾನೇಜ್‌ಮೆಂಟ್, ಮೌಂಟ್ ಕಾರ್ಮೆಲ್ ಕಾಲೇಜ್, ಸೇಂಟ್ ಜೋಸೆಫ್ ಕಾಲೇಜ್, ಕ್ರೈಸ್ಟ್ ಕಾಲೇಜ್, ನಿಜಲಿಂಗಪ್ಪ ಕಾಲೇಜ್‌ಗಳಲ್ಲಿಯೂ ಹೊಟೇಲ್ ಮ್ಯಾನೇಜ್‌ಮೆಂಟ್ ಕೋರ್ಸ್‌ಗಳಿವೆ.

ಇಷ್ಟೆಲ್ಲಾ ಹೇಳಿ ಆದ ಮೇಲೆ ಒಂದು ಪ್ರಶ್ನೆ ಉದ್ಭವವಾಗುತ್ತದೆ. ಹೊಟೇಲ್‌ಗಳಲ್ಲಿ ಕೆಲಸ ಮಾಡಲು ಪದವಿ ಅನಿವಾರ್ಯವೇ?

ಈ ಪ್ರಶ್ನೆಗೆ ಉತ್ತರ ಹೇಳುವಾಗ ಯಾವ ಹೊಟೇಲ್‌ಗಳು ಎಂಬುದನ್ನು ಮೊದಲು ಗಮನಹರಿಸಬೇಕು.

ಪಂಚತಾರಾ ಹೊಟೇಲ್‌ಗಳಾದರೆ ಪದವಿಗಳಿಸುವುದು ಕೊಂಚ ಮಟ್ಟಿಗೆ ಅನಿವಾರ್ಯ. ಆದರೆ ಇಲ್ಲಿಯೂ ಒಂದು ಅಂಶ ಗಮನಿಸಬೇಕು. ದೇಶದಲ್ಲಿಯೇ ಅತ್ಯಂತ ಸುಸಜ್ಜಿತ ಪಂಚತಾರಾ ಹೊಟೇಲ್ ಕಟ್ಟಿಬೆಳೆಸಿದ ಒಬೆರಾಯ್‌ಗಾಗಲೀ ಅಥವಾ ದೇಶ ವಿದೇಶಗಳಲ್ಲೂ ಹೊಟೇಲ್ ಕ್ರಾಂತಿ ಮಾಡಿದ ಆರ್.ವಿ. ಕಾಮತ್ ಅವರಿಗಾಗಲೀ ಯಾವುದೇ ಪದವಿ ಇರಲಿಲ್ಲ.

ಶಿಳರ ತರುಣನೊಬ್ಬ ನ್ಯೂ ಶಾಂತಿಸಾಗರ ಹೊಟೇಲ್‌ನ್ನು ಯಶಸ್ವಿಯಾಗಿ ನಡೆಸಲು ಸಾಧ್ಯವಾಗಿದೆ. ಆತನಿಗೆ ಹೊಟೇಲ್ ಮ್ಯಾನೇಜ್‌ಮೆಂಟ್ ಪದವಿ ಇರಲಿ ಇನ್ನಾವುದೇ ಪದವಿಯೂ ಇಲ್ಲ. ಕಾಮತ್ ಗುಂಪಿನ ಬಹುತೇಕ ಎಲ್ಲ ಹೊಟೇಲ್‌ಗಳಲ್ಲಿಯೂ ಕೇವಲ ಅನುಭವ ಪಡೆದವರೇ ಕಾರ್ಯನಿರ್ವಹಿಸುತ್ತಾರೆ. ಕೇವಲ ಹೈಸ್ಕೂಲ್ ವಿದ್ಯಾಭ್ಯಾಸ ಮಾಡಿದ ಶಿವರಾಂ ಆತಿಥ್ಯ ಹೊಟೇಲ್‌ನಲ್ಲಿ ಮ್ಯಾನೇಜರ್ ಆಗಿ ಕಾರ್ಯನಿರ್ವಹಿಸುತ್ತಾನೆ. ಅಲ್ಲಿಯೇ ಸೀನಿಯರ್ ಮ್ಯಾನೇಜರ್ ಆಗಿರುವ ಮಂಜಣ್ಣನಿಗೆ ಹೈಸ್ಕೂಲ್ ವಿದ್ಯಾಭ್ಯಾಸವೂ ಆಗಿಲ್ಲ. ಮಯೂರ ಹೊಟೇಲಿನ ಭುಜಂಗಶೆಟ್ರು ಯಾವ ಕಾಲೇಜ್ ಮೆಟ್ಟಿಲು ಹತ್ತಿದವರಲ್ಲ. ಮೊನ್ನೆಯಷ್ಟೆ ಲೋಕಶಕ್ತಿಯ ರಾಮಕೃಷ್ಣ ಹೆಗಡೆ ಮತ್ತು ಜ್ಞಾನಪೀಠ ಪ್ರಶಸ್ತಿ ವಿಜೇತ ಯು. ಆರ್. ಅನಂತಮೂರ್ತಿ ಅವರಿಂದ ಸನ್ಮಾನಿಸಲ್ಪಟ್ಟ ಶ್ರೀಪತಿರಾವ್ ಕೂಡಾ ಪದವಿಗಳಿಸಿ ಬಂದವರಲ್ಲ.

ಈ ಎಲ್ಲ ಉದಾಹರಣೆಗಳನ್ನು ನೋಡಿದರೆ ಎ ದರ್ಜೆ ಹೊಟೇಲ್‌ಗಳವರೆಗೆ ಪದವಿ ಎನ್ನುವುದು ಅಗತ್ಯವಲ್ಲ. ಆದರೆ ಪಂಚತಾರಾ ಹೊಟೇಲ್‌ಗಳಲ್ಲೂ ಈಗೀಗ ಹೊಟೇಲ್ ಮ್ಯಾನೇಜ್‌ಮೆಂಟ್ ಪದವೀಧರರಿಗೆ ಮಾನ್ಯತೆ ನೀಡುತ್ತಿರುವುದು ಸುಳ್ಳಲ್ಲ. ಅಲ್ಲದೆ ಬಹುತೇಕ ಎಲ್ಲ ಪಂಚತಾರಾ ಹೊಟೇಲ್‌ಗಳಲ್ಲಿ ಕೇಟರಿಂಗ್ ಟ್ರೈನಿಂಗ್ ತರಗತಿಗಳನ್ನು ಇಟ್ಟುಕೊಂಡಿದ್ದಾರೆ. ಅಲ್ಲಿ ತರಬೇತಿ ನೀಡಿದ ನಂತರವೇ ಕೆಲಸ ಎಂಬ ಮಾಮೂಲಿ ತತ್ವ ಇದೆ.

ಹಾಗಾಗಿ ನೀವು ಹೈಸ್ಕೂಲ್ ಶಿಕ್ಷಣದಲ್ಲಿ ಮತ್ತು ಪದವಿಪೂರ್ವ ಶಿಕ್ಷಣದಲ್ಲಿ ಉತ್ತಮ ಅಂಕ ಪಡೆದಿದ್ದರೆ. ಸುಮ್ಮನೆ ವಾಡಿಕೆಯಂತೆ ಇಂಜಿನಿಯರಿಂಗ್ ಮತ್ತು ಮೆಡಿಕಲ್ ಸೀಟ್ ಕನಸು ಕಾಣುವುದರ ಬದಲು ಹೊಟೇಲ್ ಮ್ಯಾನೇಜ್‌ಮೆಂಟ್ ಕೋರ್ಸ್ ಮಾಡುವುದು ಒಳಿತು. ಬೇಗ ಡಿಗ್ರಿ ಪಡೆದು ಉತ್ತಮ ಕೆಲಸವನ್ನು ಪಡೆಯಬಹುದು. ನೀವೂ ಪಂಚತಾರೆಗಳಾಗಬಹುದು.

●



ಅಲೋಪತಿ

ನಿನ್ನ
ಡಾಕ್ಟರ್ ಪತಿ
ಎಂಥಾ ಪತಿ?
ನೇಚರೋಪತಿ
ಹೋಮಿಯೋಪತಿ
ಡಾಕ್ಟರೇಟ್ ಪತಿ
OR ...
ಅಲೋಪತಿ,
ಅಂತಾ ಕೇಳಿದರೆ
ಅವಳೆಂದಳು :
ಆತ ಊರೂರು
ಅಲೆಯೋ ಪತಿ
ಅವನ ಬಗ್ಗೆ
ನನಗಿಲ್ಲ ಸಿಂಪತಿ !!

- ಡಾ. ಸಜ್ಜನ್ ಅರವಿಂದ



ಕೆಲಸ ಮಾಡಿ ಕೊಟ್ಟಿದ್ದಕ್ಕೆ ಬರೀ
ಐದು ರೂಪಾಯಿ ಕೊಟ್ಟು ಹೋಗುತ್ತಿದ್ದೀರಲ್ಲ...
ನಾವೇನು ಇಲ್ಲಿ ಭಿಕ್ಷೆಗೆ ಕುತ್ಕೊಂಡಿಲ್ಲ... ಜುಜುಬಿ...

# ಐ. ಎ. ಎಸ್. ಪರೀಕ್ಷೆಯ ಮಾಹಿತಿ

### ಪೂರ್ವಭಾವಿ ಪರೀಕ್ಷೆ
### ಮೊದಲ ಪತ್ರಿಕೆ

ಸಾಮಾನ್ಯ ಜ್ಞಾನ - ಎಲ್ಲರಿಗೂ ಕಡ್ಡಾಯ ಮತ್ತು ಏಕರೂಪದಲ್ಲಿರುತ್ತದೆ.

ಪ್ರಶ್ನೆಗಳನ್ನು ಕೆಳಗೆ ಸೂಚಿಸಿದ ಜ್ಞಾನಶಾಖೆಗಳಿಂದ ಆಯ್ದುಕೊಡಲಾಗಿರುತ್ತದೆ.

೧. ಸಾಮಾನ್ಯ ವಿಜ್ಞಾನ - ವಿಜ್ಞಾನವನ್ನು ಒಂದು ಐಚ್ಛಿಕ ವಿಷಯವನ್ನಾಗಿ ಅಭ್ಯಸಿಸಿದವರು ಅರ್ಥ ಮಾಡಿಕೊಳ್ಳಬಹುದಾದ ವಿಷಯಗಳಿಗೆ ಸಂಬಂಧಿಸಿದ ಪ್ರಶ್ನೆಗಳಿರುತ್ತವೆ.

೨. ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದ ಪ್ರಮುಖ ಪ್ರಚಲಿತ ವಿದ್ಯಮಾನಗಳು.

೩. ಭಾರತೀಯ ಇತಿಹಾಸ - ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ವಿಷಯಗಳಿಗೆ ಒತ್ತು ನೀಡಲಾಗುತ್ತದೆ.

೪. ಪ್ರಾಪಂಚಿಕ ಭೂಗೋಳಶಾಸ್ತ್ರ - ಭಾರತದ ಭೌಗೋಳಿಕ ಜ್ಞಾನಕ್ಕೆ ಹೆಚ್ಚು ಮಹತ್ವವಿರುತ್ತದೆ. ಆರ್ಥಿಕ, ಸಾಮಾಜಿಕ ಮತ್ತು ಭೌಗೋಳಿಕ ಜ್ಞಾನದ ಅರಿವು ಅತ್ಯವಶ್ಯಕ. ಈ ಪರಿಧಿಯಲ್ಲಿ ಭಾರತೀಯ ವ್ಯವಸಾಯ ಪದ್ಧತಿ ಮತ್ತು ಪ್ರಾಕೃತಿಕ ಸಂಪತ್ತುಗಳ ತಿಳುವಳಿಕೆಯೂ ಸೇರುತ್ತದೆ.

೫. ಭಾರತದ ರಾಜಕೀಯ ವ್ಯವಸ್ಥೆ ಮತ್ತು ಆರ್ಥಿಕತೆ - ಭಾರತದ ರಾಜಕೀಯ ಪದ್ಧತಿ ಮತ್ತು ವ್ಯವಸ್ಥೆ ಬಗೆಗಿನ ಅರಿವು : ಪಂಚಾಯತ್ ರಾಜ್, ಸಮುದಾಯ ಅಭಿವೃದ್ಧಿ ಯೋಜನೆಗಳು, ಭಾರತದಲ್ಲಿ ಯೋಜನಾ ವ್ಯವಸ್ಥೆ ಬಗ್ಗೆ ತಿಳುವಳಿಕೆ ಅಗತ್ಯ.

೬. ಭಾರತೀಯ ರಾಷ್ಟ್ರೀಯ ಹೋರಾಟ - ಹತ್ತೊಂಬತ್ತನೇ ಶತಮಾನದಲ್ಲಿ ಕಂಡು ಬಂದ ಪುನರುತ್ಥಾನ, ರಾಷ್ಟ್ರೀಯತೆಯ ಬೆಳವಣಿಗೆ, ಸ್ವಾತಂತ್ರ್ಯದ ಗಳಿಕೆ ಇವುಗಳ ಸ್ವರೂಪ ಮತ್ತು ಗುಣಲಕ್ಷಣಗಳ ಬಗೆಗಿನ ತಿಳುವಳಿಕೆ ಅಗತ್ಯ.

### ಪತ್ರಿಕೆ ಎರಡು

ಅಭ್ಯರ್ಥಿ ತಾನು ಬಯಸಿದ ವಿಷಯವನ್ನು ಐಚ್ಛಿಕ ವಿಷಯಪಟ್ಟಿಯಿಂದ ಆಯ್ದುಕೊಳ್ಳಬಹುದು.

ಐಚ್ಛಿಕ ವಿಷಯಗಳ ಪಠ್ಯಕ್ರಮ ಪದವಿ ಮಟ್ಟಕ್ಕೆ ಸಮನಾಗಿರುತ್ತದೆ.

### ಐಚ್ಛಿಕ ವಿಷಯಗಳ ಪಟ್ಟಿ

೧. ವ್ಯವಸಾಯ (Agriculture), ೨. ಪಶುಸಂಗೋಪನೆ ಮತ್ತು ವಿಜ್ಞಾನ, ೩. ಸಿವಿಲ್ ಎಂಜನಿಯರಿಂಗ್, ೪. ವಾಣಿಜ್ಯ ಶಾಸ್ತ್ರ ೫. ರಸಾಯನಶಾಸ್ತ್ರ ೬. ಸಸ್ಯಶಾಸ್ತ್ರ ೭. ಅರ್ಥಶಾಸ್ತ್ರ, ೮. ಎಲೆಕ್ಟ್ರಿಕಲ್ ಎಂಜಿನಿಯರಿಂಗ್, ೯. ಭೂಗೋಳ ಶಾಸ್ತ್ರ ೧೦. ಭೂ ವಿಜ್ಞಾನ, ೧೧. ಭಾರತೀಯ ಇತಿಹಾಸ, ೧೨. ಕಾನೂನು ಇತಿಹಾಸ, ೧೩. ಗಣಿತ, ೧೪. ಮೆಕ್ಯಾನಿಕಲ್ ಎಂಜನಿಯರಿಂಗ್, ೧೫. ವೈದ್ಯಕೀಯ ಶಾಸ್ತ್ರ, ೧೬. ತತ್ವ ಶಾಸ್ತ್ರ ೧೭. ರಾಜಕೀಯ ಶಾಸ್ತ್ರ ೧೮. ಮನಃಶಾಸ್ತ್ರ , ೧೯. ಭೌತಶಾಸ್ತ್ರ ೨೦. ಸಾರ್ವಜನಿಕ ಆಡಳಿತ, ೨೧. ಸಮಾಜ ಶಾಸ್ತ್ರ ೨೨. ಸಂಖ್ಯಾಶಾಸ್ತ್ರ ೨೩. ಪ್ರಾಣಿಶಾಸ್ತ್ರ.

## ಮುಖ್ಯ ಪರೀಕ್ಷೆ

ಮುಖ್ಯ ಪರೀಕ್ಷೆಯ ಉದ್ದೇಶ ಕೇವಲ ಅಭ್ಯರ್ಥಿಯ ವಿಷಯ ಸಂಗ್ರಹ ಮತ್ತು ಜ್ಞಾಪಕ ಶಕ್ತಿಯನ್ನು ಅಳೆಯುವುದಲ್ಲ. ಅಭ್ಯರ್ಥಿಯ ಬೌದ್ಧಿಕ ಶಕ್ತಿಯ ಸ್ವರೂಪ ಮತ್ತು ಆಳವನ್ನು ಪರೀಕ್ಷಿಸುವುದು ಈ ಪರೀಕ್ಷೆಯ ಮುಖ್ಯ ಉದ್ದೇಶ. ಮುಖ್ಯ ಪರೀಕ್ಷೆಗೆ ನಿಗದಿತವಾದ ಪಠ್ಯಕ್ರಮ ಪದವಿ ಮತ್ತು ಸ್ನಾತಕೋತ್ತರ ಪದವಿ ನಡುವಿನ ಮಟ್ಟದ್ದಾಗಿರುತ್ತದೆ. ಎಂಜಿನಿಯರಿಂಗ್ ಮತ್ತು ಕಾನೂನು ವಿಷಯಗಳಲ್ಲಿ ಮಾತ್ರ ಪಠ್ಯಕ್ರಮ ಪದವಿ ಮಟ್ಟದ್ದಾಗಿರುತ್ತದೆ. ಉತ್ತರಗಳು ಪ್ರಬಂಧರೂಪದಲ್ಲಿರುತ್ತವೆ. ಪ್ರತಿ ಪತ್ರಿಕೆಗೆ ಮೂರು ಗಂಟೆಗಳ ಅವಧಿ ನಿಗದಿಪಡಿಸಲಾಗಿರುತ್ತದೆ.

### ಭಾಷಾ ಪತ್ರಿಕೆ

ಮುಖ್ಯ ಪರೀಕ್ಷೆಗೆ ಇಂಗ್ಲಿಷ್ ಮತ್ತು ಯಾವುದಾದರೊಂದು ಭಾರತೀಯ ಭಾಷೆಯ ಪತ್ರಿಕೆ ಕಡ್ಡಾಯ. ಕನ್ನಡದ ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳುವುದಾದರೆ ಇಂಗ್ಲಿಷ್ ಮತ್ತು ಕನ್ನಡ ವಿಷಯದ ಭಾಷಾ ಪತ್ರಿಕೆಗಳು ಕಡ್ಡಾಯ. ಈ ಎರಡೂ ಪತ್ರಿಕೆಗಳು ತಲಾ ೩೦೦ ಅಂಕಗಳದ್ದಾಗಿರುತ್ತವೆ. ಈ ಭಾಷಾ ಪತ್ರಿಕೆಗಳ ಪಠ್ಯಕ್ರಮ ಮೆಟ್ರಿಕ್ಯುಲೇಷನ್ ಮಟ್ಟದ್ದಾಗಿರುತ್ತದೆ. ಮುಖ್ಯವಾಗಿ :

ಅ) ಯಾವುದಾದರೂ ಪಠ್ಯಭಾಗವನ್ನು ಕೊಟ್ಟು ಸಂಬಂಧಪಟ್ಟಂತೆ ಪ್ರಶ್ನೆಗಳಿಗೆ ಉತ್ತರವನ್ನು ನಿರೀಕ್ಷಿಸಲಾಗುತ್ತದೆ.

ಆ) ಸಾರಾಂಶ ಬರೆಯುವುದು.

ಇ) ಭಾಷೆಯ ಉಪಯೋಗ ಮತ್ತು ಶಬ್ದಸಂಪತ್ತಿನ ಪರೀಕ್ಷೆ

ಈ) ಯಾವುದಾದರೂ ವಿಷಯದ ಬಗ್ಗೆ ಪುಟ್ಟ ಪ್ರಬಂಧವನ್ನು ಬರೆಯುವಂತೆ ಕೇಳಲಾಗುತ್ತದೆ.

ಇಂಗ್ಲಿಷ್ ಮತ್ತು ಭಾಷಾ ಪತ್ರಿಕೆಗಳ ಅಂಕಗಳನ್ನು ಅಂತಿಮ ಪಟ್ಟಿಯನ್ನು ತಯಾರಿಸುವಾಗ ಪರಿಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ. ಆದರೆ ಈ ಎರಡೂ ಪತ್ರಿಕೆಗಳಲ್ಲಿ ಲೋಕಸೇವಾ ಆಯೋಗ ನಿರ್ಧರಿಸುವ ಅರ್ಹತಾ ಮಟ್ಟವನ್ನು ಅಭ್ಯರ್ಥಿ ಗಳಿಸಿದರೆ ಮಾತ್ರ ಆತನ ಇತರ ಪತ್ರಿಕೆಗಳನ್ನು ಮೌಲ್ಯಮಾಪನಕ್ಕೆ ತೆಗೆದುಕೊಳ್ಳಲಾಗುತ್ತದೆ.

### ಅಭ್ಯರ್ಥಿ ತೆಗೆದುಕೊಳ್ಳಬೇಕಾದ ಇತರ ವಿಷಯಗಳು

**ಪ್ರಬಂಧ** **ಅಂಕಗಳು ೨೦೦**

ಹಲವು ವಿಷಯಗಳನ್ನು ಕೊಟ್ಟು ಯಾವುದಾದರೊಂದು ವಿಷಯದ ಮೇಲೆ ಪ್ರಬಂಧವನ್ನು ಬರೆಯುವಂತೆ ಕೇಳಲಾಗುತ್ತದೆ. ಅಭ್ಯರ್ಥಿಯು ತಾನು ಆಯ್ದುಕೊಂಡ ವಿಷಯದ ಮೇಲೆ ಕೇಂದ್ರೀಕರಿಸಿದಂತೆ ತನ್ನ ಆಲೋಚನೆಯನ್ನು ಕ್ರಮಬದ್ಧವಾಗಿ ಮಂಡಿಸಬೇಕು. ವಿಷಯ ಮಂಡನೆಯ ಸಂದರ್ಭದಲ್ಲಿ ಅನಗತ್ಯವಾಗಿ ಲಂಬಿಸಬಾರದು. ವಿಷಯ ಮಂಡನೆ ಸಂಕ್ಷಿಪ್ತವಾಗಿರಬೇಕು. ಪರಿಣಾಮ

ಕಾರಿ ಮತ್ತು ಖಚಿತ ಅಭಿಪ್ರಾಯಗಳಿಗೆ ಹೆಚ್ಚು ಮೌಲ್ಯವಿರುತ್ತದೆ.

## ಸಾಮಾನ್ಯ ಜ್ಞಾನ

ಸಾಮಾನ್ಯ ಜ್ಞಾನದಲ್ಲಿ ಎರಡು ಪತ್ರಿಕೆಗಳಿರುತ್ತವೆ. ಒಂದೊಂದು ಪತ್ರಿಕೆಗೆ ತಲಾ ೩೦೦ ಅಂಕಗಳಿರುತ್ತವೆ.

ಮೊದಲ ಪತ್ರಿಕೆಯ ಪಠ್ಯಕ್ರಮ ಕೆಳಕಂಡಂತಿರುತ್ತದೆ.

ಅ) ಭಾರತದ ಆಧುನಿಕ ಇತಿಹಾಸ ಮತ್ತು ಭಾರತೀಯ ಸಂಸ್ಕೃತಿ. ೧೯ನೇ ಶತಮಾನದ ಮಧ್ಯಭಾಗದ ಸುಮಾರಿನಿಂದ ಈಚಿನ ವರೆಗಿನ ಭಾರತದ ಇತಿಹಾಸ ಆಧುನಿಕ ಇತಿಹಾಸದಲ್ಲಿ ಸೇರುತ್ತದೆ. ಗಾಂಧಿ, ರವೀಂದ್ರನಾಥ ಟಾಗೋರ್ ಮತ್ತು ನೆಹರು ಅವರ ಮೇಲೆ ಪ್ರಶ್ನೆಗಳು ಇರುತ್ತವೆ.

ಆ) ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಪ್ರಾಮುಖ್ಯದ ಪ್ರಚಲಿತ ಸಂಗತಿಗಳು.

ಇ) ಸಂಖ್ಯಾ ವಿಶ್ಲೇಷಣೆ, ನಕ್ಷೆ ಮತ್ತು ಪಟಲಗಳ ವಿಶ್ಲೇಷಣೆ.

ಈ ಭಾಗದಲ್ಲಿ ಅಂಕಿಗಳು ಅಥವಾ ನಕ್ಷೆಗಳ ಮೂಲಕ ನೀಡಲಾದ ಮಾಹಿತಿಯಿಂದ ನಕ್ಷೆಗಳಲ್ಲಿರುವ ನ್ಯೂನತೆಗಳು, ಅದರ ಮಿತಿಗಳು ಮತ್ತು ಸ್ಥಿರವಲ್ಲದ ನಡವಳಿಕೆಗಳನ್ನು ಗುರುತಿಸುವಲ್ಲಿ ಅಭ್ಯರ್ಥಿಯ ಸಾಮರ್ಥ್ಯವನ್ನು ಪರೀಕ್ಷಿಸಲಾಗುತ್ತದೆ.

ಎರಡನೆಯ ಪತ್ರಿಕೆಯ ಪಠ್ಯಕ್ರಮ ಕೆಳಕಂಡಂತಿರುತ್ತದೆ.

ಅ) ಭಾರತೀಯ ರಾಜಕೀಯ ವ್ಯವಸ್ಥೆ : ಭಾರತದ ಸಂವಿಧಾನಕ್ಕೆ ಸಂಬಂಧಪಟ್ಟಂತೆ ಪ್ರಶ್ನೆಗಳಿರುತ್ತವೆ. ಭಾರತದಲ್ಲಿರುವ ಪಕ್ಷ ವ್ಯವಸ್ಥೆಯ ಬಗ್ಗೆಯೂ ಪ್ರಶ್ನೆಗಳನ್ನು ಕೇಳಲಾಗುತ್ತದೆ.

ಆ) ಭಾರತೀಯ ಆರ್ಥಿಕತೆ ಮತ್ತು ಭೂಗೋಳಶಾಸ್ತ್ರ. ಭಾರತದಲ್ಲಿನ ಯೋಜನಾ ವಿಧಾನ, ಪ್ರಾಕೃತಿಕ, ಆರ್ಥಿಕ ಮತ್ತು ಸಾಮಾಜಿಕ ಭೂಗೋಳಶಾಸ್ತ್ರದ ಬಗೆಗಿನ ಪ್ರಶ್ನೆಗಳನ್ನು ಕೇಳಲಾಗುತ್ತದೆ.

ಇ) ಭಾರತದ ಅಭಿವೃದ್ಧಿಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಪಾತ್ರ.

## ಐಚ್ಛಿಕ ವಿಷಯಗಳು

ಕೊಟ್ಟಿರುವ ಐಚ್ಛಿಕ ವಿಷಯಗಳ ಪಟ್ಟಿಯಿಂದ ಎರಡು ವಿಷಯಗಳನ್ನು ಆಯ್ದುಕೊಳ್ಳಬಹುದು. ಈ ಎರಡೂ ವಿಷಯಗಳಿಂದ ತಲಾ ಎರಡು ಪತ್ರಿಕೆಗಳಂತೆ ಒಟ್ಟು ನಾಲ್ಕು ಪತ್ರಿಕೆಗಳನ್ನು ಉತ್ತರಿಸಬೇಕಾಗುತ್ತದೆ. ಪ್ರತಿ ಪತ್ರಿಕೆಗೆ ನಿಗದಿಪಡಿಸಿರುವ ಅಂಕಗಳು ೩೦೦.

## ಐಚ್ಛಿಕ ವಿಷಯಗಳ ಪಟ್ಟಿ

೧. ವ್ಯವಸಾಯ (Agriculure) ೨. ಪಶು ಸಂಗೋಪನೆ ಮತ್ತು ವಿಜ್ಞಾನ ೩. ಮಾನವಶಾಸ್ತ್ರ ೪. ಸಸ್ಯಶಾಸ್ತ್ರ ೫. ಸಿವಿಲ್ ಎಂಜಿನಿಯರಿಂಗ್ ೬. ವಾಣಿಜ್ಯ ಶಾಸ್ತ್ರ ೭. ಅರ್ಥಶಾಸ್ತ್ರ ೮. ಎಲೆಕ್ಟ್ರಿಕಲ್ ಎಂಜಿನಿಯರಿಂಗ್ ೯. ಭೂಗೋಳಶಾಸ್ತ್ರ ೧೦. ಭೂಗರ್ಭಶಾಸ್ತ್ರ ೧೧. ಇತಿಹಾಸ ೧೨. ಕಾನೂನು ಶಾಸ್ತ್ರ ೧೩. ಮ್ಯಾನೇಜ್‌ಮೆಂಟ್ ೧೪. ಗಣಿತಶಾಸ್ತ್ರ ೧೫. ಮೆಕಾನಿಕಲ್ ಎಂಜಿನಿಯರಿಂಗ್ ೧೬. ವೈದ್ಯಶಾಸ್ತ್ರ ೧೭. ತತ್ವಶಾಸ್ತ್ರ ೧೮. ಭೌತಶಾಸ್ತ್ರ ೧೯. ರಾಜಕೀಯ ಶಾಸ್ತ್ರ ಮತ್ತು ಅಂತರರಾಷ್ಟ್ರೀಯ ಸಂಬಂಧಗಳು ೨೦. ಮನಃಶಾಸ್ತ್ರ ೨೧. ಸಾರ್ವಜನಿಕ ಆಡಳಿತ ೨೨. ಸಮಾಜಶಾಸ್ತ್ರ ೨೩. ಸಂಖ್ಯಾಶಾಸ್ತ್ರ ೨೪. ಪ್ರಾಣಿಶಾಸ್ತ್ರ ೨೫. ಕನ್ನಡ (ಭಾರತೀಯ ಭಾಷೆಗಳಿಂದ)

ಅಭ್ಯರ್ಥಿಗಳು ಕೆಳಕಂಡ ವಿಷಯಗಳನ್ನು ಜೊತೆಯಲ್ಲಿ ಐಚ್ಛಿಕ ವಿಷಯಗಳನ್ನಾಗಿ ಆರಿಸಿಕೊಳ್ಳುವಂತಿಲ್ಲ.

೧. ರಾಜಕೀಯ ಶಾಸ್ತ್ರ, ಅಂತರರಾಷ್ಟ್ರೀಯ ಸಂಬಂಧಗಳು ಮತ್ತು ಸಾರ್ವಜನಿಕ ಆಡಳಿತ.
೨. ವಾಣಿಜ್ಯಶಾಸ್ತ್ರ ಮತ್ತು ಮ್ಯಾನೇಜ್‌ಮೆಂಟ್.
೩. ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರ.
೪. ವ್ಯವಸಾಯ ಮತ್ತು ಪಶುಸಂಗೋಪನೆ, ವಿಜ್ಞಾನ.
೫. ಮ್ಯಾನೇಜ್‌ಮೆಂಟ್ ಮತ್ತು ಸಾರ್ವಜನಿಕ ಆಡಳಿತ.
೬. ಎಂಜಿನಿಯರಿಂಗ್ ವಿಷಯಗಳಲ್ಲಿ ಯಾವುದಾದರೊಂದನ್ನು ಮಾತ್ರ ಐಚ್ಛಿಕ ವಿಷಯವನ್ನಾಗಿ ಆರಿಸಿಕೊಳ್ಳಬೇಕು.
೭. ಪಶುಸಂಗೋಪನೆ ವಿಜ್ಞಾನ ಮತ್ತು ವೈದ್ಯಕೀಯ ವಿಜ್ಞಾನ.

[ಸೌಜನ್ಯ : ಐ.ಎ.ಎಸ್. ಸ್ಟಡಿ ಸರ್ಕಲ್]

# ಜೆ.ಎಸ್.ಎಸ್. ಸ್ಪರ್ಧಾತ್ಮಕ ಪರೀಕ್ಷೆಗಳ ತರಬೇತಿ ಕೇಂದ್ರ

ದೇಶದ ಪ್ರತಿಯೊಬ್ಬ ಪದವೀಧರನೂ ರಾಷ್ಟ್ರೀಯ ಆಡಳಿತಾತ್ಮಕ ಹುದ್ದೆಗಳ ಆಯ್ಕೆಗೆ ನಡೆಯುವ ಪರೀಕ್ಷೆ ತೆಗೆದುಕೊಳ್ಳಲು ಅರ್ಹರಾಗಿದ್ದರೂ, ಎಷ್ಟೋ ವಿದ್ಯಾರ್ಥಿಗಳಿಗೆ ಈ ರೀತಿಯ ಒಂದು ಪರೀಕ್ಷೆ ನಡೆಸಲಾಗುತ್ತದೆ ಎಂಬುದೇ ತಿಳಿದಿಲ್ಲ. ಅರಿವಿದ್ದರೂ ಇದು ನಮ್ಮಿಂದ ಸಾಧ್ಯವಿಲ್ಲ ಎಂದು ತಮ್ಮ ಸಾಮರ್ಥ್ಯಕ್ಕೆ ಸೀಮಿತ ಗೆರೆಯನ್ನು ಎಳೆದುಕೊಳ್ಳುವ ಮನೋಭಾವ. ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳಿಗೆ ಸರಿಯಾದ ತರಬೇತಿ ಸಿಗದಿರುವುದು ಹಾಗೂ ಆರ್ಥಿಕ ಮುಗ್ಗಟ್ಟು ಉದಾಸೀನಕ್ಕೆ ಮುಖ್ಯ ಕಾರಣ. ಈ ಸಮಸ್ಯೆಗಳಿಗೆ ಪರಿಹಾರ ನೀಡಿ ವಿದ್ಯಾರ್ಥಿಗಳಲ್ಲಿ ಆತ್ಮವಿಶ್ವಾಸ ತುಂಬಿ ಅವರನ್ನು ಕೇಂದ್ರೀಯ ಸೇವೆಗಳತ್ತ ಆಕರ್ಷಿಸಿ ಸಿದ್ಧಗೊಳಿಸುವ ಉದ್ದೇಶದಿಂದ 'ಜಗದ್ಗುರು ಶ್ರೀ ಶಿವರಾತ್ರೀಶ್ವರ ಸ್ಪರ್ಧಾತ್ಮಕ ಪರೀಕ್ಷಾ ತರಬೇತಿ ಸಂಸ್ಥೆ' (ಜೆಸ್ಪೀಸ್) ೧೯೯೨ರಲ್ಲಿ ಜನ್ಮ ತಾಳಿತು. ಯುಪಿಎಸ್‌ಸಿ, ಕೆಪಿಎಸ್‌ಸಿ, ಬ್ಯಾಂಕ್ ಹಾಗೂ ಇತರ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ವಿದ್ಯಾರ್ಥಿಗಳಿಗೆ ಅಗತ್ಯ ತರಬೇತಿಯನ್ನು ಉಚಿತವಾಗಿ ನೀಡುವ, ಸುಸಜ್ಜಿತ ಹಾಸ್ಟೆಲ್, ಗ್ರಂಥಾಲಯಗಳನ್ನು ಹೊಂದಿರುವ ಸಂಸ್ಥೆ ಇದಾಗಿದೆ. ಜಾತಿ ಮತ ಭೇದವಿಲ್ಲದೆ ತರಬೇತಿಯನ್ನು ನೀಡುತ್ತಿರುವುದು ಮತ್ತೊಂದು ವೈಶಿಷ್ಟ್ಯ.

ಹಲವಾರು ಶಿಕ್ಷಣ ಸಂಸ್ಥೆಗಳನ್ನು ನಡೆಸಿ ಕೊಂಡು ಬರುತ್ತಿರುವ ಮೈಸೂರಿನ ಜೆ.ಎಸ್.ಎಸ್. ಮಹಾವಿದ್ಯಾಪೀಠದ ಸಾಮಾಜಿಕ ಸೇವಾ ಕೈಂಕರ್ಯವಾಗಿ ರೂಪು ತಾಳಿರುವ 'ಜೆಸ್ಪೀಸ್' ಸಂಸ್ಥೆಗೆ ಸುತ್ತೂರು ಮಠಾಧ್ಯಕ್ಷರಾದ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಮಹಾಪೋಷಕರಾಗಿದ್ದು, ರಾಜ್ಯ ಸರ್ಕಾರದ ಯೋಜನಾ ಮಂಡಲಿಯ ಉಪಾಧ್ಯಕ್ಷರೂ ಮತ್ತು ಕರ್ನಾಟಕ ಹಾಗೂ ಬೆಂಗಳೂರು ವಿಶ್ವವಿದ್ಯಾಲಯಗಳ ಮಾಜಿ ಕುಲಪತಿಗಳೂ ಆದ ಡಾ.ಡಿ.ಎಂ.ನಂಜುಂಡಪ್ಪನವರು ಗೌರವಾಧ್ಯಕ್ಷರಾಗಿದ್ದಾರೆ.



ಡಾ. ಡಿ.ಎಂ. ನಂಜುಂಡಪ್ಪ

### ತರಬೇತಿ ವಿವರಗಳು

೧. ಕೇಂದ್ರ ಲೋಕ ಸೇವಾ ಆಯೋಗ ಪರೀಕ್ಷೆಗಳು.
೨. ಕರ್ನಾಟಕ ಲೋಕಸೇವಾ ಆಯೋಗ ಪರೀಕ್ಷೆಗಳು.
೩. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಸರ್ವಿಸ್ ಬೋರ್ಡ್ ಪರೀಕ್ಷೆಗಳು.
೪. ಸೆಂಟ್ರಲ್ ರಿಕ್ರ್ಯೂಟ್‌ಮೆಂಟ್ ಬೋರ್ಡ್ ಪರೀಕ್ಷೆಗಳು.
೫. ಸ್ಟೇಟ್ ಬ್ಯಾಂಕ್ ಗ್ರೂಪ್ ಪರೀಕ್ಷೆಗಳು.
೬. ಬಿ.ಎಸ್.ಆರ್.ಬಿ. ಪರೀಕ್ಷೆಗಳು.

ಸ್ಪರ್ಧಾತ್ಮಕ ಪರೀಕ್ಷಾ ವಿಭಾಗಗಳಲ್ಲಿ ಐ.ಎ.ಎಸ್., ಐ.ಪಿ.ಎಸ್., ಐ.ಎಫ್.ಎಸ್., ಐ.ಇ.ಎಸ್, ಇಂಜಿನಿಯರಿಂಗ್ ಸರ್ವಿಸಸ್ ಪರೀಕ್ಷೆ, ಕೆ.ಎ.ಎಸ್., ಕೆ.ಪಿ.ಎಸ್., ಇಂಡಿಯನ್ ಸ್ಟ್ಯಾಟಿಸ್ಟಿಕಲ್ ಸರ್ವಿಸ್ ಪರೀಕ್ಷೆಗಳು ಹೊಂದಿಕೊಂಡಿವೆ. ಈ ತರಬೇತಿಯು ಪ್ರಿಲಿಮಿನರಿ, ಮೇನ್ ಹಾಗೂ ಪರಸ್ನಲೀಟಿ ಟೆಸ್ಟ್, ಇನ್ನಿತರ ಸಂಬಂಧಪಟ್ಟವುಗಳ ಬಗ್ಗೆ ಇರುತ್ತದೆ.

### ಅರ್ಹತೆಗಳು

ಯಾವುದೇ ಪದವೀಧರರು ಸ್ನಾತಕೋತ್ತರ ಪಧವೀಧರರು ಅಥವಾ ಪದವಿ ಅಂತಿಮ ವರ್ಷದಲ್ಲಿರುವವರು ಇಲ್ಲಿ ತರಬೇತಿಗೆ ಅರ್ಹರು. ೨೧-೨೮ ವರ್ಷದ ಎಲ್ಲಾ ವರ್ಗದವರಿಗೆ ಈ ಸಂಸ್ಥೆಯು ತರಬೇತಿಯನ್ನು ಆಂಗ್ಲ ಮಾಧ್ಯಮದಲ್ಲಿ ಒದಗಿಸುತ್ತದೆ. ಇನ್ನಿತರ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಅರ್ಹತೆ ಕಡಿಮೆ ಇದ್ದಲ್ಲಿ ಅವರು ಕೂಡಾ ತರಬೇತಿಗೆ ಅರ್ಹರಾಗಿರುತ್ತಾರೆ.

### ಆಯ್ಕೆ ವಿಧಾನ

ವಿದ್ಯಾರ್ಥಿಗಳನ್ನು ಪ್ರವೇಶ ಪರೀಕ್ಷೆ ಹಾಗೂ ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು. ಇದಲ್ಲದೆ ವಿದ್ಯಾರ್ಥಿಯ ರಾಜಕೀಯ, ತಾಂತ್ರಿಕ, ವಿಜ್ಞಾನ, ಚರಿತ್ರೆ ಮುಂತಾದ ವಿಷಯಗಳ ಜ್ಞಾನವನ್ನು ಕೂಡಾ ಗಣನೆಗೆ ತೆಗೆದುಕೊಳ್ಳಲಾಗುವುದು.

## ರಾಷ್ಟ್ರೀಯ ಸೇವಾ ಬಾನಂಗಳದಲ್ಲಿ 'ಜೆಸ್ಪೀಸ್'ನ ತಾರೆಗಳು

'ಜೆ.ಎಸ್.ಎಸ್.' ಸ್ಪರ್ಧಾತ್ಮಕ ಪರೀಕ್ಷೆಗಳ ತರಬೇತಿ ಕೇಂದ್ರ (ಜೆಸ್ಪೀಸ್)ದ ಮೂಲಕ ೧೧ ವಿದ್ಯಾರ್ಥಿಗಳು ೧೯೯೬ರ ಕೇಂದ್ರ ಲೋಕಸೇವಾ ಆಯೋಗ ನಡೆಸಿದ ನಾಗರೀಕ ಸೇವಾ ಪರೀಕ್ಷೆ (ಐ.ಎ.ಎಸ್., ಐ.ಪಿ.ಎಸ್.)ಯಲ್ಲಿ ರ್‍ಯಾಂಕ್‌ಗಳನ್ನು ಗಳಿಸಿದ್ದಾರೆ. ಅವರಲ್ಲಿ ನಾಲ್ವರು ಮಹಿಳೆಯರು. ರಾಜು ಮೊಗವೀರ, ಡಿ.ಮಂಜುನಾಥ್ ಕನ್ನಡ ಭಾಷಾ ಸಾಹಿತ್ಯವನ್ನು ಐಚ್ಛಿಕ ವಿಷಯವನ್ನಾಗಿ ಆರಿಸಿಕೊಂಡು ಯಶಸ್ವಿಯಾಗಿದ್ದಾರೆ.

ಈ ಬಾರಿ ರಾಷ್ಟ್ರೀಯ ಮಟ್ಟದ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಸುಮಾರು ೨,೪೦,೦೦೦ ವಿದ್ಯಾರ್ಥಿಗಳಲ್ಲಿ ೧೫,೦೦೦ ವಿದ್ಯಾರ್ಥಿಗಳು ಅಂತಿಮ ಪರೀಕ್ಷೆಯನ್ನು ಎದುರಿಸಿ, ಅವರಲ್ಲಿ ವ್ಯಕ್ತಿತ್ವ ಪರೀಕ್ಷೆಗೆ ಅರ್ಹತೆ ಪಡೆದ ೧೫೪೭ರಲ್ಲಿ ೭೩೭ ವಿದ್ಯಾರ್ಥಿಗಳು ಕೇಂದ್ರ ಸೇವೆಗೆ ಆಯ್ಕೆಯಾಗಿದ್ದಾರೆ. 'ಜೆಸ್ಪೀಸ್'ನ ೨೦ ವಿದ್ಯಾರ್ಥಿಗಳಲ್ಲಿ ೧೫ ವಿದ್ಯಾರ್ಥಿಗಳು ವ್ಯಕ್ತಿತ್ವ ಪರೀಕ್ಷೆಗೆ ಅರ್ಹತೆ ಪಡೆದು, ಅವರಲ್ಲಿ ೧೧ ವಿದ್ಯಾರ್ಥಿಗಳು ರ್‍ಯಾಂಕ್ ಗಳಿಸಿ ಉತ್ತಮ ಸಾಧನೆ ತೋರಿದ್ದಾರೆ.

## ಪ್ರವೇಶ ತೆಗೆದುಕೊಳ್ಳುವ ವಿಧಾನ

ಮುದ್ರಿತ ಅರ್ಜಿಯನ್ನು ಮತ್ತು ವಿವರಗಳನ್ನು ಸಂಸ್ಥೆಯ ಮುಖ್ಯಾಧಿಕಾರಿಗಳಿಂದ ೫೦ ರೂಪಾಯಿ ಪೋಸ್ಟಲ್ ಆರ್ಡರ್ ನೀಡಿ ಪಡೆಯಬಹುದು. ವಿಳಾಸ : JSS Training Institute for Competative Examinations, 8th Block, 38th Cross, Jayanagar, Bangalore -11.

## ಇಂದಿರಾಗಾಂಧಿ ಮುಕ್ತ ವಿಶ್ವವಿದ್ಯಾಲಯ

ಇಂದಿರಾಗಾಂಧಿ ಮುಕ್ತ ವಿಶ್ವವಿದ್ಯಾಲಯ (Ignou) ದವರು ೧೯೯೮ರ ಸಾಲಿನಲ್ಲಿ ನಡೆಸುವ ವಿವಿಧ ಕೋರ್ಸುಗಳಿಗೆ ಪ್ರವೇಶ ನೀಡಲಾಗುತ್ತಿದೆ. ಅರ್ಜಿ ಸಲ್ಲಿಸಲು ಅಂತಿಮ ದಿನಾಂಕ ३೦.೯.೯೭. ಅಧಿಕೃತ ಅರ್ಜಿ ನಮೂನೆಗಳು ಮುಗಿದು ಹೋಗಿರುವುದರಿಂದ ಅಭ್ಯರ್ಥಿಗಳು ಅರ್ಜಿ ನಮೂನೆಯ ನೆರಳಚ್ಚು (ಜೆರಾಕ್ಸ್) ಬಳಸಬಹುದು.

## ಅಭಿವೃದ್ಧಿ ಕಾರ್ಯಕ್ರಮ

ಬೆಂಗಳೂರು ವಿಶ್ವವಿದ್ಯಾಲಯ ಹಾಗೂ ಸಣ್ಣ ಕೈಗಾರಿಕೆಗಳ ಸೇವಾ ಸಂಸ್ಥೆಯ ಆಶ್ರಯದಲ್ಲಿ ಸಣ್ಣ ಕೈಗಾರಿಕೆಗಳಲ್ಲಿ 'ವಾಣಿಜ್ಯ ವ್ಯವಸ್ಥೆ' ಮತ್ತು 'ಹಣಕಾಸು ಆಡಳಿತ'ದ ಕುರಿತು ಸಂಜೆಯ ಹೊತ್ತಿನ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

ಕಾರ್ಯಕ್ರಮವು ಸೆಪ್ಟೆಂಬರ್ ೧೫ರಿಂದ ೨೬ (ವಾಣಿಜ್ಯ ವ್ಯವಸ್ಥೆ) ಹಾಗೂ ನವಂಬರ್ ೧೭ರಿಂದ ೨೮ (ಹಣಕಾಸು ಆಡಳಿತ) ರವರೆಗೆ ಸಣ್ಣ ಕೈಗಾರಿಕೆಗಳ ಸೇವಾ ಸಂಸ್ಥೆಯಲ್ಲಿ ನಡೆಯಲಿದೆ. ಹೆಚ್ಚಿನ ವಿವರಗಳಿಗಾಗಿ ಉಪ ನಿರ್ದೇಶಕರು. ಸಣ್ಣ ಕೈಗಾರಿಕೆಗಳ ಸೇವಾ ಸಂಸ್ಥೆ. ರಾಜಾಜಿನಗರ, ಬೆಂಗಳೂರು - ೫೬೦ ೦೪೪ ಈ ವಿಳಾಸವನ್ನು ಸಂಪರ್ಕಿಸಬಹುದು. ಅರ್ಜಿ ಸಲ್ಲಿಸಲು ಅನುಕ್ರಮವಾಗಿ ಸೆಪ್ಟಂಬರ್ ೧३ ಹಾಗೂ ನವಂಬರ್ ೧३ ಕೊನೆಯ ದಿನಗಳಾಗಿರುತ್ತವೆ.

# ಯು.ಪಿ.ಎಸ್.ಸಿ. ಸದಸ್ಯ ಕನ್ನಡಿಗ ಡಾ. ಎಲ್. ಸಿದ್ಧವೀರೇಗೌಡ

ಶಿಕ್ಷಣ ಹಾಗೂ ಸಂಶೋಧನೆ ಎರಡೂ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ವಿರಳ ವ್ಯಕ್ತಿಗಳ ಸಾಲಿನಲ್ಲಿ ಸೇರಿರುವರು ಪ್ರೊಫೆಸರ್ ಎಲ್. ಸಿದ್ಧವೀರೇಗೌಡರು. ಮೂಲತಃ ವಿಜ್ಞಾನಿಯಾದ ಡಾ. ಸಿದ್ಧವೀರೇಗೌಡರು ತಮ್ಮ ಸ್ನಾತಕೋತ್ತರ (ಪ್ರಾಣಿಶಾಸ್ತ್ರ) ಪದವಿಯನ್ನು ಮೈಸೂರು ವಿಶ್ವವಿದ್ಯಾಲಯದಿಂದ ಪ್ರಥಮ ರ್‍ಯಾಂಕ್‌ನೊಂದಿಗೆ ಪೂರ್ಣಗೊಳಿಸಿ ಇದೇ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪದವಿಯನ್ನು ಬಂಗಾರ ಪದಕದೊಂದಿಗೆ ಪಡೆದುಕೊಂಡರು.



ಇವರು ಸುಮಾರು ३೧ ವರ್ಷಗಳ ಸುದೀರ್ಘ ಕಾಲ ಶಿಕ್ಷಣ ಕ್ಷೇತ್ರದಲ್ಲಿ ತಮ್ಮ ಸೇವೆಯನ್ನು ಸಲ್ಲಿಸಿ ಇದರ ಜೊತೆಗೆ ಹಲವು ಸಂಶೋಧನೆ ಕಾರ್ಯಗಳನ್ನು ಕೈಗೊಂಡಿದ್ದಾರೆ.

೧೯೭೧ ರಿಂದ ೧೯೯೨ರವರೆಗೆ ಸುಮಾರು ೫೦ ವೈಜ್ಞಾನಿಕ ಸಂಶೋಧನ ಲೇಖನಗಳು ಪ್ರತಿಷ್ಠಿತ ದೇಶೀಯ ಹಾಗೂ ವಿದೇಶಿಯ ವೈಜ್ಞಾನಿಕ ಪತ್ರಿಕೆಗಳಾದ Genetics, (USA) Exporiontia (Switzerland), Cytobios (UK), Gnetica (Neherlands) Drosophila Information Service (USA) ಮತ್ತು Nucleus; Current Sciences and Journal of Mysore University ಗಳಲ್ಲಿ ಪ್ರಕಟಿತಗೊಂಡಿವೆ. ಉಪನ್ಯಾಸ ನೀಡಲು ಹಾಗೂ ಮಾದರಿಗಳನ್ನು ಸಂಗ್ರಹಿಸಲು ಹಲವಾರು ದೇಶಗಳ ವಿಶ್ವವಿದ್ಯಾಲಯಗಳಿಗೆ ಭೇಟಿ ನೀಡಿದ್ದಾರೆ.

ಸಂದರ್ಶಕ ವಿಜ್ಞಾನಿಯಾಗಿಯೂ ಹಲವು ದೇಶಗಳಿಗೆ ಭೇಟಿ ನೀಡಿದ್ದಾರೆ. ಅವುಗಳಲ್ಲಿ ಮುಖ್ಯವಾದುವುಗಳೆಂದರೆ ಥೈಲ್ಯಾಂಡ್, ಸಿಂಗಾಪೂರ್, ಶ್ರೀಲಂಕಾ, ಮಲೇಸಿಯಾ, ಅಮೇರಿಕಾ ಮತ್ತು ಕೆನಡಾ. ಸಂಶೋಧನೆಯನ್ನು ಗಮನಿಸಿ ಹಲವಾರು ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಸಂಸ್ಥೆಗಳು ಇವರಿಗೆ ಫೆಲೋಶಿಪ್‌ನ್ನು ನೀಡಿ ಗೌರವಿಸಿದೆ.

ಹಲವಾರು ವೈಜ್ಞಾನಿಕ ಸಂಘಗಳು ಡಾ. ಸಿದ್ಧವೀರೇಗೌಡರಿಗೆ ಸದಸ್ಯತ್ವ ನೀಡಿ ಪ್ರತಿಭೆಯನ್ನು ಗೌರವಿಸಿವೆ. ಇವರು ತಮ್ಮ ನೆಚ್ಚಿನ ಮಾತೃ ಭಾಷೆಯಾದ ಕನ್ನಡದಲ್ಲಿ ಹಲವು ವೈಜ್ಞಾನಿಕ ಪುಸ್ತಕಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಮುಖ್ಯವಾದುವುಗಳೆಂದರೆ ಮಾನವನ ಉಗಮ, ಸಾಕು ಪ್ರಾಣಿಗಳು, ವಿಜ್ಞಾನ ಸಾಹಿತ್ಯ ನಿರ್ಮಾಣ, ಮಾನವನ ಅನುವಂಶೀಯ ರೋಗಗಳು ಹಾಗೂ ಚಾರ್ಲ್ಸ್ ಡಾರ್ವಿನ್. ಇದಲ್ಲದೆ ಕುವೆಂಪು ಕನ್ನಡ ಅಧ್ಯಯನ ಕೇಂದ್ರದವರು ಪ್ರಕಟಿಸಿದ ಕನ್ನಡ ವಿಶ್ವಕೋಶಕ್ಕೆ ಹಲವು ಲೇಖನಗಳನ್ನು ಬರೆದಿದ್ದಾರೆ. ಇವರು ಬರಹಗಾರರಲ್ಲದೆ ಒಳ್ಳೆಯ ಭಾಷಣಕಾರರು ಕೂಡ ಆಗಿದ್ದಾರೆ.

ಇವರ ಸಾಧನೆಯನ್ನು ಕೇಂದ್ರ ಸರಕಾರದವರು ಗಮನಿಸಿ ಕೇಂದ್ರ ಲೋಕ ಸೇವಾ ಆಯೋಗಕ್ಕೆ ಸದಸ್ಯರನ್ನಾಗಿ ನಾಮಕರಣ ಮಾಡಿದ್ದಾರೆ. ಅರುವತ್ತರ ಹರೆಯದ ಇವರ ಉತ್ಸಾಹ ಹಾಗೂ ಚಟುವಟಿಕೆಗಳು ಇಪ್ಪತ್ತರ ಯುವಕರನ್ನು ನಾಚಿಸುವ ರೀತಿಯಲ್ಲಿವೆ. ಇಂತಹ ಪ್ರತಿಭಾನ್ವಿತರು ತಾವು ತಾಂತ್ರಿಕವಾಗಿ ನಿವೃತ್ತರಾದರೂ ತಮ್ಮ ಜೀವನ ಪರ್ಯಂತ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡುವಂತಾದರೆ ಅದು ರಾಷ್ಟ್ರದ ಅದರಲ್ಲೂ ಕನ್ನಡಿಗರ ಸೌಭಾಗ್ಯ.

# ಧಾರವಾಡದ ಕಾಕಡೆ ತರಬೇತಿ ಕೇಂದ್ರ

ಜೂನ್ ೮, ೧೯೯೭ರಂದು ನಡೆದ ಭಾರತೀಯ ಲೋಕಸೇವಾ ಆಯೋಗದ ಭಾರತೀಯ ಆಡಳಿತ ಸೇವೆ (IAS) ಪ್ರಾಥಮಿಕ ಪರೀಕ್ಷೆಯಲ್ಲಿ ಧಾರವಾಡದ ಕಾಕಡೆ ಐ.ಎ.ಎಸ್. ಮತ್ತು ಕೆ.ಎ.ಎಸ್. ಅಧ್ಯಯನ ಕೇಂದ್ರದ ೭ ಜನ ವಿದ್ಯಾರ್ಥಿಗಳು ತೇರ್ಗಡೆ ಯಾಗಿದ್ದಾರೆ. ಇಲ್ಲಿಯವರೆಗೆ ಧಾರವಾಡ ಪರೀಕ್ಷಾ ಕೇಂದ್ರದಿಂದ ಕೇವಲ ೩-೪ ಜನರು ಉತ್ತೀರ್ಣರಾಗುತ್ತಿದ್ದು ಮೊದಲ ಬಾರಿಗೆ ಕೇವಲ ಕಾಕಡೆ ಐ.ಎ.ಎಸ್. ಮತ್ತು ಕೆ.ಎ.ಎಸ್. ಅಧ್ಯಯನ ಕೇಂದ್ರದಿಂದಲೇ ೭ ಜನರು ಉತ್ತೀರ್ಣರಾಗಿದ್ದು ಧಾರವಾಡದ ಇತಿಹಾಸ ದಲ್ಲಿಯೇ ಪ್ರಥಮವೆನ್ನಲಾಗಿದೆ.

ಪ್ರಾರಂಭವಾದ ಮೊದಲ ವರ್ಷ ದಲ್ಲಿಯೇ, ಕಾಕಡೆ ಅಧ್ಯಯನ ಕೇಂದ್ರದ ಫಲಿತಾಂಶವು ಪ್ರತಿಶತ ೩೭ರಷ್ಟಾಗಿದ್ದು, ಈ ಶೇಕಡಾವಾರು ಪ್ರಮಾಣವು ದೆಹಲಿ, ಹೈದರಾಬಾದ್ ಹಾಗೂ ಬೆಂಗಳೂರಿನ ಯಾವುದೇ ವಿದ್ಯಾಸಂಸ್ಥೆಯ ಶೇಕಡಾವಾರು ಪ್ರಮಾಣಕ್ಕೆ ಸರಿಸಮಾನವಾಗಿದೆ. ಉತ್ತರ ಕರ್ನಾಟಕದಲ್ಲಿ ಕೇವಲ ಐ.ಎ.ಎಸ್. ಮತ್ತು ಕೆ.ಎ.ಎಸ್. ಪರೀಕ್ಷೆಗಳಿಗೆ ತರಬೇತಿ ಕೊಡುವ ಏಕೈಕ ಸಂಸ್ಥೆ ಇದಾಗಿದೆ.

## ಪೂರ್ವಭಾವಿ ಪರೀಕ್ಷೆ ಪಾಸಾದ ಕಾಕಡೆ ಕೇಂದ್ರದ ವಿದ್ಯಾರ್ಥಿಗಳು

| | | | |
|---|---|---|---|
| ೧. | ಪ್ರವೀಣ ಬಾಗೇವಾಡಿ | (ಎಂ.ಎ. ಇತಿಹಾಸ) | ಚಿಕ್ಕೋಡಿ |
| ೨. | ಗೋವಿಂದ ರೆಡ್ಡಿ | (ಎಂ.ಎಸ್.ಸಿ. ಭೌತಶಾಸ್ತ್ರ) | ಗುಲ್ಬರ್ಗಾ |
| ೩. | ಸುಬ್ರಾಯ ಹೆಗಡೆ | (ಬಿ.ಎಸ್.ಸಿ.) | ಹೊನ್ನಾವರ |
| ೪. | ಉಮಾ ಸಾಲಿಗೌಡರ | (ಎಂ.ಎ., ರಾಜ್ಯಶಾಸ್ತ್ರ) | ಧಾರವಾಡ |
| ೫. | ರಾಜೇಂದ್ರ ತೇಲಿ | (ಬಿ.ಇ. ಮೆಕಾನಿಕಲ್) | ಧಾರವಾಡ |
| ೬. | ವಿನಾಯಕ ನಾಯಕ | (ಬಿ.ಕಾಂ.) | ಹುಬ್ಬಳ್ಳಿ |
| ೭. | ರವಿಶಂಕರ | (ಬಿ.ಇ. ಆಟೋಮೊಬೈಲ್) | ಸೊರಬ |

ದೆಹಲಿಯಲ್ಲಿ ತರಬೇತಾದ ರವಿಶಂಕರ ಕಾಕಡೆಯವರ ನಿರ್ದೇಶನದಲ್ಲಿ ಈ ಸಂಸ್ಥೆ ಸಾಮಾನ್ಯಜ್ಞಾನ (General Studies), ಕನ್ನಡ ಸಾಹಿತ್ಯ, ಇತಿಹಾಸ, ಮಾನವಶಾಸ್ತ್ರ, ಇಂಗ್ಲಿಷ್ ವ್ಯಾಕರಣ, ಸಾರ್ವಜನಿಕ ಆಡಳಿತ (Public Administration) ಇತ್ಯಾದಿ ವರ್ಗಗಳ ಜೊತೆಗೆ ಮೂಲಭೂತವಾಗಿ ನಡೆಸಲ್ಪಡುವ ಒಂದು ವರ್ಷದ ಅವಧಿಯ ತರಗತಿ (One year course) ಹಾಗೂ ಪೂರ್ವಭಾವಿ ತರಬೇತಿ ತರಗತಿ (Foundation Course) ನಡೆಸುತ್ತಿದೆ.

ನಿಶ್ಚಿತ ಪೂರ್ವಭಾವಿ ಪರೀಕ್ಷೆಗಳು, ಐ.ಎ.ಎಸ್. ಪಠ್ಯಕ್ರಮಕ್ಕೆ ಅನುಗುಣವಾಗಿ ತರಗತಿಗಳು, ಗುಂಪು ಚರ್ಚೆ (Group Discussion) ಯಶಸ್ವಿಯಾದ ವಿದ್ಯಾರ್ಥಿಗಳ ಜೊತೆಗೆ ಚರ್ಚೆ, ವಿಷಯ ಪರಿಣತರಿಂದ ತರಗತಿಗಳು, ಕಿರು ಪರೀಕ್ಷೆಗಳು, ಸಿದ್ಧತಾ ಪರೀಕ್ಷೆಗಳು, ಪ್ರಚಲಿತ ವಿಷಯಗಳ ಬಗ್ಗೆ ಚರ್ಚೆ (Current affairs) ಇನ್ನೂ ಮುಂತಾದವುಗಳು ಇಲ್ಲಿಯ ವೈಶಿಷ್ಟ್ಯಗಳು.

ದೆಹಲಿ ಹಾಗೂ ಬೆಂಗಳೂರುಗಳಿಂದ, ಸಂಬಂಧಪಟ್ಟ ವಿಷಯಗಳ ಪುಸ್ತಕಗಳನ್ನು ತರಿಸಿಕೊಡುವ ವ್ಯವಸ್ಥೆ, ವಸತಿ ಹಾಗೂ ಊಟದ ವ್ಯವಸ್ಥೆ ಕೂಡ ಈ ಸಂಸ್ಥೆಯ ವತಿಯಿಂದ ಪಡೆಯಬಹುದಾಗಿದೆ.

ಈ ಸಂಸ್ಥೆಯಲ್ಲಿ ೨೦ಕ್ಕೂ ಹೆಚ್ಚು ಬೇರೆ ಬೇರೆ ರೀತಿಯ ಸ್ಪರ್ಧಾ ನಿಯತಕಾಲಿಕೆಗಳನ್ನು ಹೊಂದಿರುವ ಉತ್ತಮ ಮ್ಯಾಗಝಿನ್ ಕ್ಲಬ್ ಇದೆ. ತರಗತಿ ಪಾಠಗಳ ಜೊತೆಗೆ ಆಡಿಯೋ ಕ್ಯಾಸೆಟ್‌ಗಳನ್ನು ಕೂಡಾ ಬಳಸಲಾಗುತ್ತಿದೆ. ಕನ್ನಡ ಮತ್ತು ಇಂಗ್ಲಿಷ್ ಮಾಧ್ಯಮಗಳನ್ನೊಳಗೊಂಡಂತೆ ಐ.ಎ.ಎಸ್. ಪ್ರಾಥಮಿಕ ಪರೀಕ್ಷೆ ಮತ್ತು ಐ.ಎ.ಎಸ್.ಮುಖ್ಯ ಪರೀಕ್ಷೆ ಜೊತಗೆ ಐ.ಎ.ಎಸ್. ಹಾಗೂ ಕೆ.ಎ.ಎಸ್. ಸಂದರ್ಶನಕ್ಕೂ ತರಬೇತಿ ನೀಡಲಾಗುತ್ತಿದೆ.

## ಧಾರವಾಡದ ಕಾಕಡೆ ತರಬೇತಿ ಕೇಂದ್ರದಲ್ಲಿ

**ಕರ್ನಾಟಕ ಲೋಕ ಸೇವಾ ಆಯೋಗದ ಪ್ರಥಮ (FDA) ಮತ್ತು ದ್ವಿತೀಯ (SDA) ದರ್ಜೆ ಸಹಾಯಕರ ಪರೀಕ್ಷಾ ತರಬೇತಿ ತರಗತಿಗಳು**

**ವೈಶಿಷ್ಟ್ಯಗಳು :**

★ ತರಗತಿಯ ಪಾಠಗಳ ಜೊತೆಗೆ ೧,೫೦೦ಕ್ಕೂ ಮೇಲ್ಪಟ್ಟು ನಿರೀಕ್ಷಿತ ''ವಸ್ತು ನಿಷ್ಠ ಬಹು ಆಯ್ಕೆ''ಯ (Objective multiple choice) ಪ್ರಶ್ನೆಗಳನ್ನು ಚರ್ಚಿಸಲಾಗುವುದು.

★ ೧೦ ಮಾದರಿ ಪರೀಕ್ಷೆಗಳನ್ನು ನಡೆಸಲಾಗುವುದು. ನಂತರ ಈ ಪ್ರಶ್ನೆ ಪತ್ರಿಕೆಗಳನ್ನು ತರಗತಿಯಲ್ಲಿ ವಿಶದವಾಗಿ ಚರ್ಚಿಸಲಾಗುವುದು.

★ ಕನ್ನಡ ಮತ್ತು ಇಂಗ್ಲಿಷ್ ಎರಡೂ ಮಾಧ್ಯಮಗಳ ವಿದ್ಯಾರ್ಥಿಗಳಿಗೆ ಪ್ರವೇಶವಿದೆ. ಎರಡೂ ಮಾಧ್ಯಮಗಳಲ್ಲಿ ''ನೋಟ್ಸ್'' ಒದಗಿಸಲಾಗುವುದು.

★ ಸಾಮಾನ್ಯ ಜ್ಞಾನ, ಕನ್ನಡ ಭಾಷೆ ಮತ್ತು ಇಂಗ್ಲಿಷ್ ಭಾಷೆಯ ತರಗತಿಗಳನ್ನು ಬೇರೆ ಬೇರೆ ನಡೆಸಲಾಗುವುದು.

★ ಈ ತರಗತಿಗಳು IAS ಮತ್ತು KAS ಪ್ರಿಲಿಮಿನರಿ ಪರೀಕ್ಷೆಗಳಿಗೆ ಕೂಡ ಉಪಯುಕ್ತ.

★ ವಸತಿ ಮತ್ತು ಊಟದ ವ್ಯವಸ್ಥೆ ಇರುತ್ತದೆ.

★ ಪ್ರತಿ ತಿಂಗಳು ಹೊಸ ತರಗತಿಗಳು ಪ್ರಾರಂಭವಾಗುತ್ತವೆ.

**ತರಗತಿಯ ಅವಧಿ ಎರಡು ತಿಂಗಳು**

ಐ.ಎ.ಎಸ್. ಪ್ರಾಥಮಿಕ ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ವಿಶೇಷ ತರಗತಿಗಳು ೧೧-೮-೧೯೯೭ ರಿಂದ ಪ್ರಾರಂಭವಾಗಿವೆ. ಮುಂದಿನ ಬಾರಿ ನಡೆಯಲಿರುವ ಕೆ.ಎ.ಎಸ್. ಹಾಗೂ ಐ.ಎ.ಎಸ್. ಪರೀಕ್ಷೆಗಳಿಗಾಗಿ ತರಬೇತಿ ವರ್ಗಗಳು ಆಗಸ್ಟ್ ೨೮ ರಿಂದ ಪ್ರಾರಂಭ ವಾಗಿದೆ.

ಐ.ಎ.ಎಸ್. ಹಾಗೂ ಕೆ.ಎ.ಎಸ್. ಪರೀಕ್ಷೆಗಳನ್ನು ಉತ್ತೀರ್ಣರಾಗುವುದು ಕಷ್ಟ ಎಂಬ ಉತ್ತರ ಕರ್ನಾಟಕದವರ ಭಾವನೆಯನ್ನು ಹೋಗಲಾಡಿಸಿ, ಈ ಪರೀಕ್ಷಾ ತರಬೇತಿ ಗಳಿಗಾಗಿ ಬೆಂಗಳೂರು, ಹೈದರಾಬಾದ್ ಅಥವಾ ದೆಹಲಿಗೆ ಹೋಗಬೇಕೆನ್ನುವ ಅನಿಸಿಕೆ ಯನ್ನು ಈ ಸಂಸ್ಥೆ ದೂರಮಾಡುವಲ್ಲಿ ಯಶಸ್ವಿಯಾಗುತ್ತಿದೆ.

**ಹೆಚ್ಚಿನ ಮಾಹಿತಿಗಾಗಿ ಈ ಕೆಳಗಿನ ವಿಳಾಸದಲ್ಲಿ ಸಂಪರ್ಕಿಸಬಹುದು.**

**ಕಾಕಡೆ ಐ.ಎ.ಎಸ್. ಮತ್ತು ಕೆ.ಎ.ಎಸ್. ಅಧ್ಯಯನ ಕೇಂದ್ರ**
''ವಿಹಾರ'', ೭ನೇ ಕ್ರಾಸ್, ಕಲ್ಯಾಣನಗರ,
ಧಾರವಾಡ - ೫೮೦ ೦೦೭.

## ಸಂಸ್ಕೃತ ಶಿಕ್ಷಣ

ಬೆಂಗಳೂರಿನಲ್ಲಿರುವ ಸಂಸ್ಕತ ಭಾರತಿ ಸಂಸ್ಥೆಯು ಅಂಚೆ ಮೂಲಕ ಸಂಸ್ಕೃತ ಶಿಕ್ಷಣ ನೀಡುವ ಯೋಜನೆಯನ್ನು ಹಮ್ಮಿ ಕೊಂಡಿದೆ. ೨ ವರ್ಷಗಳ ಅವಧಿಯ ಈ ಯೋಜನೆಯಲ್ಲಿ ಪ್ರವೇಶ, ಪರಿಚಯ, ಶಿಕ್ಷಾ ಮತ್ತು ಕೋವಿದ ಎಂಬ ೪ ಹಂತಗಳಿವೆ. ಶಿಕ್ಷಣ ಮಾಧ್ಯಮ ಕನ್ನಡ ಇಂಗ್ಲಿಷ್ ಆಗಿರುತ್ತದೆ. ಪ್ರತಿ ೬ ತಿಂಗಳಿಗೆ ಹೊಸ ತಂಡಕ್ಕೆ ಪ್ರವೇಶಾವಕಾಶ ಇರುತ್ತದೆ. ಪರೀಕ್ಷೆಗೆ ವಯೋಮಿತಿ ಕನಿಷ್ಠ ೧೬ ವರ್ಷಗಳಾಗಿದ್ದು, ಅರ್ಜಿ ಸಲ್ಲಿಸಲು ಅಕ್ಟೋಬರ್ ೧೦ ಕಡೆಯ ದಿನವಾಗಿರು ತ್ತದೆ.

ಹೆಚ್ಚಿನ ಮಾಹಿತಿಗಳಿಗೆ ಸಂಸ್ಕೃತ ಭಾರತಿ, ಅಂಚೆ ಮೂಲಕ ಸಂಸ್ಕೃತ, ಅಧ್ಯಕ್ಷರು, ೮ ನೇ ಅಡ್ಡರಸ್ತೆ, ೨ ನೇ ಹಂತ, ಗಿರಿನಗರ, ಬೆಂಗಳೂರು - ೫೬೦ ೦೮೫ (ದೂರವಾಣಿ ೬೬೧೩೦೫೨, ೬೬೧೮೭೨೬) ಈ ವಿಳಾಸವನ್ನು ಸಂಪರ್ಕಿಸಬಹುದು ಎಂದು ಸಂಸ್ಥೆಯ ಪ್ರಕಟಣೆ ತಿಳಿಸಿದೆ.

# ಬೆಂಗಳೂರಿನ ಐ.ಎ.ಎಸ್. ಸ್ಟಡಿ ಸರ್ಕಲ್

**ಬೆಂ**ಗಳೂರನ್ನೇ ಕೇಂದ್ರವಾಗಿಸಿಕೊಂಡ ಐ.ಎ.ಎಸ್ ಸ್ಟಡಿ ಸರ್ಕಲ್ ಸಂಸ್ಥೆಯು ಕೇಂದ್ರ ಹಾಗೂ ರಾಜ್ಯ ಲೋಕಸೇವಾ ಆಯೋಗಗಳು ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಮಾರ್ಗದರ್ಶನ ನೀಡುವ ಸಂಸ್ಥೆ. ಇದು ೧೯೯೩ ರಲ್ಲಿ ಆರಂಭಗೊಂಡಿದೆ. ಈ ಕ್ಷೇತ್ರದ ಬಗ್ಗೆ ವಿಶೇಷ ಅನುಭವ ಹೊಂದಿದ ನಿಪುಣರಿಂದ ಈ ಸಂಸ್ಥೆ ಮುನ್ನಡೆಯುತ್ತಿದೆ. ಇಲ್ಲಿ ಮುಖ್ಯವಾಗಿ ಐ.ಎ.ಎಸ್, ಐ.ಪಿ.ಎಸ್ ಹಾಗೂ ಕೆ.ಎ.ಎಸ್ ಪರೀಕ್ಷೆಗಳಿಗೆ ಸಂಬಂಧಿಸಿದ ಪಠ್ಯಕ್ರಮ, ಪರೀಕ್ಷಾಸಿದ್ಧತೆ, ಐಚ್ಛಿಕ ವಿಷಯಗಳ ಆಯ್ಕೆ ಮುಂತಾದ ಮುಖ್ಯ ವಿಷಯಗಳ ಬಗ್ಗೆ ಉಚಿತ ಸಲಹೆ ನೀಡಲಾಗುತ್ತದೆ. ಅದರಂತೆ ಪ್ರತಿ ಭಾನುವಾರ ಬೆಳಿಗ್ಗೆ ೧೦ ಗಂಟೆಯಿಂದ ಮಧ್ಯಾಹ್ನ ೧ ಗಂಟೆಯವರೆಗೆ ಈ ಉಚಿತ ಸಲಹಾ ಕಾರ್ಯಕ್ರಮವನ್ನು ಅಭ್ಯರ್ಥಿ ಗಳೊಂದಿಗೆ ಚರ್ಚೆ ಮಾಡುವುದರ ಮೂಲಕ ನಡೆಸಲಾಗುತ್ತದೆ.

ಐ.ಎ.ಎಸ್ ಹಾಗೂ ಕೆ.ಎ.ಎಸ್ ಪರೀಕ್ಷೆಗಳು ಮೂರು ಹಂತದಲ್ಲಿರುತ್ತವೆ: ಪೂರ್ವಭಾವಿ, ಮುಖ್ಯ ಪರೀಕ್ಷೆ ಹಾಗೂ ಮೌಖಿಕ ಸಂದರ್ಶನ. ಮೊದಲ ಹಂತದ ಪೂರ್ವಭಾವಿ ಪರೀಕ್ಷೆಯಲ್ಲಿ ಯಶಸ್ಸು ಗಳಿಸಲು ಪಠ್ಯಕ್ರಮಾನುಸಾರ ವಿಷಯದ ಆಯ್ಕೆ, ಓದುವ ಕ್ರಮ, ಕಡಿಮೆ ಅವಧಿಯಲ್ಲಿ ಅಗತ್ಯ ಮಾಹಿತಿ ಸಂಗ್ರಹದ ಬಗ್ಗೆ ಪರಿಪೂರ್ಣ ತಿಳುವಳಿಕೆ ನೀಡಲಾಗುವುದು. ಹಾಗೆಯೇ ಮುಖ್ಯ ಪರೀಕ್ಷೆಯಲ್ಲಿ ಹೆಚ್ಚು ಅಂಕ ಗಳಿಸಲು ಅನುವಾಗುವಂತಹ ಐಚ್ಛಿಕ ವಿಷಯಗಳ ಆಯ್ಕೆಯ ಬಗ್ಗೆ ಮಾಹಿತಿ ಕೊಡಲಾಗುತ್ತದೆ. ಪರೀಕ್ಷಾಯಶಸ್ಸಿಗೆ ಓದಲೇಬೇಕಾದ ಆಯ್ದ ಪುಸ್ತಕಗಳ ಪಟ್ಟಿ (ಪುಸ್ತಕದ ಹಾಗೂ ಲೇಖಕರ ಹೆಸರು), ಪುಸ್ತಕ ದೊರೆಯುವ ವಿಳಾಸಗಳನ್ನು ಸಹ ಕೊಡಲಾಗುತ್ತದೆ.

ವಿಶೇಷವಾಗಿ ಐ.ಎ.ಎಸ್, ಐ. ಪಿ. ಎಸ್ ಹಾಗೂ ಕೆ.ಎ.ಎಸ್ ಮುಂತಾದ ಪರೀಕ್ಷೆಗಳ ಪೂರ್ವ ಭಾವಿ ಪರೀಕ್ಷೆ ಹಾಗೂ ಮೌಖಿಕ ಸಂದರ್ಶನಕ್ಕೆ ಉಪಯುಕ್ತವೆನಿಸುವ ಪುಸ್ತಕಗಳನ್ನು ಪ್ರಕಟಿಸುತ್ತದೆ. ಸಾಮನ್ಯ ಜ್ಞಾನ, (ಜನರಲ್ ನಾಲೇಡ್ಜ್) ಸಾಮಾನ್ಯ ಅಧ್ಯಯನ (ಜನರಲ್ ಸ್ಟಡೀಸ್) ವಿಷಯದ ಪುಸ್ತಕಗಳನ್ನು ಸಹ ಅಭ್ಯರ್ಥಿಗಳ ಅಭ್ಯುದಯಕ್ಕೆ ಪೂರಕವಾಗಿ ಪ್ರಕಟಿಸುತ್ತಿದೆ.

ಈಗಾಗಲೇ ಈ ಸಂಸ್ಥೆಯ ಸಲಹೆ, ಮಾರ್ಗದರ್ಶನ ಪಡೆದ ಸುಮಾರು ೨೫ ಅಭ್ಯರ್ಥಿಗಳು ಐ.ಎ.ಎಸ್, ಐ.ಪಿ.ಎಸ್‌ಗೆ ಆಯ್ಕೆಯಾಗಿದ್ದು ಒಂದು ಹೆಗ್ಗಳಿಕೆ ಈ ಸಂಸ್ಥೆ ಕನ್ನಡ ಹಾಗೂ ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಪರೀಕ್ಷೆಗಳಿಗೆ ಸಂಬಂಧಿಸಿದ ಮಾಹಿತಿ, ಸೂಕ್ತ ಮಾರ್ಗದರ್ಶನ ನೀಡುತ್ತಾ ಬಂದಿದೆ. ಇದು ಕನ್ನಡಿಗರನ್ನು ಅಖಿಲ ಭಾರತ ಸೇವೆಗೆ ಕಳಿಸುವಲ್ಲಿ ತನ್ನದೇ ಆದ ರೀತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಸಂಸ್ಥೆ.

ವಿಳಾಸ:
**ಐ.ಎ.ಎಸ್ ಸ್ಟಡಿ ಸರ್ಕಲ್**
೧೩೩, ಶಾರದಾ ಕಾಲೋನಿ.
ಕೆ.ಹೆಚ್.ಬಿ.ಸಿ.ಎಸ್. ಲೇಔಟ್
೩ನೇ ಹಂತ, ೪ನೇ ವಿಭಾಗ, ಬಸವೇಶ್ವರ ನಗರ
ಬೆಂಗಳೂರು - ೭೯

## ಖಾಸಗಿಯಾಗಿ ಎಸ್ಸೆಸ್ಸೆಲ್ಸಿ ಪರೀಕ್ಷೆಗೆ ಕೂರಲು ಅವಕಾಶ

ಕರ್ನಾಟಕ ಪ್ರೌಢ ಶಿಕ್ಷಣ ಮಂಡಲಿಯು ವಯೋಮಾನದ ಮೇಲೆ ಖಾಸಗಿಯಾಗಿ ಎಸ್.ಎಸ್.ಎಲ್.ಸಿ. ಪರೀಕ್ಷೆ ಕೂರಲು ಅವಕಾಶ ಮಾಡಿಕೊಟ್ಟಿದೆ.

೧೯೯೮ರ ಮಾರ್ಚ್‌ಗೆ ಹದಿನೈದು ವರ್ಷವಾದವರು ಮಾರ್ಚ್-ಏಪ್ರಿಲ್ ೯೮ರಲ್ಲಿ ನಡೆಯುವ ಈ ಪರೀಕ್ಷೆಗೆ ಹಾಜರಾಗಲು ಅರ್ಹರಾಗಿದ್ದಾರೆ. ರಾಜ್ಯದ ಯಾವುದೇ ಮಾನ್ಯತೆ ಪಡೆದ ಪ್ರೌಢಶಾಲೆ ಮತ್ತು ಕಿರಿಯ ಕಾಲೇಜುಗಳ ಮೂಲಕ ಅರ್ಜಿಗಳನ್ನು ಸಲ್ಲಿಸಬಹುದಾಗಿದೆ.

ದಂಡ ಶುಲ್ಕವಿಲ್ಲದ ಅರ್ಜಿ ಸಲ್ಲಿಸಲು ಸೆ. ೨೫ ರಂದು ಮತ್ತು ೨೦ ರೂ.ಗಳ ದಂಡ ಶುಲ್ಕದೊಂದಿಗೆ ಅರ್ಜಿ ಸಲ್ಲಿಸಲು ಅಕ್ಟೋಬರ್ ೧೦ ರಂದು ಕೊನೆಯ ದಿನಾಂಕವನ್ನು ನಿಗದಿಪಡಿಸಲಾಗಿದೆ.

# ಪ್ರತಿಭಾನ್ವಿತ ಯುವಕ- ಯುವತಿಯರಿಗೆ ನೌಕಾದಳದಲ್ಲಿ ಅಲ್ಪಾವಧಿ ಅಧಿಕಾರಿ ಹುದ್ದೆಗಳು

**ಅಲ್ಪಾವಧಿ ಸೇವಾ ಹುದ್ದೆಗಳು**

ಷಾರ್ಟ್ ಸರ್ವಿಸ್ ಕಮೀಷನ್ ಹುದ್ದೆಗಳ ಅವಧಿ ೭ ವರ್ಷಗಳು. ಇದನ್ನು ೧೦ ವರ್ಷಗಳವರೆಗೆ ವಿಸ್ತರಿಸಬಹುದು. ಈ ಅವಧಿಯ ನಂತರ ಅಧಿಕಾರಿಗಳು ತಮ್ಮ ಗ್ರಾಜ್ಯುಟಿಯೊಂದಿಗೆ ಹೊರಬರುತ್ತಾರೆ. ಇವರನ್ನು ಖಾಯಂ ಆಗಿ ನೇಮಕಾತಿ ಮಾಡಿಕೊಳ್ಳುವ ಸಾಧ್ಯತೆಯೂ ಇರುತ್ತದೆ. ತರಬೇತಿ ಅವಧಿಯಲ್ಲಿ ಒಟ್ಟಾರೆ ಮಾಸಿಕ ೭೪೦೦ರೂ ದೊರೆಯುತ್ತದೆ.

ಮೇಲಿನ ಹುದ್ದೆಗಳಿಗೆ ಅವಿವಾಹಿತ ಯುವಕ- ಯುವತಿಯರಿಂದ ಅರ್ಜಿ ಕರೆಯಲಾಗಿದೆ.

**ವಯಸ್ಸು** : ೧.೧.೯೮ ರಂದು ೨೫ ವರ್ಷದೊಳಗಿರಬೇಕು.

**ವಿದ್ಯಾರ್ಹತೆ** : ಈ ಕೆಳಗಿನ ವಿಷಯಗಳಲ್ಲಿ ಇಂಜಿನಿಯರಿಂಗ್/ಸ್ನಾತಕೋತ್ತರ ಪದವಿ :

೧. ಕಂಪ್ಯೂಟರ್ಸ್/ಸಾಫ್ಟ್‌ವೇರ್/ಮಾಹಿತಿ ತಂತ್ರಜ್ಞಾನ ೨. ಏರೋನಾಟಿಕಲ್/ಏವಿಯೋನಿಕ್ಸ್ ೩. ಇನ್‌ಸ್ಟ್ರುಮೆಂಟೇಶನ್ ೪. ಕಂಟ್ರೋಲ್ ೫. ಕಂಪ್ಯೂಟರ್ ಸೈನ್ಸ್ ಅಪ್ಲಿಕೇಶನ್ ೬. ಆಪರೇಷನ್ಸ್ ರಿಸರ್ಚ್

ವಿದ್ಯಾರ್ಹತೆಯ ಅಂತಿಮ ಪರೀಕ್ಷೆಗೆ ಕುಳಿತುಕೊಳ್ಳುವವರು ಹಾಗೂ ಫಲಿತಾಂಶ ನಿರೀಕ್ಷಿಸುತ್ತಿರುವವರು ಕೂಡ ಅರ್ಜಿ ಸಲ್ಲಿಸಬಹುದು. ಆದರೆ ಇಂಥ ಅಭ್ಯರ್ಥಿಗಳು ೧.೧೨.೯೭ರೊಳಗೆ ಅಂತಿಮ ಪರೀಕ್ಷೆಯ ಅಂಕಪಟ್ಟಿ ಸಲ್ಲಿಸಬೇಕು.

**ದೈಹಿಕ ಅರ್ಹತೆ** :

ಪುರುಷರು : ಕನಿಷ್ಟ ೧೫೭ ಸೆಂ.ಮೀ ಎತ್ತರ. ಎತ್ತರಕ್ಕೆ ತಕ್ಕಷ್ಟು ತೂಕ.

ಮಹಿಳೆಯರು : ಕನಿಷ್ಟ ೧೪೮ ಸೆಂ.ಮೀ ಎತ್ತರಕ್ಕೆ ತಕ್ಕಷ್ಟು ತೂಕ.

**ದೃಷ್ಟಿ** :

೬/೨೪, ೬/೩೬, ಕನ್ನಡಗಳ ಮೂಲಕ ೬/೬ವರೆಗೆ ಸರಿಪಡಿಸಬಹುದಾದಷ್ಟು.

**ಅರ್ಜಿಸಲ್ಲಿಸುವುದು** :

ನಿಗದಿತ ನಮೂನೆಯಲ್ಲಿ ಭರ್ತಿಮಾಡಿದ ಅರ್ಜಿಗಳನ್ನು ಕೆಳಗಿನ ವಿಳಾಸಕ್ಕೆ ಕಳಿಸಬೇಕು. ಲಕೋಟೆಯ ಮೇಲೆ "Application for SSC Officers" ಎಂದು ಬರೆಯಲು ಮರೆಯಬೇಡಿ.

**ವಿಳಾಸ** :

C/o Post Bag No. 04
Chanakyapuri Post Office
New Delhi - 110 021

ಅಂತಿಮ ದಿನಾಂಕ : **೨೫.೯.೧೯೯೭**

## ಸಿಬ್ಬಂದಿ ಆಯ್ಕೆ ಆಯೋಗ
## ಸಹಾಯಕರ ಹುದ್ದೆಗಳಿಗೆ ಅರ್ಜಿ

'ಬಿ' ಗುಂಪಿನ ನಾನ್ ಗೆಜಟೆಡ್ ಸಹಾಯಕರ ಹುದ್ದೆಗಳನ್ನು ತುಂಬಲು ಮುಖ್ಯ ಪರೀಕ್ಷೆಗೆ ಪೂರ್ವಭಾವಿಯಾಗಿ ೧೮.೧.೯೮ರಂದು ಸಿಬ್ಬಂದಿ ಆಯ್ಕೆ ಆಯೋಗದವರು ಪ್ರಿಲಿಮಿನರಿ ಪರೀಕ್ಷೆ ನಡೆಸುತ್ತಿದ್ದಾರೆ.

**ಖಾಲಿ ಹುದ್ದೆಗಳು** : ಖಾಲಿ ಹುದ್ದೆಗಳ ಸಂಖ್ಯೆಯನ್ನು ನಂತರ ನಿರ್ಧರಿಸಲಾಗುವುದು.

**ವಯೋಮಿತಿ** : ೧.೮.೧೯೯೭ ರಂದು ೨೦ ರಿಂದ ೨೫ ವರ್ಷಗಳು (ಅಂದರೆ ಅಭ್ಯರ್ಥಿಗಳು ೨.೮.೧೯೭೨ಕ್ಕಿಂತ ಮುಂಚೆ ಮತ್ತು ೧.೮.೧೯೭೭ರ ನಂತರ ಜನಿಸಿರಬಾರದು) ಪರಿಶಿಷ್ಟ ಜಾತಿ-ಪಂಗಡ ಇತ್ಯಾದಿ ಗುಂಪಿನವರಿಗೆ ಜಾರಿಯಲ್ಲಿರುವ ರಿಯಾಯಿತಿ ಅನ್ವಯಿಸುತ್ತದೆ.

**ವಿದ್ಯಾರ್ಹತೆ** : ೧.೮.೧೯೯೭ ರೊಳಗೆ ಯಾವುದಾದರೂ ವಿಶ್ವವಿದ್ಯಾನಿಲಯದಿಂದ ಪದವಿ ಪಡೆದಿರಬೇಕು.

**ಶುಲ್ಕ** : ರೂ. ೫೦/- ಪರಿಶಿಷ್ಟ ಜಾತಿ-ಪಂಗಡ, ಮಾಜಿ ಸೈನಿಕರು ಮತ್ತು ಅಂಗವಿಕಲ ಅಭ್ಯರ್ಥಿಗಳಿಗೆ ಶುಲ್ಕವಿಲ್ಲ. ಈ ಶುಲ್ಕವನ್ನು ಪೋಸ್ಟಲ್ ಆರ್ಡರ್ ಅಥವಾ ಸೆಂಟ್ರಲ್ ರೆಕ್ರುಟ್‌ಮೆಂಟ್ ಫೀ ಸ್ಟಾಂಪ್‌ಗಳ ಮೂಲಕ ಪಾವತಿ ಮಾಡಬಹುದು.

**ಪರೀಕ್ಷಾಕೇಂದ್ರಗಳು** : ದೇಶದಾದ್ಯಂತ ೭೯ ಕೇಂದ್ರಗಳಲ್ಲಿ ಪರೀಕ್ಷೆ ನಡೆಯುತ್ತದೆ.

**ಅಂತಿಮ ದಿನಾಂಕ** : ಅರ್ಜಿಗಳು ಆಯೋಗದ ಕಚೇರಿಗೆ ೩.೧೦.೯೭ (ಸಂಜೆ ೫ ಗಂಟೆ) ರೊಳಗೆ ತಲುಪಬೇಕು.

ಹೆಚ್ಚಿನ ವಿವರಗಳಿಗಾಗಿ ೬.೯.೯೭ರ ಎಂಪ್ಲಾಯ್‌ಮೆಂಟ್ ನ್ಯೂಸ್ ಪತ್ರಿಕೆ ನೋಡಿರಿ.




" ನೀನೇನು ಪತ್ತೆ ಮಾಡಿ ಕೊಡೋದು ಬೇಡ! ನಾನು ಕೂಡಿಟ್ಟಿರೋ 'ಸಿ.ಬಿ.ಐ' ನವರಿಗೆ ಪತ್ತೆ ಆಗದ ಹಾಗೆ ಮುಚ್ಚಿಡುವ ಉಪಾಯ ಇದ್ರೆ ಹೇಳಯ್ಯಾ ?! ... "

## ಸಲಹಾ ಕೇಂದ್ರ

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಸ್ವಯಂ ಉದ್ಯೋಗಿಗಳಾಗಲು ಇಚ್ಛಿಸುವ ಮಹಿಳಾ ಉದ್ಯಮಿಗಳಿಗಾಗಿ ಬೆಂಗಳೂರಿನ 'ಸಂಪರ್ಕ' ಸಂಸ್ಥೆಯಲ್ಲಿ ಉಚಿತ 'ಸಲಹಾ ಕೇಂದ್ರ' ಸ್ಥಾಪಿಸಿದೆ. ಸ್ವಯಂ ಉದ್ಯಮಿಗಳಾಗಲು ಇಚ್ಛಿಸುವ ಮಹಿಳೆಯರಿಗೆ ಯೋಜನಾ ವರದಿ ತಯಾರಿಕೆ ಕುರಿತು ತಿಳುವಳಿಕೆ, ವಿವಿಧ ಸರ್ಕಾರಿ ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳಿಂದ ದೊರೆಯುವ ಸಾಲ ಸೌಲಭ್ಯದ ಮಾಹಿತಿ, ಮಾರುಕಟ್ಟೆ ವಿವರಗಳು ಹಾಗೂ ಇತರ ವಿಷಯಗಳಲ್ಲಿ ಉಪಯುಕ್ತವಾಗುವ ಸಲಹೆ ಸೂಚನೆಗಳನ್ನು ಈ ಸಲಹಾ ಕೇಂದ್ರ ನೀಡಲಿದೆ.

ಹೆಚ್ಚಿನ ವಿವರಗಳಿಗೆ :

'ಸಂಪರ್ಕ', ನಂ ೧೧/೧, ಎ-೩, ಕತಾಳಿಪಾಳ್ಯ, ೭ನೇ ಅಡ್ಡರಸ್ತೆ, ೧೭ನೇ ಮುಖ್ಯರಸ್ತೆ, ೬ನೇ ಬ್ಲಾಕ್, ಕೋರಮಂಗಲ, ಬೆಂಗಳೂರು ಇಲ್ಲಿ ಸಂಪರ್ಕಿಸಲು ಪ್ರಕಟಣೆ ಕೋರಿದೆ.

## ಅರ್ಜಿ ಆಹ್ವಾನ

ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಲಿ ನೀಡಲಿರುವ ವಿದ್ಯಾರ್ಥಿ ವೇತನಕ್ಕಾಗಿ ಅಸಂಘಟಿತ ವಲಯದ ಕಾರ್ಮಿಕರ ಮಕ್ಕಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ಅರ್ಜಿ ಸಲ್ಲಿಸುವವರು ಹಿಂದಿನ ವರ್ಷದ ಪರೀಕ್ಷೆಯಲ್ಲಿ ಶೇ.೫೫ (ಪರಿಶಿಷ್ಟ ಜಾತಿ/ಪಂಗಡದವರಿಗೆ ಶೇ.೫೦) ಅಂಕಗಳನ್ನು ಪಡೆದಿರಬೇಕು.

ಬೇರೆ ಯಾವುದೇ ವಿದ್ಯಾರ್ಥಿ ವೇತನ ಪಡೆದಿರಬಾರದು. ಪೋಷಕರ ಮಾಸಿಕ ವರಮಾನ ೧೬೦೦ ರೂಪಾಯಿಗಳಿಗೆ ಮೀರಿರಬಾರದು.

ಉಚಿತ ಅರ್ಜಿ ನಮೂನೆ ಮತ್ತು ಹೆಚ್ಚಿನ ವಿವರಗಳಿಗಾಗಿ ಬೆಂಗಳೂರಿನ ಅಭ್ಯರ್ಥಿಗಳು ಆಯುಕ್ತರು, ಕಾರ್ಮಿಕ ಕಲ್ಯಾಣ ಮಂಡಲಿ, ಮೈಷುಗರ್ ಕಟ್ಟಡ, ೨ನೇ ಮಹಡಿ, ಜೆ.ಸಿ. ರಸ್ತೆ, ಬೆಂಗಳೂರು- ೫೬೦ ೦೦೨ ಇವರನ್ನು ಹಾಗೂ ಹೊರ ಊರುಗಳ ಅಭ್ಯರ್ಥಿಗಳು ಆಯಾ ಜಿಲ್ಲೆಯ ಕಾರ್ಮಿಕ ಇಲಾಖೆ ಅಧಿಕಾರಿಗಳ ಕಚೇರಿಯನ್ನು ಸಂಪರ್ಕಿಸಬಹುದು. ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಸೆಪ್ಟೆಂಬರ್ ೩೦ ಕೊನೆಯ ದಿನವಾಗಿದೆ.

## ತರಗತಿ

ಕಟ್ಟಡ ನಿರ್ಮಾಣ, ಸಂಶೋಧನೆ ಮತ್ತು ಆಡಳಿತ ಸಂಸ್ಥೆಯು ಆಲ್ ಇಂಡಿಯಾ ಕೌನ್ಸಿಲ್ ಫಾರ್ ಟೆಕ್ನಿಕಲ್ ಎಜುಕೇಷನ್ ಸಂಸ್ಥೆಯ ಸಹಯೋಗದೊಂದಿಗೆ ಸೆಪ್ಟೆಂಬರ್ ೨೯ ರಿಂದ ೩ ವಾರಗಳ ಕಾಲ ಕಟ್ಟಡ ಮೇಲ್ವಿಚಾರಣೆಯ ಕುರಿತು ವಿಶೇಷ ತರಗತಿಗಳನ್ನು ಏರ್ಪಡಿಸಲಿದೆ.

ಹೆಚ್ಚಿನ ವಿವರಗಳಿಗಾಗಿ ಇನ್‌ಸ್ಟ್ರಕ್ಟ್, ಸಂಖ್ಯೆ ೨೬/೧೦೬, ೧೧ ಬಿ ಅಡ್ಡರಸ್ತೆ, ೧೦ ಮತ್ತು ೧೧ ನೇ ಮುಖ್ಯರಸ್ತೆಯ ನಡುವೆ, ಮಲ್ಲೇಶ್ವರ, ಬೆಂಗಳೂರು-೫೬೦ ೦೦೩ (ದೂರವಾಣಿ ೩೩೪೭೭೪೯) ಈ ವಿಳಾಸವನ್ನು ಸಂಪರ್ಕಿಸ ಬಹುದು.

## ಧನ ಸಹಾಯ

ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನ ಮತ್ತು ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿಗಳ ವತಿಯಿಂದ, ರಾಜ್ಯದ ಶಿಕ್ಷಕರುಗಳು ೧೯೯೭-೯೮ನೇ ಸಾಲಿನ ಧನ ಸಹಾಯಕ್ಕಾಗಿ ಸಲ್ಲಿಸುವ ಅರ್ಜಿಗಳನ್ನು ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪ ನಿರ್ದೇಶಕರ ಕಚೇರಿಗಳಿಗೆ ಕಳಿಸಲಾಗುತ್ತಿದೆ.

ಅಗತ್ಯವಾದ ಈ ಅರ್ಜಿಗಳನ್ನು ಮೇಲೆ ಸೂಚಿಸಿದ ಕಚೇರಿಗಳಿಂದ ಸೆಪ್ಟೆಂಬರ್ ಒಂದರಿಂದ ಪಡೆಯುವುದು. ಭರ್ತಿ ಮಾಡಿದ ಅರ್ಜಿಗಳನ್ನು ಸೆ.೩೦ರ ಒಳಗೆ ಮೇಲಿನ ಕಚೇರಿಗಳಿಗೆ ಕಳುಹಿಸಲು ಪ್ರಕಟಣೆ ತಿಳಿಸಿದೆ.

## ಪ್ರತಿಭಾನ್ವೇಷಣೆ ಪರೀಕ್ಷೆ

ಪ್ರಸಕ್ತ ಸಾಲಿನ ರಾಷ್ಟ್ರೀಯ ಪ್ರತಿಭಾನ್ವೇಷಣೆ ಪರೀಕ್ಷೆಗೆ ಅರ್ಹ ವಿದ್ಯಾರ್ಥಿಗಳಿಂದ ಅರ್ಜಿ ಅಹ್ವಾನಿಸಲಾಗಿದೆ. ಅಭ್ಯರ್ಥಿಗಳು ೧೦ನೇ ತರಗತಿಯಲ್ಲಿ ಓದುತ್ತಿರಬೇಕು. ೯ನೇ ತರಗತಿಯಲ್ಲಿ ಶೇ ೫೫ರಷ್ಟು ಅಂಕಗಳಿಸಿರಬೇಕು. ಪರಿಶಿಷ್ಟ ಜಾತಿ/ವರ್ಗದ ವಿದ್ಯಾರ್ಥಿಗಳು ಶೇ ೪೫ರಷ್ಟು ಅಂಕ ಗಳಿಸಿದ್ದರೆ ಸಾಕು. ಪರೀಕ್ಷೆ ಡಿಸೆಂಬರ್ ೧೪ರಂದು ನಡೆಯಲಿದ್ದು. ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸುವ ಕೊನೆಯ ದಿನಾಂಕ ಸೆಪ್ಟೆಂಬರ್ ೩೦. ಆಸಕ್ತರು ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ ಬಿ.ಪಿ.ವಾಡಿಯ ರಸ್ತೆ, ಬೆಂಗಳೂರು-೧ ಇವರನ್ನು ಸಂಪರ್ಕಿಸಬಹುದು.

## ನೀನಾಸಮ್ ಸಂಸ್ಕೃತಿ ಶಿಬಿರ: ಅಕ್ಟೋಬರ್ ೧೯೯೭

ಕಳೆದ ಹದಿನೇಳು ವರ್ಷಗಳಿಂದ ಚಲನಚಿತ್ರ-ಸಂಸ್ಕೃತಿ ಶಿಬಿರಗಳನ್ನು, ಪ್ರತಿ ಅಕ್ಟೋಬರ್‌ನಲ್ಲಿ ನಡೆಸುತ್ತ ಬಂದಿರುವ ನೀನಾಸಮ್ ಈ ವರ್ಷವೂ 'ಸಂಸ್ಕೃತ ಶಿಬಿರ-೯೭'ನ್ನು ಸಂಘಟಿಸುತ್ತಿದೆ.

ಡಾ. ಯು.ಆರ್. ಅನಂತಮೂರ್ತಿ ಅವರ ನಿರ್ದೇಶನದಲ್ಲಿ ನಡೆಯುವ ಈ ಶಿಬಿರದಲ್ಲಿ ರಂಗಭೂಮಿ, ಸಾಹಿತ್ಯ, ಸಂಗೀತ ನೃತ್ಯ, ಚಲನಚಿತ್ರ ಮುಂತಾದ ಸಾಂಸ್ಕೃತಿಕ ಹಾಗೂ ಒಟ್ಟೂ ಸಮಾಜದೊಂದಿಗೆ ಸಂಸ್ಕೃತಿಯ ಸಂಬಂಧ ಈ ವಿಷಯಗಳ ಬಗ್ಗೆ ಕನ್ನಡದ ಹಾಗೂ ಹೊರನಾಡುಗಳ ಅನೇಕ ಸಾಂಸ್ಕೃತಿಕ ಗಣ್ಯರು ವಿಶೇಷ ಉಪನ್ಯಾಸ, ಚರ್ಚೆ, ವಿಚಾರ ಉತ್ಸವದ ಅಂಗವಾಗಿ ನಾಟಕ, ಸಂಗೀತ, ನೃತ್ಯ, ಸಾಹಿತ್ಯ ಹಾಗೂ ಚಲನಚಿತ್ರ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿದೆ. ಶಿಬಿರದ ಅವಧಿ ೧೯೯೭ರ ಅಕ್ಟೋಬರ್ ೧೧ ರಿಂದ ೧೮. ಶಿಬಿರದ ಎಂಟೂ ದಿನಗಳ ಊಟ-ವಸತಿ ಸೇರಿ ಶಿಬಿರದಲ್ಲಿ ವಿಶೇಷ ಆದ್ಯತೆ ಇರುತ್ತದೆ. ಭಾಗವಹಿಸಲಿಚ್ಛಿಸುವವರು ಅಭ್ಯರ್ಥಿ ಪತ್ರವನ್ನು ತರಿಸಿಕೊಂಡು ತುಂಬಿ ಸೆಪ್ಟೆಂಬರ್ ೩೦ರ ಒಳಗೆ ತಲುಪುವಂತೆ ಕಳಿಸಿಕೊಡಬೇಕು .

ವಿಳಾಸ:

ಸಂಸ್ಕೃತಿ ಶಿಬಿರ, ನೀನಾಸಮ್ ಚಿತ್ರಸಮಾಜ ಹೆಗ್ಗೋಡು, ಸಾಗರ, ಕರ್ನಾಟಕ-೫೭೭ ೪೧೭. ದೂರವಾಣಿ: (೦೮೧೮೩) ೬೫೭೩೬

## ಆರ್ಥಿಕ ನೆರವು

ಪಾಲಿಟೆಕ್ನಿಕ್ ಇಂಡಸ್ಟ್ರಿಯಲ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್ ಮತ್ತು ಗೌರ್‍ನಮೆಂಟ್ ಟೂಲ್‌ರೂಂ ತಾಂತ್ರಿಕ ಸಂಸ್ಥೆಗಳಲ್ಲಿ ೧೯೯೭-೯೮ರ ಸಾಲಿನಲ್ಲಿ ಪ್ರವೇಶ ಪಡೆದ ಬಡ ವೀರಶೈವ ವಿದ್ಯಾರ್ಥಿಗಳಿಗೆ ವೀರಶೈವ ಕ್ಷೇಮಾಭ್ಯುದಯ ಪ್ರತಿಷ್ಠಾನವು ಆರ್ಥಿಕ ನೆರವು ನೀಡಲಿದೆ.

ಆಸಕ್ತ ವಿದ್ಯಾರ್ಥಿಗಳು ವೀರಶೈವ ಕ್ಷೇಮಾಭ್ಯುದಯ ಪ್ರತಿಷ್ಠಾನ, ಶ್ರೀ ಜಯದೇವ ವಿದ್ಯಾರ್ಥಿನಿಲಯ ಕಟ್ಟಡ, ಸಂಖ್ಯೆ ೧೮, ಶೇಷಾದ್ರಿ ರಸ್ತೆ, ಬೆಂಗಳೂರು-೫೬೦ ೦೦೯ - ಈ ವಿಳಾಸದಲ್ಲಿ ಸೆಪ್ಟೆಂಬರ್ ೩೦ ರೊಳಗೆ ಅರ್ಜಿ ಸಲ್ಲಿಸಬಹುದು.

# ಸ್ಪರ್ಧಾತ್ಮಕ ಪರೀಕ್ಷೆಗಳಿಗೆ

## ಬಹು ಆಯ್ಕೆ ರೂಪದ ಪ್ರಶ್ನೆಗಳು (Multiple Choice Questions)

೧. ಭಾರತ ಸಂವಿಧಾನ ಸಮಿತಿಯನ್ನು ಯಾವಾಗ ರಚಿಸಲಾಯಿತು?
ಅ) ೧೯೪೭ ಬ) ೧೯೪೮ ಕ) ೧೯೪೬ ಡ) ೧೯೪೫

೨. ಭಾರತ ಸಂವಿಧಾನದ ಪ್ರಥಮ ಸಭೆಗೆ ಅಧ್ಯಕ್ಷತೆ ವಹಿಸಿದವರು ಯಾರು?
ಅ) ಡಾ. ರಾಜೇಂದ್ರ ಪ್ರಸಾದ್ ಬ) ರಾಜಗೋಪಾಲಾಚಾರಿ
ಕ) ಗಾಂಧೀಜಿ ಡ) ಡಾ. ಸಚ್ಚಿದಾನಂದ ಸಿನ್ಹಾ

೩. ಸಂವಿಧಾನ ಕರಡು ರಚನಾ ಸಮಿತಿ ಯಾವಾಗ ರಚಿಸಲಾಯಿತು?
ಅ) ೧೮೪೭ ಬ) ೧೯೪೬ ಕ) ೧೯೪೯ ಡ) ೧೯೫೦

೪. ಸಂವಿಧಾನ ರಚನೆಗೆ ತೆಗೆದುಕೊಂಡ ವರ್ಷಗಳೆಷ್ಟು?
ಅ) ೨ ವರ್ಷ ಬ) ೩ ವರ್ಷ ಕ) ೧ ವರ್ಷ ಡ) ೪ ವರ್ಷ

೫. ಸಂವಿಧಾನ ಅಧಿಕೃತವಾಗಿ ಜಾರಿಗೆ ಬಂದದ್ದು ಯಾವಾಗ?
ಅ) ಆಗಸ್ಟ್ ೧೫, ೧೯೪೭ ಬ) ಜನವರಿ ೧, ೧೯೪೭
ಕ) ಜನವರಿ ೨೬, ೧೯೪೮ ಡ) ಜನವರಿ ೨೬, ೧೯೫೦

೬. ಭಾರತದೇಶದ ನಾಮ ಮಾತ್ರ ಕಾರ್ಯನಿರ್ವಹಣಾ ಅಧಿಕಾರಿ ಯಾರು?
ಅ) ಪ್ರಧಾನಮಂತ್ರಿ ಬ) ರಾಷ್ಟ್ರಪತಿ ಕ) ಲೋಕಸಭಾ ಅಧ್ಯಕ್ಷರು
ಡ) ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರು.

೭. ಕಾಶ್ಮೀರಕ್ಕೆ ಸ್ವಾಯತ್ತತೆ ಸಂಬಂಧಿಸಿದ ಸಂವಿಧಾನದ ಅನುಚ್ಛೇದದ ಸಂಖ್ಯೆ ಎಷ್ಟು?
ಅ) ೩೬೦ ಬ) ೩೭೦ ಕ) ೩೭೬ ಡ) ೩೮೦

೮. ಭಾರತ ಸಂವಿಧಾನದ ಅನುಚ್ಛೇದಗಳು ಎಷ್ಟು?
ಅ) ೩೯೫ ಬ) ೩೭೬ ಕ) ೩೮೫ ಡ) ೩೫೫

೯. ಎಷ್ಟನೆಯ ಸಂವಿಧಾನ ತಿದ್ದುಪಡಿಯಲ್ಲಿ ಮತದಾನದ ವಯಸ್ಸನ್ನು ೨೧ರಿಂದ ೧೮ಕ್ಕೆ ಇಳಿಸಲಾಯಿತು?
ಅ) ೪೮ನೇ ತಿದ್ದುಪಡಿ ಬ) ೫೦ನೇ ತಿದ್ದುಪಡಿ
ಕ) ೬೨ನೇ ತಿದ್ದುಪಡಿ ಡ) ೬೩ನೇ ತಿದ್ದುಪಡಿ

೧೦. ಸಂವಿಧಾನ ಸಮಿತಿಯ ಚಿಹ್ನೆ ಯಾವುದು?
ಅ) ಹುಲಿ ಬ) ನವಿಲು ಕ) ಆನೆ ಡ) ಸಿಂಹ

೧೧. ಸಂವಿಧಾನದಲ್ಲಿನ ಅಧ್ಯಾಯಗಳ ಸಂಖ್ಯೆ ಎಷ್ಟು?
ಅ) ೨೦ ಬ) ೨೨ ಕ) ೨೭ ಡ) ೨೫

೧೨. ದೇಶದಲ್ಲಿ ಕಡಿಮೆ ವಿಧಾನಸಭಾ ಸದಸ್ಯರು ಇರುವ ರಾಜ್ಯ ಯಾವುದು?
ಅ) ಗೋವಾ ಬ) ಪುದುಚೇರಿ ಕ) ಸಿಕ್ಕಿಂ ಡ) ಮಣಿಪುರ

೧೩. ದೇಶದಲ್ಲಿ ಹೆಚ್ಚು ವಿಧಾನಸಭಾ ಸದಸ್ಯರನ್ನು ಹೊಂದಿದ ರಾಜ್ಯ ಯಾವುದು?
ಅ) ಮಧ್ಯ ಪ್ರದೇಶ ಬ) ಮಹಾರಾಷ್ಟ್ರ
ಕ) ಉತ್ತರಪ್ರದೇಶ ಡ) ಬಿಹಾರ

೧೪. ಭಾರತ ಸಂವಿಧಾನವು ಎಷ್ಟು ಭಾಷೆಗಳಿಗೆ ಮಾನ್ಯತೆ ನೀಡಿದೆ?
ಅ) ೧೮ ಬ) ೧೫ ಕ) ೧೯ ಡ) ೨೦

೧೫. ಭಾರತ ದೇಶವನ್ನು ಆಡಳಿತಾತ್ಮಕವಾಗಿ ಎಷ್ಟು ವಲಯಗಳನ್ನಾಗಿ ವಿಭಜಿಸಲಾಗಿದೆ?
ಅ) ೬ ಬ) ೪ ಕ) ೮ ಡ) ೫

೧೬. ಸಂವಿಧಾನದಲ್ಲಿ ಮೂಲಭೂತ ಹಕ್ಕುಗಳನ್ನು ಎಷ್ಟನೇ ಅಧ್ಯಾಯದಲ್ಲಿ ವಿವರಿಸಲಾಗಿದೆ?
ಅ) ೩ನೇ ಅಧ್ಯಾಯ ಬ) ೪ನೇ ಅಧ್ಯಾಯ
ಕ) ೧೬ನೇ ಅಧ್ಯಾಯ ಡ) ೮ನೇ ಅಧ್ಯಾಯ

೧೭. ಸಂವಿಧಾನದಲ್ಲಿ ಅಸ್ಪೃಶ್ಯತಾ ನಿವಾರಣೆ ಎಷ್ಟನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ?
ಅ) ೧೮ ಬ) ೧೬ ಕ) ೨೦ ಡ) ೧೭

೧೮. ಆಸ್ತಿ ಹಕ್ಕನ್ನು ಎಷ್ಟನೆಯ ತಿದ್ದುಪಡಿಯ ಮೂಲಕ ಮೂಲಭೂತ ಹಕ್ಕಿನಿಂದ ತೊಲಗಿಸಿದ್ದಾರೆ?
ಅ) ೪೮ ಬ) ೪೪ ಕ) ೭೦ ಡ) ೬೮

೧೯. ಇಲ್ಲಿಯವರೆಗೆ ದೇಶದಲ್ಲಿ ಎಷ್ಟು ಬಾರಿ ತುರ್ತುಪರಿಸ್ಥಿತಿಯನ್ನು ಘೋಷಿಸಲಾಗಿದೆ?
ಅ) ೨ ಬಾರಿ ಬ) ೩ ಬಾರಿ ಕ) ೧ ಬಾರಿ ಡ) ೪ ಬಾರಿ

೨೦. ಜಮ್ಮು ಮತ್ತು ಕಾಶ್ಮೀರ ಸಂವಿಧಾನ ಯಾವಾಗ ಜಾರಿಗೆ ಬಂದಿತು?
ಅ) ಜನವರಿ ೨೬, ೧೯೫೭ ಬ) ಜನವರಿ ೨೬, ೧೯೪೭
ಕ) ಜನವರಿ ೨೬, ೧೯೫೦ ಡ) ಜನವರಿ ೩೦, ೧೯೨೬

೨೧. ಸಂವಿಧಾನ ಸಮಿತಿ ರಾಷ್ಟ್ರಗೀತೆಯನ್ನು ಅನುಮೋದಿಸಿದ್ದು ಯಾವಾಗ?
ಅ) ಜನವರಿ ೨೪, ೧೯೫೦ ಬ) ಜನವರಿ ೨೬, ೧೯೫೦
ಕ) ಜನವರಿ ೨೬, ೧೯೪೮ ಡ) ಜನವರಿ ೩೦, ೧೯೫೦

೨೨. ಸಂವಿಧಾನ ಕರಡು ರಚನೆಗೆ ಸಲಹೆಗಾರರಾಗಿ ನೇಮಕಗೊಂಡವರು ಯಾರು?
ಅ) ರಾಜಗೋಪಾಲಾಚಾರಿ ಬ) ಜವಾಹರಲಾಲ್‌ನೆಹರು
ಕ) ನಿಜಲಿಂಗಪ್ಪ ಡ) ಬಿ.ಎನ್.ರಾವ್

೨೩. ರಾಜ್ಯಗಳಿಗೆ ರಾಷ್ಟ್ರಪತಿ ಆಳ್ವಿಕೆ ಹೇರಲು ಸೂಚಿಸುವ ಸಂವಿಧಾನ ಕಲಮು ಯಾವುದು?
ಅ) ೩೭೬ ಬ) ೩೪೪ ಕ) ೩೫೦ ಡ) ೩೫೬

೨೪. ಸಂವಿಧಾನ ಸಮಿತಿಯ ಮೊದಲ ಸಭೆ ಯಾವಾಗ ನಡೆಯಿತು?
ಅ) ೯-೧೨-೧೯೪೬ ಬ) ೧೦-೧೨-೧೯೪೬
ಕ) ೯-೧೦-೧೯೪೭ ಡ) ೧೫-೮-೧೯೪೬

೨೫. ಸಂವಿಧಾನ ಸಮಿತಿಯ ಉಪಾಧ್ಯಕ್ಷರಾಗಿ ಆಯ್ಕೆಗೊಂಡವರು ಯಾರು?
ಅ) ರಾಜಗೋಪಾಲಾಚಾರಿ ಬ) ಎಸ್. ನಿಜಲಿಂಗಪ್ಪ
ಕ) ಬಿ.ಎನ್.ರಾವ್ ಡ) ಎಚ್.ಸಿ. ಮುಖರ್ಜಿ

೨೬. ಸಂವಿಧಾನ ರಚನೆಗೆ, ಸಂವಿಧಾನ ಸಮಿತಿ ಎಷ್ಟು ಉಪಸಮಿತಿಗಳನ್ನು ನೇಮಿಸಿತ್ತು?
ಅ) ೨೨ ಬ) ೨೦ ಕ) ೧೦ ಡ) ೬

೨೭. ಮತದಾನ ವಯಸ್ಸನ್ನು ೨೧ರಿಂದ ೧೮ಕ್ಕೆ ಇಳಿಸಿದ ವರ್ಷ ಯಾವುದು?
ಅ) ೧೯೮೦ ಬ) ೧೯೮೪ ಕ) ೧೯೮೫ ಡ) ೧೯೯೦

೨೮. ರಾಜಧನ ಪದ್ಧತಿಯನ್ನು ರದ್ದುಪಡಿಸಿದ್ದು ಯಾವಾಗ?
ಅ) ೧೯೬೦ ಬ) ೧೯೭೧ ಕ) ೧೯೭೨ ಡ) ೧೯೭೫

೨೯. ದೇಶದಲ್ಲಿ ಮೊದಲಬಾರಿ ರಾಷ್ಟ್ರಪತಿ ಆಳ್ವಿಕೆ ಯಾವ ರಾಜ್ಯದಲ್ಲಿ ಜಾರಿಗೊಳಿಸಲಾಯಿತು?
ಅ) ಕೇರಳ ಬ) ತಮಿಳುನಾಡು ಕ) ಒರಿಸ್ಸಾ ಡ) ಪಂಜಾಬ್

೩೦. ಮೊದಲ ಲೋಕಸಭಾ ಅಧ್ಯಕ್ಷರು ಯಾರು?
ಅ) ಡಾ. ರಾಧಾಕೃಷ್ಣನ್ ಬ) ಕೆ.ಟಿ.ಷಾ
ಕ) ಮಾವಲಂಕರ್ ಡ) ಕೆ.ಎಸ್.ಹೆಗಡೆ

೩೧. ಯಾವ ವರ್ಷದಲ್ಲಿ ಮೂಲಭೂತ ಕರ್ತವ್ಯಗಳನ್ನು ಸಂವಿಧಾನದಲ್ಲಿ ಅಳವಡಿಸಲಾಯಿತು?
ಅ) ೧೯೭೬ ಬ) ೧೯೭೮ ಕ) ೧೯೮೦ ಡ) ೧೯೬೫

೩೨. ರಾಷ್ಟ್ರಪತಿ, ಉಪರಾಷ್ಟ್ರಪತಿ ಚುನಾವಣಾ ಕಾನೂನನ್ನು ಯಾವಾಗ ರೂಪಿಸಲಾಯಿತು?
ಅ) ೧೯೫೦ ಬ) ೧೯೫೨ ಕ) ೧೯೪೮ ಡ) ೧೯೫೧

೩೩. ಮಹಾತ್ಮಾಗಾಂಧೀಜಿ 'ರಾಷ್ಟ್ರಪಿತ' ಎಂದು ಕರೆದವರು ಯಾರು?
ಅ) ಕೃಪಲಾನಿ ಬ) ರಾಜಾಜಿ
ಕ) ನೆಹರು ಡ) ಸುಭಾಸ್‌ಚಂದ್ರಬೋಸ್

೩೪. ಹೆಚ್ಚು ಲೋಕಸಭಾ ಸ್ಥಾನಗಳನ್ನು ಹೊಂದಿದ ರಾಜ್ಯ ಯಾವುದು?
ಅ) ಉತ್ತರಪ್ರದೇಶ ಬ) ಬಿಹಾರ
ಕ) ಮ. ಪ್ರದೇಶ್ ಡ) ಮಹಾರಾಷ್ಟ್ರ

೩೫. ಅಲ್ಪ ಸಂಖ್ಯಾತರ ಆಯೋಗದ ಮೊದಲ ಅಧ್ಯಕ್ಷರು ಯಾರು?
ಅ) ಕಾಕಾ ಕಾಲೇಕರ್ ಬ) ಎಂ. ಆರ್. ಮಸಾನಿ
ಕ) ಕರಣಸಿಂಗ್ ಡ) ಬಿ.ಪಿ ಮಂಡಲ್

೩೬. ಯೋಜನಾ ಆಯೋಗವನ್ನು ಯಾವಾಗ ರಚಿಸಲಾಯಿತು?
ಅ) ೧೯೪೮ ಬ) ೧೯೫೦ ಕ) ೧೯೫೫ ಡ) ೧೯೬೦

೩೭. ರಾಜ್ಯಸಭಾ ಸದಸ್ಯರ ಅಧಿಕಾರಾವಧಿ?
ಅ) ೫ ವರ್ಷ ಬ) ೬ ವರ್ಷ ಕ) ೩ ವರ್ಷ ಡ) ೪ ವರ್ಷ

೩೮. ಬಿ.ಡಿ. ಮಂಡಲ್ ಆಯೋಗ ಯಾವಾಗ ರಚಿಸಲಾಯಿತು?
ಅ) ಮಾರ್ಚ್ ೨೧, ೧೯೭೯ ಬ) ಮಾರ್ಚ್ ೧, ೧೯೮೦
ಕ) ಏಪ್ರಿಲ್ ೧, ೧೯೯೦ ಡ) ನವೆಂಬರ್ ೧, ೧೯೯೨

೩೯. ಸರ್ವೋಚ್ಚ ನ್ಯಾಯಾಲಯ ವಿಧಿಸಿದ ಮರಣದಂಡನೆ ಶಿಕ್ಷೆಯನ್ನು ರದ್ದು ಮಾಡುವ ಅಧಿಕಾರ ಯಾರಿಗಿದೆ?
ಅ) ಪ್ರಧಾನಮಂತ್ರಿ ಬ) ಪಾರ್ಲಿಮೆಂಟ್
ಕ) ರಾಷ್ಟ್ರಪತಿ ಡ) ಉಪರಾಷ್ಟ್ರಪತಿ

೪೦. ಯೋಜನಾ ಆಯೋಗದ ಅಧ್ಯಕ್ಷರು ಯಾರು?
ಅ) ಲೋಕಸಭಾ ಅಧ್ಯಕ್ಷರು ಬ) ಪ್ರಧಾನಮಂತ್ರಿ
ಕ) ಹಣಕಾಸು ಮಂತ್ರಿ ಡ) ಉಪರಾಷ್ಟ್ರಪತಿ

೪೧. ದೇಶದಲ್ಲಿ ಮೊದಲಬಾರಿ ತುರ್ತುಪರಿಸ್ಥಿತಿ ಘೋಷಿಸಿದ್ದು ಯಾವಾಗ?
ಅ) ೧೯೬೬ ಬ) ೧೯೬೨ ಕ) ೧೯೭೭ ಡ) ೧೯೭೧

೪೨. ಮಹಾತ್ಮಾಗಾಂಧಿ ಯಾವ ದೇಶದಲ್ಲಿ ನ್ಯಾಯವಾದಿಯಾಗಿ ಕೆಲಸ ಮಾಡಿದ್ದಾರೆ?
ಅ) ಇಂಗ್ಲಂಡ್ ಬ) ದಕ್ಷಿಣ ಆಫ್ರಿಕಾ
ಕ) ಚೀನಾ ಡ) ಅಮೆರಿಕಾ

೪೩. ದೇಶದಲ್ಲಿ ವಿಶೇಷ ಸ್ಥಾನ ಹೊಂದಿದ ರಾಜ್ಯಯಾವುದು?
ಅ) ತಮಿಳುನಾಡು ಬ) ಕೇರಳ
ಕ) ಪಂಜಾಬ್ ಡ) ಜಮ್ಮು ಮತ್ತು ಕಾಶ್ಮೀರ

೪೪. ಅವಿರೋಧವಾಗಿ ಆಯ್ಕೆಯಾದ ಏಕೈಕ ರಾಷ್ಟ್ರಪತಿ ಯಾರು?
ಅ) ಡಾ. ರಾಜೇಂದ್ರಪ್ರಸಾದ್ ಬ) ನೀಲಂ ಸಂಜೀವ ರೆಡ್ಡಿ
ಕ) ವಿ.ವಿ. ಗಿರಿ ಡ) ಡಾ. ಜಾಕೀರ್ ಹುಸೇನ್

೪೫. ಪಂಜಾಬ್ ಪ್ರತ್ಯೇಕ ರಾಜ್ಯವಾದದ್ದು ಯಾವಾಗ?
ಅ) ೧೯೬೮ ಬ) ೧೯೫೮ ಕ) ೧೯೬೨ ಡ) ೧೯೬೬

**ಉತ್ತರಗಳು :**

| | | | | | |
|---|---|---|---|---|---|
| ೧. ಕ | ೨. ಡ | ೩. ಅ | ೪. ಬ | ೫. ಡ | ೬. ಬ |
| ೭. ಬ | ೮. ಅ | ೯. ಕ | ೧೦. ಕ | ೧೧. ಬ | ೧೨. ಕ |
| ೧೩. ಕ | ೧೪. ಅ | ೧೫. ಡ | ೧೬. ಅ | ೧೭. ಡ | ೧೮. ಬ |
| ೧೯. ಬ | ೨೦. ಅ | ೨೧. ಅ | ೨೨. ಡ | ೨೩. ಡ | ೨೪. ಅ |
| ೨೫. ಡ | ೨೬. ಅ | ೨೭. ಕ | ೨೮. ಬ | ೨೯. ಡ | ೩೦. ಕ |
| ೩೧. ಅ | ೩೨. ಬ | ೩೩. ಡ | ೩೪. ಅ | ೩೫. ಬ | ೩೬. ಬ |
| ೩೭. ಬ | ೩೮. ಅ | ೩೯. ಕ | ೪೦. ಬ | ೪೧. ಬ | ೪೨. ಬ |
| ೪೩. ಡ | ೪೪. ಬ | ೪೫. ಡ | | | |

## ಜನಪ್ರಿಯ ವಿಜ್ಞಾನ ಲೇಖಕರ ಶಿಬಿರ

ಉದಯೋನ್ಮುಖ ಕನ್ನಡ ಜನಪ್ರಿಯ ವಿಜ್ಞಾನ ಲೇಖಕರಿಗಾಗಿ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಬರುವ ಅಕ್ಟೋಬರ್ ತಿಂಗಳ ೧೭-೨೩, ೧೯೯೭ ರಂದು ಬಿಜಾಪುರ ಜಿಲ್ಲೆಯ ಬಾಗಲಕೋಟೆಯಲ್ಲಿ ಏಳು ದಿನಗಳ ಕಾರ್ಯ ಶಿಬಿರವನ್ನು ನಡೆಸಲಿದೆ. ಶಿಬಿರದಲ್ಲಿ ಭಾಗವಹಿಸಲು ಅಪೇಕ್ಷಿಸುವವರು ಸಂಬಂಧಪಟ್ಟ ನಿಯಮಾವಳಿ ಹಾಗೂ ನಿಗದಿತ ಅರ್ಜಿ ನಮೂನೆಗಳನ್ನು ಗೌರವ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಭಾರತೀಯ ವಿಜ್ಞಾನ ಮಂದಿರದ ಆವರಣ, ಬೆಂಗಳೂರು-೫೬೦೦೧೨ ಇವರಿಂದ ಪಡೆದು ೨೫ರೊಳಗೆ ಅರ್ಜಿ ಸಲ್ಲಿಸಬೇಕು.

ಭಾವನೆಗಳು ಸಶಕ್ತ ಸಂವೇದನೆಗಳೆಂದೂ, ಸಂವೇದನೆಗಳು ಅಶಕ್ತ ಭಾವನೆಗಳೆಂದೂ ಬಲ್ಲವರು ಹೇಳುತ್ತಾರೆ. ಆದುದರಿಂದ ಇವುಗಳ ಭಿನ್ನತೆಯ ಬಗೆಗೆ ಬಹಳ ತಲೆಕೆಡಿಸಿಕೊಳ್ಳದೇ ನಾವೀಗ ವ್ಯಕ್ತಿತ್ವ ನಿರ್ಮಾಣದಲ್ಲಿ ಭಾವನೆಗಳ ಪಾತ್ರವನ್ನರಿಯಲು ಹೆಜ್ಜೆ ಇರಿಸುವಾ.

# ವ್ಯಕ್ತಿತ್ವ ವಿಕಾಸ

## ಹೆಜ್ಜೆ - ೩

**ಭಾ**ವನೆಗಳು ವ್ಯಕ್ತಿತ್ವ ಪೋಷಣೆಯಲ್ಲಿ ಶಕ್ತಿಶಾಲಿಯಾದ ಪಾತ್ರವಹಿಸುತ್ತವೆ. ಅವು ನಮ್ಮನ್ನು ಆಶೆಯನಾಕಕ್ಕೆ ಅಥವಾ ನಿರಾಶೆಯ ನರಕಕ್ಕೆ ಕೊಂಡೊಯ್ಯಬಹುದು; ನಮ್ಮ ದೈಹಿಕ ಶಕ್ತಿ-ಸೌಂದರ್ಯಗಳನ್ನು ವರ್ಧಿಸಬಹುದು; ಮನೋವೈಕಲ್ಯವನ್ನು ಉಂಟುಮಾಡಬಹುದು; ನಮ್ಮಿಂದ ನಮ್ಮ ಮಿತ್ರರನ್ನೂ, ಉದ್ಯೋಗವನ್ನೂ, ಮನಃಶಾಂತಿಯನ್ನು ದೂರಮಾಡಬಹುದು. ಇತರರೊಡನೆಯ ನಮ್ಮ ಹೊಂದಾಣಿಕೆಯಲ್ಲಿ ಅವು ಪ್ರಮುಖ ಪಾತ್ರ ವಹಿಸುತ್ತವೆ. ದೇಹ, ಮನಸ್ಸು ಮತ್ತು ಭಾವನೆಗಳ ಯಥೋಚಿತ ಸಮತೋಲನದಲ್ಲಿದ್ದಾಗ ಮಾತ್ರ ಯಶಸ್ವಿ ವ್ಯಕ್ತಿತ್ವ ನಿರ್ಮಾಣ ಸಾಧ್ಯ. ಈ ಮೂರು ಸದುಪಯೋಗದ ಮೂಲಕ ನಾವು ನಮ್ಮ ಭಾವನೆಗಳನ್ನು ಹಿಡಿತದಲ್ಲಿಡಬಹುದು.

ನಮ್ಮ ಜೀವನದಲ್ಲಿಯ ಆನಂದ ಅಥವಾ ದುಃಖಕ್ಕೆ ಭಾವನೆಗಳೂ ಕಾರಣ. ಅವು ತನ್ನೊಡನೆ ಮತ್ತು ಇತರರೊಡನೆಯ ಹೊಂದಾಣಿಕೆಯನ್ನು ಸುಧಾರಿಸುವ ಸಾಧನಗಳಾಗಬಹುದು; ಅಥವಾ ಹೊಂದಾಣಿಕೆಯನ್ನು ವಿಫಲಗೊಳಿಸಬಹುದು. ತತ್ಕಾಲದ ಅಥವಾ ದೀರ್ಘಕಾಲದಿಂದ ಮನೆಮಾಡಿದ ಭಾವನೆಗಳು ವ್ಯಕ್ತಿಯು ತನ್ನನ್ನು ಮತ್ತು ಪರಿಸರವನ್ನು ನೋಡುವ ದೃಷ್ಟಿಯನ್ನು ಪ್ರಭಾವಗೊಳಿಸಿ ಆತನ ವರ್ತನೆಯ ವ್ಯಾಖ್ಯೆಗೂ ಕಾರಣವಾಗುತ್ತವೆ. ಜೀವನಕ್ಕೆ ಆತ ಹೊಂದಿಕೊಳ್ಳುವ ರೀತಿಯನ್ನು ನಿರ್ದೇಶಿಸಿ ವ್ಯಕ್ತಿತ್ವದ ಮೇಲೂ ಪರಿಣಾಮ ಬೀರುತ್ತವೆ. ಉದಾಹರಣೆಗೆ: ತಾನು ಆಶಾಭಂಗಿತ ಎಂದು ತಿಳಿದುಕೊಂಡವ ದುಡಿಕಿನವನೂ, ಕ್ರೂರಿಯೂ ಆಗುತ್ತಾನೆ; ಸ್ವಾಭಾವಿಕವಾಗಿ ಹೊಟ್ಟೆಕಿಚ್ಚು ಪಡುವಾತ ಇತರರ ಎಲ್ಲ ಮಾತು, ಕೃತಿಗಳ



ಬಗೆಗೆ ಸಂಶಯ, ಪ್ರವೃತ್ತಿಯುಳ್ಳವನಾಗಿರುತ್ತಾನೆ.

ಎಲ್ಲರೂ ಎಲ್ಲ ಬಗೆಯ ಭಾವನೆಗಳ ರೂಪದಲ್ಲಿ ಪ್ರತಿಕ್ರಿಯಿಸಿದರೂ, ಕೆಲವರಲ್ಲಿ ಅಸಂತೋಷಜನಕ ಭಾವನೆಗಳ, ಇನ್ನೂ ಕೆಲವರಲ್ಲಿ ಸಂತೋಷಜನಕ ಭಾವನೆಗಳ ಪ್ರಾಬಲ್ಯ ಕಾಣುತ್ತೇವೆ. ಇಂದು ಇದಕ್ಕೆ ಅನೇಕ ಕಾರಣಗಳನ್ನು ನೀಡಲಾಗುತ್ತದೆ: ಪರಿಸರ, ಮಗು-ಪಾಲಕ ಸಂಬಂಧ, ಪ್ರೀತಿಯ ಲಭ್ಯಾಲಭ್ಯತೆ ಹಾಗೂ ಅದರ ಪ್ರಮಾಣ, ಮಗುವಿನ ತರಬೇತಿ, ದೈಹಿಕ ಸ್ಥಿತಿ, ಇತ್ಯಾದಿ. ಅನುವಂಶೀಯತೆಯ ಪಾತ್ರವೂ ಇದರಲ್ಲಿದ್ದರೂ ಅದು ನಗಣ್ಯ.

ಮಗುವಿಗೆ ಪ್ರತಿಬಂಧಕವಾಗಿರುವ ಪರಿಸರ, ಮಗುವಿನ ಸಾಮರ್ಥ್ಯಕ್ಕೆ ಮೀರಿದುದನ್ನು ಅದರಿಂದ ಅಪೇಕ್ಷಿಸುವ ಪಾಲಕರಿಂದಾಗಿ ಉಂಟಾದ ನಿರಂತರ ಅಸಫಲತೆಯ ಭಾವನೆ, ಸಾಮಾಜಿಕ ಸಂಬಂಧಗಳ ಬದಲಾವಣೆ, ಪ್ರೀತಿಯ ಅಲಭ್ಯತೆಗಳು ಮಗುವು ಬೆಳೆದಂತೆಲ್ಲ ಅಸಂತೋಷಕರ ಭಾವನೆಗಳನ್ನು ಅನುಭವಿಸುವಂತೆ ಮಾಡುತ್ತದೆ. ಅದರ ಪ್ರತಿಕ್ರಿಯೆ ಸಹ ಪ್ರತಿಸಲ ಋಣಾತ್ಮಕವೇ! ಕಾಲಾಂತರದಲ್ಲಿ ಇದು ಆ ವ್ಯಕ್ತಿಯ ಸ್ವಭಾವವಾಗಿ ಬಿಡುತ್ತದೆ. ವ್ಯಕ್ತಿ ಅನುಭವಿಸುವ ಪ್ರಬಲ ಭಾವನೆಗಳು ಆತನ ಮುಖಚರ್ಯೆಯಲ್ಲಿ, ನಂತರ ನಡತೆಯಲ್ಲಿ ಸ್ಫುಟಗೊಳ್ಳುತ್ತವೆ. ಆದುದರಿಂದಲೇ ಪ್ರವೀಣರು ನಿಮ್ಮ ಮುಖವನ್ನು ಪುಸ್ತಕದ ಹಾಳೆಯಂತೆ ಓದಿ ಅರ್ಥೈಸಬಲ್ಲರು! ವಿಶ್ರಾಂತ ಸ್ಥಿತಿಯಲ್ಲಿ ಸಹ ಮುಖದಲ್ಲಿ ಭಾವನೆಗಳನ್ನು ಓದಬಹುದಂತೆ!.

ಮಗುವಿಗೆ ಮಮತೆಯ ನಿರಂತರ ಸಿಂಚನ ಅವಶ್ಯಕ. ಏಕೆಂದರೆ ಪ್ರೀತಿ-ಪ್ರೇಮಗಳ ಅನುಭೂತಿಯ ಕೊರತೆ ಮಗುವಿನಲ್ಲಿ ಭಾವನೆಗಳ ಹಸಿವು ಉಂಟುಮಾಡುತ್ತದೆಯಲ್ಲದೆ ಅದು ಬೆಳೆದಂತೆಲ್ಲ ದುರ್ನಡತೆ, ಶಂಕೆ ಶೀಘ್ರ ಕೋಪ, ಅಪರಾಧೀಭಾವಗಳನ್ನು ಬಚ್ಚಿಟ್ಟುಕೊಳ್ಳುತ್ತದೆ. ಶಂಕಿತನಿಗೆ ಭಯ ಬಹಳ. ಅವನ ಆನಂದವೂ ಸಹ ಅನಿಶ್ಚಯತೆಯ ಅಂಚನ್ನು ಹೊಂದಿರುತ್ತದೆ. ಹಾಗಾದರೆ ಮಗುವನ್ನು ಪ್ರೀತಿಯ ಮಹಾಪೂರದಲ್ಲಿ ತೇಲಿಬಿಟ್ಟರೆ? ಯಾವುದೂ 'ಅಲೆ' ಬೇಡ ಎಂದಿದ್ದಾರೆ ಹಿರಿಯರು. ಇಂಥ ಮಹಾಪೂರ ಸಹ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರುತ್ತದೆ. ಇಂಥವರಿಗೆ ಭಾವೀ ಜೀವನದಲ್ಲಿ ಯಾವಾಗಲೂ ಅಷ್ಟೇ ಪ್ರಮಾಣದ ಪ್ರೀತಿಯ ಅವಶ್ಯಕತೆಯುಂಟಾಗುತ್ತದಲ್ಲದೆ ಅವರು ಎಂದೂ ಸ್ವಪ್ರಯತ್ನದಿಂದ ಜೀವನ ನಿರ್ವಹಿಸಲಾರರು.

ನಾವು ನಿರಾಶರಾಗಬೇಕಿಲ್ಲ. ಸಂತೋಷಕರ ಭಾವನೆಗಳು ಪ್ರಬಲವಾಗಿರುವವರೂ ಬೇಕಷ್ಟು ಸಂಖ್ಯೆಯಲ್ಲಿದ್ದಾರೆ. ಅವರು ಸಂತೃಪ್ತರು. ಆದುದರಿಂದ ಸದಾ ಸುಖಿಗಳು. ದುಃಖದಲ್ಲಿರುವಾಗಲೂ ಸಹ ಅವರು ವಸ್ತು-ವ್ಯಕ್ತಿಗಳ ಬಗೆಗೆ ಆಶಾದಾಯಕ ಭಾವನೆಗಳನ್ನು ಹೊಂದಿರುತ್ತಾರೆ.

ನಿತ್ಯಜೀವನದಲ್ಲಿ ನಾವು ಅನುಕೂಲ ಅಥವಾ ಪ್ರತಿಕೂಲ ಸಂದರ್ಭಗಳನ್ನು ಎದುರಿಸುತ್ತಿರುತ್ತೇವೆ. ನಮ್ಮ ದೈನಂದಿನ ಯೋಗಕ್ಷೇಮದ ಮೇಲೆ ಆಮೂಲಾಗ್ರ ಒಳ್ಳೆಯ ಅಥವಾ ಕೆಟ್ಟ ಪರಿಣಾಮ ಬೀರಬಹುದಾದ ಸಾಧ್ಯತೆಯನ್ನು ಯಾವುದೊಂದು ಸಂದರ್ಭದಲ್ಲಿ ಗುರುತಿಸಿದೊಡನೆಯೇ ನಮ್ಮ ದೇಹ, ಮನಸ್ಸುಗಳು ವಿಚಿತ್ರ ವಿಕಾಸಕ್ಕೊಳಗಾಗುತ್ತವೆ. ಇಂದ್ರಿಯಗಳಿಂದ ಜನ್ಯವಾದ ಆಂತರಿಕ ಬದಲಾವಣೆಗಳನ್ನು (ಉದಾ-ಸ್ಪರ್ಶ, ನೋವು, ಹಸಿವು ಇತ್ಯಾದಿ) ಗುರುತಿಸಿದಾಗ ಈ ವಿಕಾರಗಳನ್ನು ಸಂವೇದನೆಗಳೆಂದೂ, ಮನಸ್ಸಿನ ವಿಕಾರಗಳನ್ನು (ಉದಾ - ಕೋಪ, ಭಯ, ಆನಂದ ಇತ್ಯಾದಿ) ಭಾವನೆಗಳೆಂದೂ ತಿಳಿಯುತ್ತಾರೆ. ಆದರೆ ನಮಗೆ ಇಷ್ಟು ಸೂಕ್ಷ್ಮವಾದ ಭೇದದ ಅಗತ್ಯವಿಲ್ಲ. ವ್ಯಕ್ತಿತ್ವದೊಡನೆ ಅವೆರಡರ ಸಂಬಂಧವೂ ಗಾಢವಾಗಿದೆಯೆಂಬುದು ಮಾತ್ರ ನಮಗೆ ಅವಶ್ಯ.

ವ್ಯಕ್ತಿತ್ವದಲ್ಲಿ ಭಾವನೆಗಳಿಗೆ ಎಲ್ಲಿಲ್ಲದ ಮಹತ್ವವಿದೆ. ಅವು ನಮ್ಮ ವರ್ತನೆಯ ಮೂಲ ಹಾಗೂ ಜೀವಾಳ ದೈಹಿಕ ಮತ್ತು ಮಾನಸಿಕ ವ್ಯಾಪಾರಗಳಷ್ಟೇ ಅವೂ ಸಹ ಮುಖ್ಯ. ನನ್ನ ಸ್ನೇಹಿತೆಗಾಗಿ ನಾನು ಏನು ಮಾಡಬೇಕೆನ್ನುತ್ತೇನೋ ಅದು ಅವಳ ಬಗೆಗಿನ ನನ್ನ ಭಾವನೆಗಳನ್ನು ಅವಲಂಬಿಸಿದೆ. ಗೃಹಿಣಿಗೆ ತನ್ನ ಪತಿ ನೀಡುವ ಬೆಂಬಲ ಮತ್ತು ರಕ್ಷಣೆ ಮಾತ್ರ ಮುಖ್ಯವಲ್ಲ; ಅವಳ ದಾಂಪತ್ಯದಲ್ಲಿ ಪತಿಯ ವಿಶ್ವಾಸಗಳಿಸುವ ಮೂಲಕ ಆತ ತನಗೆ ನೀಡುವ ಪ್ರೀತಿ-ಅತಿ ಮಹತ್ವದ್ದಾಗಿರುತ್ತದೆ. ಯಾವುದೇ ವ್ಯಾಪಾರಿ ತನ್ನ ಗ್ರಾಹಕನಿಂದ ನಿಯಮಿತವಾಗಿ ಬೇಡಿಕೆಗಳನ್ನು ಪಡೆಯುವುದರಲ್ಲಿ ಆಸಕ್ತನಿರುವನೇ ವಿನಾ ಒಂದೇ ಬಾರಿಯ ಅತಿ ದೊಡ್ಡ ಬೇಡಿಕೆಗಾಗಿ ಹಂಬಲಿಸುವುದಿಲ್ಲ.




ಹಾಗಾದರೆ ನಮ್ಮ ಯೋಗಕ್ಷೇಮವು ಏನನ್ನವಲಂಬಿಸಿದೆ? ಅದುವೇ ಭಾವನೆಗಳನ್ನು ಯೋಗ್ಯ ನಿಯಂತ್ರಣದಲ್ಲಿ ಇರಿಸುವುದು.

ಭಾವನೆಗಳ ಸವಾರಿ ವ್ಯಕ್ತಿತ್ವದ ಮೇಲೆ ಎರಡು ಬಗೆಯಿಂದ ಆಗುತ್ತದೆ. ಪ್ರತ್ಯಕ್ಷ ಪರಿಣಾಮಗಳು ದೇಹ, ಮನಸ್ಸುಗಳ ಮುಖಾಂತರ ಆದರೆ ಪರೋಕ್ಷ ಪರಿಣಾಮಗಳು ಭಾವಾವೇಶಕ್ಕೊಳಗಾದ ವ್ಯಕ್ತಿಯ ಬಗೆಗೆ ಸಮಾಜ ವ್ಯಕ್ತಪಡಿಸುವ ಪ್ರತಿಕ್ರಿಯೆಯ ಮುಖಾಂತರ ಗೋಚರವಾಗುತ್ತವೆ.

ಅತ್ಯಂತ ಸಣ್ಣ ಪ್ರಮಾಣದ ಭಾವ ಪ್ರಚೋದನೆಯೂ ಸಹ ದೈಹಿಕ ಸಮತೋಲನವನ್ನು ಅಭದ್ರಗೊಳಿಸುತ್ತದೆ. ದೀರ್ಘಕಾಲದ ಮತ್ತು ಶಕ್ತಿಯುತವಾದ ಭಾವನೆಗಳು ವ್ಯಕ್ತಿಯ ವರ್ತನೆಯಲ್ಲಿ ಆಮೂಲಾಗ್ರ ಬದಲಾವಣೆಯನ್ನೇ ತರಬಹುದು. ಭಾವನೆಗಳ ಅಭಿವ್ಯಕ್ತಿ 'ಸುರಕ್ಷಿತ ಕೊಳವೆ' ಇದ್ದಂತೆ; ಅದು ಸಾಧ್ಯವಾದರೆ-ಇತರರಿಗೆ ನಿಮ್ಮನ್ನು ನೀವು ತೆರೆದುಕೊಳ್ಳುವುದು. ದೈಹಿಕ ಸಮತೋಲ ಪುನಃ ಸ್ಥಾಪಿತವಾಗಬಹುದು. ಆದರೆ ಹತ್ತಿಕ್ಕಿದ ಭಾವನೆಗಳು ಮನೋ-ದೈಹಿಕ ತೊಂದರೆಗಳ ರೂಪದಲ್ಲಿ ಕಾಣಿಸಿಕೊಳ್ಳಬಹುದು.




ನೀವು ಕಾಡಿನಲ್ಲಿ ಈ ಲೇಖನ ಓದುತ್ತ ಕುಳಿತುಕೊಂಡಂತೆ ಊಹಿಸಿಕೊಳ್ಳಿ. ಎಲ್ಲಿಂದಲೋ ಹುಲಿಯೊಂದು ನಿಶ್ಶಸ್ತ್ರರಾದ ನಿಮ್ಮನ್ನು ಹುಡುಕಿಕೊಂಡು ಬಂದಿತೆಂದಿಟ್ಟುಕೊಳ್ಳಿ. ನೀವು ತೀವ್ರವಾಗಿ ಅಂಜುವಿರಿ; ನೀರು ನೀರಾಗುವಿರಿ; ಅಗೋ, ನಿಮ್ಮ ಧ್ವನಿ ಸತ್ತಿತು! ನೀವು ಓಡತೊಡಗುವಿರಿ. ಇದು ಬಾಹ್ಯ ವರ್ತನೆ. ಬೇರೊಬ್ಬರಿಗೆ ಇದು ಕಾಣುತ್ತದೆ. ಆದರೆ ಈ ನಿಮ್ಮ ಪ್ರತಿಕ್ರಿಯೆ ಹುಲಿಗಳ ಬಗೆಗಿನ ನಿಮ್ಮ ತಿಳಿವಳಿಕೆಯ ಫಲ ಎಂಬುದು ಕಾಣದು. ನೀವು ಹುಲಿಯ ಸಿದ್ಧ ಆಹಾರ ಎಂಬುದು ಹುಲಿಯಂತೆ ನಿಮಗೂ ತಿಳಿದಿದೆ. ಇದೇ ಜ್ಞಾನ 'ನಿಮ್ಮ ಜೀವ ಅಸುರಕ್ಷಿತ' ಎಂಬ ಭಾವನೆಯನ್ನು ನಿಮ್ಮಲ್ಲಿ ಜಾಗೃತಗೊಳಿಸಿ ನಿಮ್ಮ ನರಜಾಲದ ಮೇಲೆ ಬೀರುವ ಪರಿಣಾಮದ ಮೂಲಕ ದೈಹಿಕ ಬದಲಾವಣೆ ತರುತ್ತದೆ. ಆಗ ಓಡುತ್ತೀರಿ ನೀವು!

ನಮ್ಮ ನರಜಾಲದಲ್ಲಿ ಎರಡು ವಿಭಾಗಗಳಿವೆ: ಒಂದು, ಕೇಂದ್ರ ನರಜಾಲ ವ್ಯವಸ್ಥೆ; ಇನ್ನೊಂದು, ಸ್ವಯಂ ನಿಯಂತ್ರಿತ ನರಜಾಲ ವ್ಯವಸ್ಥೆ. ಮೊದಲನೆಯದು ಎಲ್ಲ ಐಚ್ಛಿಕ ಸ್ನಾಯುಗಳು, ಮೆದುಳು ಮತ್ತು ಬೆನ್ನುಹುರಿಯ ನಿಯಂತ್ರಣ ನಿರ್ವಹಿಸುತ್ತದೆ; ಎರಡನೆಯದು ಹೃದಯ, ಜಠರ, ಉಸಿರಾಟಕ್ಕೆ ಸಂಬಂಧಿಸಿದ ಅನೈಚ್ಛಿಕ ಸ್ನಾಯುಗಳ, ಶುದ್ಧರಕ್ತವಾಹಿನಿಗಳ ಮತ್ತು ರಸಗ್ರಂಥಿಗಳ ಉಸ್ತುವಾರಿಯಲ್ಲಿರುತ್ತದೆ. ಮೇಲೆ ತಿಳಿಸಿದ ಉದಾಹರಣೆಯಲ್ಲಿ ಭಾಗಿಯಾಗುವುದು ನರಜಾಲದ ಎರಡನೆಯ ಭಾಗ.

ಭಾವನೆಗಳ ತೀವ್ರ ಏರಿಳಿತ ಯಾವ ವಯಸ್ಸಿನಲ್ಲಾದರೂ ನರಜಾಲವನ್ನು ಉತ್ತೇಜಿಸುತ್ತದೆ. ಆದುದರಿಂದ ವಿವಿಧ ವಯಸ್ಸಿನವರಲ್ಲಿ-ಅದರಲ್ಲೂ ತರುಣರಲ್ಲಿ-ಕಾಣಿಸಿಕೊಳ್ಳುವ ತೀವ್ರ ಆಯಾಸ, ನಿದ್ದೆಗೇಡು, ಏರುರಕ್ತದೊತ್ತಡ, ಸ್ಥಾಪಿತ ಪಚನಕ್ರಿಯೆ, ಅನಿಯಮಿತ ಹೃದಯ-ಬಡಿತ, ಹೊಟ್ಟೆ-ಹುಣ್ಣು, ಮೈಗೊಗ್ಗದಿರುವಿಕೆ, ಹಾಗೆಯೇ ಚರ್ಮರೋಗಗಳೂ ಸಹ ಭಾವನೆಗಳ ತೀವ್ರ ಏರಿಳಿತದ ದೈಹಿಕ ಪ್ರತಿಕ್ರಿಯೆಯಾಗಿರಬಹುದು. ವಿಶ್ರಾಂತರು, ಇಳಿ ವಯಸ್ಸಿನ ವ್ಯವಹಾರಸ್ಥರು ದಿನವಿಡೀ ಚಟುವಟಿಕೆಯಿಲ್ಲದವರಾಗಿರುವುದರ ಕಾರಣ ಭಾವನೆಗಳ ಏರಿಳಿತ ಅವರನ್ನು ತೀವ್ರ ಪರಿಣಾಮಕ್ಕೀಡುಮಾಡುವದಲ್ಲದೆ ಆ ಪರಿಣಾಮ ಬಹಳ ಕಾಲ ಮುಂದುವರೆಯುವುದು ಖಚಿತ.

ಎರಡು ಬಗೆಯ ಭಾವನೆಗಳಿವೆ: ಅಪೇಕ್ಷಣೀಯ (ಉದಾ: ಪ್ರೀತಿ, ಧೈರ್ಯ, ಸಹಾನುಭೂತಿ ಇತ್ಯಾದಿ) ಮತ್ತು ಅನಪೇಕ್ಷಣೀಯ (ಉದಾ: ಕೋಪ, ದ್ವೇಷ, ಮತ್ಸರ ಇತ್ಯಾದಿ) ಮೊದಲ ತೆರನಾದ ಭಾವನೆಗಳ ಹೃದಯದಲ್ಲಿ ಹಾಗೂ ಎರಡನೆಯ ತೆರನಾದವು ಪ್ಲೀಹದಲ್ಲಿಯೂ ಉಗಮಿಸುತ್ತವೆಯೆಂದು ಅನೇಕ ವರ್ಷಗಳವರೆಗೆ ತಿಳಿಯಲಾಗಿತ್ತಾದರೂ ಈಗ, ಭಾವನೆಗಳು ಮಿದುಳಿನ ಹೊರಭಾಗದಲ್ಲಿ ಜನಿಸಿ ಮಿದುಳಿನಲ್ಲಿಯ ನರಗಳ ಉಗಮಸ್ಥಾನವನ್ನು ಉತ್ತೇಜಿಸುವ ಮೂಲಕ ಸಂಬಂಧಿಸಿದ ದೇಹಭಾಗಗಳಲ್ಲಿ ಬದಲಾವಣೆಯನ್ನುಂಟುಮಾಡುತ್ತವೆ ಎಂದು ತಿಳಿಯಲಾಗಿದೆ.

ನಾವು ಆಗಾಗ ಭಾವಾವೇಶಕ್ಕೊಳಗಾಗುತ್ತಿರುತ್ತೇವೆ. ಹಾಗೆ ಆದಾಗಲೊಮ್ಮೆ ನಮ್ಮ ಮಾನಸಿಕ ಸ್ಥಿತಿ ಬದಲಾಯಿಸುವುದು ಖಚಿತ. ಆದರೆ ಈ ಬದಲಾವಣೆ ನಮಗೆ ಯಾವಾಗಲೂ ಹಾನಿಯನ್ನೇ ಉಂಟುಮಾಡಬೇಕಿಲ್ಲ. ಆಹ್ಲಾದಕರ ಅನುಭವಗಳಿಂದ ಜೀವನದ ಬಗೆಗೆ ಧನಾತ್ಮಕ ಮನೋಭಾವ ಬೆಳೆಯುತ್ತದೆ; ನಿರುತ್ತೇಜಕ ಅನುಭವಗಳಿಂದ ಋಣಾತ್ಮಕ ಮನೋಭಾವ ತಲೆದೋರುತ್ತದೆ. ಮೊದಲನೆಯದು ಸಾಮಾಜಿಕವಾಗಿ ಗ್ರಾಹ್ಯವಾಗುತ್ತದೆ, ಎರಡನೆಯದು ಅಗ್ರಾಹ್ಯವಾಗುತ್ತದೆ.

ಭಾವನೆಗಳಿಂದ ನಾವು ತೊಂದರೆಗೆ ಸಿಲುಕಿದಾಗ ನಮ್ಮ ಮಾನಸಿಕ ಕ್ಷಮತೆ ಏರುಪೇರಾಗುತ್ತದೆ; ಸಮತೋಲ ತಪ್ಪುತ್ತದೆ. ನಮ್ಮ ತಾರ್ಕಿಕ ಕ್ಷಮತೆಯೂ ಒಂದೇ ರೀತಿಯಲ್ಲಿರುವುದಿಲ್ಲ. ಆತಂಕ ಮತ್ತು ನಿಷ್ಫಲತೆಯನ್ನನುಭವಿಸುತ್ತಿರುವವ ಸರಿಯಾಗಿ ಓದಲಾರ ಕೂಡ. ಗಣಿತದಂಥ ಜಟಿಲ ಕೌಶಲ್ಯದ ಅವಶ್ಯಕತೆಯಿರುವ ವಿಷಯಗಳೂ ಬೇಸರ ತರುತ್ತವೆ. ಏಕೆಂದರೆ ಆಗ ಏಕಾಗ್ರತೆ ಕುಂದಿರುತ್ತದೆ. ಆಶಾಭಂಗಿಗಳಾದವಳ ಕಾರ್ಯ ಸಾಮರ್ಥ್ಯ ಕುಗ್ಗಿಹೋಗಿರುತ್ತದೆ. ರಚನಾತ್ಮಕತೆ ಕುಂಠಿತಗೊಳ್ಳುತ್ತದೆ. ಭಾವನೆಗಳು ಮಾನಸಿಕ ಸ್ಥಿತಿಯನ್ನು ಹೇಗೆ ಬದಲಾಯಿಸುತ್ತವೆಯೆಂಬುದನ್ನು ಒಂದು ಚಿಕ್ಕ ಉದಾಹರಣೆಯೊಂದಿಗೆ ನೋಡೋಣ.

ನಿಮ್ಮ ಮುದ್ದು ಮಗಳೊಡನೆ ನೀವೊಂದು ಪ್ರಾಣಿಸಂಗ್ರಹಾಲಯಕ್ಕೆ ಬಂದಿರುವಿರಿ. ಅಲ್ಲಿ ಪಂಜರದಿಂದ ಹೊರಬಂದ ಚಿರತೆಯೊಂದು ನಿಮ್ಮ ಕಣ್ಣಿಗೆ ಬೀಳುತ್ತದೆ. ನಿಮಗೆ ಜೀವಭಯ ಕಾಡತೊಡಗುತ್ತದೆ. ಮಗ್ಗುಲಲ್ಲಿಯ ನಿಮ್ಮ ಮಗುವನ್ನು ಮರೆಯುತ್ತೀರಿ. ಮೊದಲು ನೀವು ಸುರಕ್ಷಿತವಾಗಿರಬೇಕು, ಅಲ್ಲವೇ? ನಿಮ್ಮ ಮಾತು ತೊದಲುತ್ತದೆ; ಅಂಗೈ-ಅಂಗಾಲುಗಳು ಬೆವೆತಿವೆ. ಅಷ್ಟರಲ್ಲಿ ಎಳ್ಳಷ್ಟೂ ಹೆದರದ ನಿಮ್ಮ ಮಗಳು 'ಡ್ಯಾಡಿ, ಚಿರತೆಯ ಹತ್ತಿರ ಹಾವು ಇದೆ' ಎನ್ನುತ್ತಾಳೆ. ಆಗ ಅಲ್ಲಿರುವ ಸರಪಳಿಯನ್ನು ಗಮನಿಸುವಿರಲ್ಲದೆ ಅದರಿಂದ ಚಿರತೆಯನ್ನು ಬಲವಾಗಿ ಕಟ್ಟಿದ್ದೂ ಸಹ ನಿಮ್ಮ ಗಮನಕ್ಕೆ ಬರುತ್ತದೆ. ಈಗ ಹೆದರಿಕೆ ನಿಮ್ಮನ್ನು ತೊರೆಯುವುದರಿಂದ ಮೈಯೆಲ್ಲ ಸಡಿಲಾಗಿ ಮಗುವನ್ನೆತ್ತಿಕೊಳ್ಳುತ್ತಾ ನಿಮ್ಮ ಸ್ವಾರ್ಥಕ್ಕಾಗಿ ನಾಚಿಕೆಪಟ್ಟುಕೊಳ್ಳುತ್ತೀರಿ! ಕಂಡಿರಾ, ಎರಡು ನಿಮಿಷಗಳಲ್ಲಿ ಎರಡು ಸಲ ನಿಮ್ಮ ಮಾನಸಿಕ ಸ್ಥಿತಿ ಬದಲಾಯಿತು. ಯಾವುದೇ ಸಂದರ್ಭದಲ್ಲಿ ವ್ಯಕ್ತಿಯ ವಿಶಿಷ್ಟ ಪ್ರತಿಕ್ರಿಯೆ ಏನನ್ನವಲಂಬಿಸಿರುತ್ತದೆ? ತನ್ನ ಹಿತ, ಯೋಗಕ್ಷೇಮಗಳ ಹಿಂಬದಿಯಲ್ಲಿ ಆತ ಆ ಸಂದರ್ಭವನ್ನು ಅರ್ಥೈಸುವ ರೀತಿಯನ್ನು.

ಇಷ್ಟೆಲ್ಲವನ್ನು ಓದಿ ಮನಸ್ಸು ಭಾರವಾಗಿದೆಯಲ್ಲವೆ? ಹೌದು, ಜಟಿಲ ವಿಷಯಗಳನ್ನು ತಿಳಿಯುವಾಗ ಹಾಗಾಗುವುದು ಸಹಜ. ಈಗ ವಿಶ್ರಮಿಸಿ ಮುಂದಿನ ಸಂಚಿಕೆಯಲ್ಲಿ ಹೊಸ ಉತ್ಸಾಹದಿಂದ ಮುಂದಿನ ಹೆಜ್ಜೆಯಿರಿಸೋಣ.

○ 'ಕೃಶಾಂಗ'

# ತಲೆ ಇದ್ದವರು ಹೆಲ್ಮೆಟ್ ಧರಿಸುತ್ತಾರೆ!

**ತ**ಲೆ ಇದ್ದವರು ಹೆಲ್ಮೆಟ್ ಧರಿಸುತ್ತಾರೆ, ಇಲ್ಲದವರು ಜೀವ ತೆರುತ್ತಾರೆ ಎಂದು ಹೇಳಿ ದ್ವಿಚಕ್ರವಾಹನ ಚಾಲಕರು ಹೆಲ್ಮೆಟ್ ಧರಿಸುವುದರಿಂದ ವಿನಾಯ್ತಿ ಘೋಷಿಸಿದ ಸರ್ಕಾರದ ನಿರ್ಧಾರ ನಿಮಗೆ ನೆನಪಿರಬೇಕಲ್ಲ. ಸರ್ಕಾರ ಈಗ ಆ ನಿರ್ಧಾರವನ್ನು ಬದಲಾಯಿಸಿ ಕೊಳ್ಳಬೇಕಿದೆ.

ರಾಜ್ಯ ಹೈಕೋರ್ಟ್ ಮತ್ತೆ ಹೆಲ್ಮೆಟ್ ಕಡ್ಡಾಯಗೊಳಿಸಬೇಕು ಎಂದು ಸರ್ಕಾರಕ್ಕೆ ತಾಕೀತು ಮಾಡಿದ್ದೇ ಅಲ್ಲದೆ ೯-೨-೯೫ರಂದು ಸರ್ಕಾರ ಹೊರಡಿಸಿದ ಅಧಿಸೂಚನೆ ತಲೆ ಇಲ್ಲದವರು ಮಾಡಿದ ಕೆಲಸ ಎಂಬುದನ್ನು ಪರೋಕ್ಷವಾಗಿ ಹೇಳಿದೆ.

ಹೆಲ್ಮೆಟ್ ಧರಿಸುವುದಕ್ಕೆ ವಿನಾಯ್ತಿ ಪ್ರಕಟಿಸಿದ ನಿರ್ಧಾರವನ್ನು ಪ್ರಶ್ನಿಸಿ ವಕೀಲ ಎಸ್.ಆರ್.ಭಟ್ ಅವರು ಸಲ್ಲಿಸಿದ ಅರ್ಜಿಯನ್ನು ಪುರಸ್ಕರಿಸಿದ ನ್ಯಾಯಮೂರ್ತಿ ಎಂ.ಎಫ್.ಸಾಲ್ಡಾನ ದ್ವಿಚಕ್ರ ಸವಾರರಲ್ಲದೆ ಹಿಂಬದಿ ಸವಾರರೂ ಸಹ ಹೆಲ್ಮೆಟ್ ಧರಿಸುವುದು ಕಡ್ಡಾಯ; ಇದು ಅಕ್ಟೋಬರ್ ೨ರಿಂದ ಜಾರಿಗೆ ಬರಬೇಕು ಎಂದು ಆದೇಶಿಸಿದ್ದಾರೆ.

ಲಕ್ಷ ಲಕ್ಷ ರೂಪಾಯಿ ಯೋಜನೆಗಳನ್ನು ಪ್ರಕಟಿಸುತ್ತಾ ಎಲ್ಲವನ್ನು ಅಲಕ್ಷ್ಯ ಮಾಡುತ್ತಾ ಮತಹಾಕಿದ ಮತದಾರನಿಗೆ ಟೋಪಿ ಹಾಕುತ್ತಿದ್ದ ಸರ್ಕಾರಕ್ಕೆ ಈಗ ಟೋಪಿ ಬಿದ್ದಂಗಾಯಿತಲ್ಲ!

❑

**ಭ**ದ್ರಾವತಿಯಲ್ಲಿ ಕೈಗಾರಿಕೆಗಳು ಕೊಳೆಯನ್ನೆಲ್ಲಾ ಭದ್ರಾನದಿಗೆ ಬಿಟ್ಟು ಜಲಚರಗಳು ಮತ್ತು ಮನುಷ್ಯರ ಜೀವಕ್ಕೆ ಅಪಾಯ ಉಂಟು ಮಾಡುವುದನ್ನು ತಡೆದಿದ್ದ ನ್ಯಾಯಮೂರ್ತಿ ಸಾಲ್ಡಾನಾ ಅವರು ಈಗ ಬೆಂಗಳೂರು ನಗರದ ವಾತಾವರಣ ಸ್ವಚ್ಛಗೊಳಿಸುವ ಸಾಹಸಕ್ಕೆ ಮುಂದಾಗಿದ್ದಾರೆ.

ಬೆಂಗಳೂರಿನಲ್ಲಿ ಸಂಚರಿಸುವ ಎಲ್ಲ ವಾಹನಗಳೂ ಪರಿಸರ ಮಾಲಿನ್ಯ ನಿಯಂತ್ರಣ ಸರ್ಟಿಫಿಕೇಟ್ ಪಡೆಯುವುದು ಕಡ್ಡಾಯ ಎಂದು ತೀರ್ಪು ನೀಡಿ ಮತ್ತೊಮ್ಮೆ ಸರ್ಕಾರವನ್ನು ಬೆಚ್ಚಿಬೀಳಿಸಿದ್ದಾರೆ. ಮೂರ್ಖನಿಗೆ ಛಡಿ ಏಟೇ ಸರಿ ಎಂದು ತಿಳಿದ ಅವರು ಭಾರೀ ಹೊಗೆ ಉಗುಳುವ ಸರ್ಕಾರಿ ವಾಹನಗಳ ಬಗ್ಗೆಯೇ ಕಿಡಿಕಾರಿದ್ದಾರೆ. ಅಕ್ಟೋಬರ್ ೨ರಿಂದ ಬೆಂಗಳೂರಿನಲ್ಲಿ ಎಲ್ಲ ವಾಹನಗಳೂ ನಿಗದಿತ ಪ್ರಮಾಣದಲ್ಲಿಯೇ ಹೊಗೆ ಉಗುಳಬೇಕು, ಇಲ್ಲವಾದರೆ ಎಚ್ಚರ ಎಂದು ಹೂಂಕರಿಸಿದ್ದಾರೆ. ಎಲ್ಲೆಂದರಲ್ಲಿ ಉಗುಳಿ ಮೂತ್ರ ವಿಸರ್ಜನೆ ಮಾಡಿ. ಕಸ ಒಗೆದು ಅಂದದೂರನ್ನು ಹಾಳುಗೆಡವುತ್ತಿರುವ ನಾಗರಿಕರಿಗೆ ಕಡಿವಾಣ ಹಾಕಲು ಯತ್ನಿಸಿದ ಬೆಂಗಳೂರು ನಗರಪಾಲಿಕೆಯ ರವೀಂದ್ರ ಅವರಿಗೆ ಇನ್ನಷ್ಟು ಹುಮ್ಮಸ್ಸು ಬಂದಿರಬೇಕಲ್ಲವೇ?

## ಸುದ್ದಿಗೆ ಗುದ್ದು

ವಾಹನ ಹೊಗೆ ಉಗುಳುವುದಕ್ಕೆ ಎಮಿಷನ್ ಟೆಸ್ಟ್ ಮಾಡಬಹುದು. ಆದರೆ ಜನರು ಉಗುಳುವುದಕ್ಕೆ ಯಾವ ಟೆಸ್ಟ್ ಮಾಡಬೇಕು?

❑

**ಒಂ**ದು ತಿಂಗಳ ಅವಧಿಯಲ್ಲಿ ಸರ್ಕಾರದ ಮೇಲೆ ಮೂರನೇ ಬಾರಿ ನ್ಯಾಯಮೂರ್ತಿ ಸಾಲ್ಡಾನಾ ತಮ್ಮ ಅಸ್ತ್ರ ಪ್ರಯೋಗಿಸಿದ್ದಾರೆ.

ಹೆದ್ದಾರಿ ಗಸ್ತು ವ್ಯವಸ್ಥೆ ಜಾರಿಗೊಳಿಸಬೇಕೆಂದು ಆದೇಶ ನೀಡಿ ರಾಜ್ಯ ಸರ್ಕಾರಕ್ಕೆ ಗುದ್ದು ನೀಡಿದ್ದಾರೆ.

ಸರಕು ಸಾಗಣೆ ವಾಹನಗಳು ಪ್ರಯಾಣಿಕರನ್ನು ಕರೆದುಕೊಂಡು ಹೋಗುತ್ತವೆ. ಸರಕು ತುಂಬಿದ ವಾಹನಗಳಲ್ಲಿ ಜನರನ್ನು ಕರೆದೊಯ್ಯುವುದು ಅಪಾಯಕರ. ಅಪಘಾತವಾದರೆ ಅವರಿಗೆ ಯಾವ ಪರಿಹಾರವೂ ಸಿಗುವುದಿಲ್ಲ.

ರಾಜ್ಯದ ಹೆದ್ದಾರಿಗಳಂತೂ ಮೃತ್ಯುಕೂಪಗಳಾಗಿವೆ. ಅವನ್ನು ಸರಿಪಡಿಸುವ ಯತ್ನವನ್ನು ಸರ್ಕಾರ ಮಾಡುತ್ತಿಲ್ಲ. ಮೃತ್ಯುಕೂಪದಂತಹ ರಸ್ತೆಯಲ್ಲಿ ಸರಕನ್ನೂ ತುಂಬಿಕೊಂಡು, ಜನರನ್ನೂ ಹೇರಿಕೊಂಡು ವಾಹನಗಳು ಸಂಚರಿಸುತ್ತವೆ. ಇದನ್ನು ತಡೆಯಲು ಸರ್ಕಾರಕ್ಕೆ ಸಾಧ್ಯವಿಲ್ಲವೇ?

ಮನುಷ್ಯರ ಜೀವನದ ಬಗ್ಗೆ ಸರ್ಕಾರಕ್ಕೆ ತಾತ್ಸಾರ ಇರಬಹುದು. ಆದರೆ ಅದೇ ರೀತಿಯ ಭಾವನೆ ನ್ಯಾಯಾಲಯಕ್ಕೆ ಇಲ್ಲ. ತಕ್ಷಣದಲ್ಲಿಯೇ ಹೆದ್ದಾರಿ ಗಸ್ತು ವ್ಯವಸ್ಥೆ ಜಾರಿಗೆ ಬರಬೇಕು, ಸರಕು ಸಾಗಣೆ ವಾಹನಗಳಲ್ಲಿ ಜನರನ್ನು ಒಯ್ಯುವುದನ್ನು ನಿಯಂತ್ರಿಸಬೇಕು, ಸರ್ಕಾರಕ್ಕೆ ಇದು ಸಾಧ್ಯವಾಗದಿದ್ದರೆ ತಿಳಿಸಲಿ, ನ್ಯಾಯಾಲಯವೇ ತಕ್ಕ ವ್ಯವಸ್ಥೆ ಮಾಡುತ್ತದೆ ಎಂದು ಹೇಳಿ ನ್ಯಾಯಾಲಯ ಸರ್ಕಾರದ ನಿಷ್ಕ್ರಿಯತೆಗೆ ಕನ್ನಡಿ ಹಿಡಿದಿದೆ.

❑

**ಇ**ದೇನಪ್ಪಾ ಇದು, ಬರೀ ನ್ಯಾಯಾಲಯದ್ದೇ ಸುದ್ದಿ ಆಯಿತು, ಬ್ಯಾರೇ ಏನೂ ಇಲ್ಲೇನಪ್ಪಾ ಅಂತ ಬೈಯ್ಕೊಬ್ಯಾಡ್ರಿ. ಕೊನೇದಾಗಿ ಕಡಕೋಳದ ಶಾಂತ ರಾಜು ಕತೆ ಹೇಳ್ತೀನಿ.

ಮೈಸೂರು ತಾಲ್ಲೂಕು ಕಡಕೋಳದ ಶಾಂತರಾಜು ಅವರು ಸ್ವಾತಂತ್ರ್ಯ ಯೋಧ ಅದಾರ್ರಿ. ಸ್ವಾವಲಂಬನೆ ಅಂಬೋದು ಅವರ ರಕ್ತದಾಗನ ಹೊಕ್ಕೈತಿ. ಅವರ ಸಾಧನಾ ಏನು ಗೊತ್ತೇನು?

ಅವರು ಎಕರೆಗೆ ೯೨ ಟನ್ ಕಬ್ಬು ಬೆಳೆದಾರು, ಎಕರೆಗೆ ೪೨ ಕ್ವಿಂಟಲ್ ಭತ್ತ ಬೆಳೆದಾರು, ಈಗ ಸ್ವಾತಂತ್ರ್ಯೋತ್ಸವದ ವಿಶೇಷ ಅಂತ ಬಾಳೆ ಹಣ್ಣು ಬೆಳೆದಾರೆ.

ನಿಮಗೂ ಗೊತ್ತಲ್ಲ, ನಂಜನಗೂಡಿನ ರಸಬಾಳೆ ಅಂದರ, ಒಂದು ಗೊನೆದಾಗ ೫೦-೬೦ ಪುಟ್ಟ ಪುಟ್ಟ ಕಾಯಿ ಇರತ್ತೈತಿ. ಆದರೆ ಶಾಂತರಾಜು ಬೆಳೆದ ಬಾಳೆಗಿಡದಾಗ ಗೊನೆಗೆ ೬೦೦ ಕಾಯಿ ಐತಪಾ! ಈಗ ಅವರ ತೋಟದಾಗ ಜಾತ್ರೀನೇ ನಡದೈತಿ ಈ ಭಾರೀ ಬಾಳೀಗೊನೆ ನೋಡಾಕ.

ಭೂಮಿ ಯಾವಾಗಲೂ ಬಂಜೆ ಅಲ್ಲ. ಆಕಿ ಯಾವಾಗನೂ ಪ್ರಯೋಗಕ್ಕೆ ಬೆಲೆ ಕೊಡುವಾಕಿ. ಇದೇ ಶಾಂತರಾಜು ಅವರ ನಂಬಿಕಿ, ನೀವೂ ಸ್ವಲ್ಪ ಯತ್ನ ಮಾಡ್ರಲ. ೬೦೦ ಕಾಯಿ ಅಲ್ಲದಿದ್ದರೆ ೩೦೦ ಕಾಯಿಯಾದರೂ ಬೆಳೆದಾವು. ಅದೂ ಒಂದು ದಾಖಲೇನೇ ಆದೀತು.

–ನಿಕೇತನ

ಬಿ. ರಾಣಿ, ಬೆಂಗಳೂರು.

**ಮಾನ್ಯರೆ, ನಾನು B.E. ಓದುತ್ತಿದ್ದು ಮುಂದೆ ನಾನು ವಿದೇಶಿ ವಿಶ್ವವಿದ್ಯಾಲಯದಿಂದ M.B.A ಕೋರ್ಸ್ ಮಾಡಲು ಬಯಸುತ್ತೇನೆ. ಇದರ ಬಗ್ಗೆ ಮಾಹಿತಿ ಇದ್ದಲ್ಲಿ ದಯವಿಟ್ಟು ತಿಳಿಸಿ.**

ನೀವು ನಿಮ್ಮ ಇಚ್ಛೆಯಂತೆಯೆ Foreign University M.B.A. ಮಾಡಬಹುದು. Institute of chartered Financial Analysts of India U.S.A.ಯನ್ನು ನೀವು ಹೈದ್ರಾಬಾದ ಸೆಂಟರ್‌ನಿಂದ ಮಾಡಬಹುದು. ಈ ಕೋರ್ಸ್‌ಗೆ ಅರ್ಹತೆ B.E./B. Tech/ M.C.A. and Final year students of B.E./B.Tech Courses awaiting results can also apply.

Selection will be made on application and Interview. ಹೆಚ್ಚಿನ ವಿವರಗಳಿಗಾಗಿ ICFAI Transworld University Center Road, No.3, Banjara hills, Hyderabad-500 034,

ರಾಜೇಶ್ ಎಸ್., ದಾವಣಗೆರೆ

**ಸರ್, ನಾನು MSc. ಕೋರ್ಸ್‌ನ್ನು Anthropologyಲ್ಲಿ ಮುಂದುವರಿಸುತ್ತಿದ್ದು ಮುಂದೆ ಯಾವ ಕೋರ್ಸ್‌ನ್ನು ಮಾಡಬಹುದು? ಅದರ ಸಂಪೂರ್ಣ ವಿವರಗಳನ್ನು ತಿಳಿಸಬೇಕಾಗಿ ತಮ್ಮಲ್ಲಿ ವಿನಂತಿಸಿಕೊಳ್ಳುತ್ತಿದ್ದೇನೆ. ದಯವಿಟ್ಟು ಮಾರ್ಗದರ್ಶನ ನೀಡಿ.**

ನಿಮಗೆ ಸಂಪೂರ್ಣ ಇಷ್ಟವಿದ್ದಲ್ಲಿ ನೀವು Diploma in Archaeology Post-Graduation ಕೋರ್ಸ್ ಮಾಡಬಹುದು. ಇದಕ್ಕೆ ಅರ್ಹತೆ ಎಂದರೆ ಸ್ನಾತಕೋತ್ತರ ಪದವಿಯನ್ನು Ancient or Medieval Indian History ಯಲ್ಲಿ ಯಾವುದೆ ವಿಶ್ವವಿದ್ಯಾಲಯ/ ತತ್ಸಮಾನ ಅಥವಾ M.A./M.Sc. in Archaeology or Anthropology from a recognised University/ equivelent ಮಾಡಿರಬೇಕು. ಕನಿಷ್ಠ ಶೇ ೫೫ ಅಂಕಗಳೊಂದಿಗೆ ತೇರ್ಗಡೆಯಾಗಿರಬೇಕು. ಆದರೆ ಈ ವಿಭಾಗದಲ್ಲಿ ಕಾರ್ಯಸಲ್ಲಿಸಿದವರಿಗೆ Qualification ದಲ್ಲಿ ರಿಯಾಯಿತಿ ಇರುತ್ತದೆ. ಪ.ಜಾ./ಪ.ಪಂ.ದವರಿಗೆ ಕೆಲವು ಆಸನಗಳು Reserve ಇದ್ದು ಶೇ ೫೦ ಅಂಕಗಳು ತೆಗೆದುಕೊಂಡಲ್ಲಿ ಅವರು ಅರ್ಹರಾಗಿರುತ್ತಾರೆ. ಜೂನ್ ತಿಂಗಳಲ್ಲಿ ಈ ಬಗ್ಗೆ ಜಾಹಿರಾತನ್ನು ನೀಡಲಾಗುವುದು. ಇದು ೨ ವರ್ಷದ ಕೋರ್ಸ್.

ಹೆಚ್ಚಿನ ವಿವರಗಳಿಗಾಗಿ : The Director, Institute of Archaeology, Archaeological Survey of India, 24, Tilak Road, New Delhi 110 001.

ರಘುನಾಥ್ ಎಮ್., ಮೈಸೂರು.

**ಮಾನ್ಯರೆ, ನಾನು ಪಿ.ಯು.ಸಿ. ಆಧಾರದ ಮೇಲೆ, A.M.I.E. ಕೋರ್ಸ್‌ನ್ನು Electrical Engineering ವಿಭಾಗದಲ್ಲಿ ಮಾಡುತ್ತಿದ್ದು, ಮುಂದೆ ನಾನು ಯಾವ ಕೋರ್ಸ್ ಮಾಡಿದರೆ ಒಳ್ಳೆಯದು, ದಯವಿಟ್ಟು ತಿಳಿಸಿ.**

ನೀವು A.M.I.E. in Electrical Engineering ಆಧಾರದ ಮೇಲೆ M.Tech in Power and Energy Systems ಕೋರ್ಸ್‌ನ್ನು ಮಾಡಬಹುದು. ಇದಕ್ಕೆ ನೀವು ಅರ್ಹರಾಗಿದ್ದೀರಿ. ಇದಕ್ಕೆ ಇರುವ ಅರ್ಹತೆಗಳೆಂದರೆ B.E./B.Tech. from a recognised University/ equivelent OR A.M.I.E. In Electrical Engineering, with minimum 50% marks aggregate, 45% in case of SC/ST.



# ಮಾರ್ಗದರ್ಶಿ

○ ಡಾ. ಎಸ್.ಸಿ. ಶರ್ಮಾ
ಪ್ರಾಧ್ಯಾಪಕರು
ಆರ್.ವಿ. ಇಂಜಿನಿಯರಿಂಗ್ ಕಾಲೇಜು,
ಮೈಸೂರು ರಸ್ತೆ, ಬೆಂಗಳೂರು - ೫೬೦ ೦೫೯

ಎನ್. ರೇಷ್ಮಾ, ಹಾಸನ,

**ಮಾನ್ಯರೆ, ನಾನು B.Sc. Ordinary pass ಆಗಿದ್ದು ಮುಂದೆ B.Ed. ಮಾಡಲು ಇಷ್ಟವಿಲ್ಲ. ನನಗೆ M.Sc.ಮಾಡಲು ತುಂಬಾ ಆಸೆ ಇತ್ತು. ಆದರೆ ordinary ಆದುದರಿಂದ ಸೀಟು ಸಿಗಲಿಕಿಲ್ಲ. ಆದ್ದರಿಂದ ನಾನು ಯಾವ ರೀತಿ ಮುಂದುವರೆಯಬಹುದು ದಯವಿಟ್ಟು ತಿಳಿಸಿ.**

ನೀವು ಇಷ್ಟಕ್ಕೆ ನಿರಾಸೆಯಾಗುವುದು ಬೇಡ. ನಿಮಗೆ ಇಷ್ಟವಿದ್ದಲ್ಲಿ ನೀವು external M.Sc. mathematics ಕೋರ್ಸ್‌ನ್ನು ಬೆಂಗಳೂರು ವಿಶ್ವವಿದ್ಯಾಲಯದಿಂದ ಮುಂದುವರೆಸಬಹುದು. ಈ ಕೋರ್ಸಿಗೆ ಅರ್ಹತೆಗಳೆಂದರೆ, pass in B.Sc. of any recognised University/ equivelent with not less than 40% marks in aggregate in optional subjects ಮತ್ತು 50% ಅಂಕಗಳನ್ನು ಗಣಿತ ವಿಷಯದಲ್ಲಿ ಪಡೆದಿರಬೇಕು. ಹೆಚ್ಚಿನ ಮಾಹಿತಿಗಾಗಿ ಡೈರೆಕ್ಟರ್, Correspondance and Distance Education, Central college Campus, Bangalore - 1 ಇವರನ್ನು ಸಂಪರ್ಕಿಸಬಹುದು.

ರಾಮು ಟಿ., ಬೆಂಗಳೂರು.

**ಸರ್. ನಾನು B.Com. ಪದವಿಯನ್ನು ಮುಗಿಸಿದ್ದೇನೆ. ಮುಂದೆ ನಾನು ಯಾವುದಾದರು ಡಿಪ್ಲೊಮಾ ಕೋರ್ಸನ್ನು ಮಾಡಬೇಕೆಂದಿದ್ದೇನೆ. ಇದನ್ನು ವಿಶ್ವವಿದ್ಯಾಲಯಗಳಿಂದ ಮಾಡಬಹುದೆ? ಹಾಗಾದರೆ ನಾನು ಏನು ಮಾಡಬೇಕು ಹಾಗೂ ಅವರ ವಿಳಾಸ ಮತ್ತು ಅರ್ಹತೆಗಳನ್ನು ತಿಳಿಸಿರಿ.**

ನೀವು ಅವಶ್ಯವಾಗಿ B.Com. ಆಧಾರದ ಮೇಲೆ ನಿಮಗೆ ಇಷ್ಟವಿದ್ದಲ್ಲಿ Diploma in labour Law / Taxation law ಅಂತಹ ಕೊರ್ಸ್‌ಗಳನ್ನು ಮಾಡಬಹುದು. ಇದಕ್ಕೆ ಅರ್ಹತೆ ಎಂದರೆ ಪದವಿ ಪಾಸಾಗಿದ್ದರೆ ಸಾಕು. ಇದು ಒಂದು ವರ್ಷದ ಕೋರ್ಸ್ ಆಗಿರುತ್ತದೆ. ಹೆಚ್ಚಿನ ಮಾಹಿತಿಗಾಗಿ ಬೆಂಗಳೂರು ವಿಶ್ವವಿದ್ಯಾಲಯವನ್ನು ಸಂಪರ್ಕಿಸಬಹುದು.

ರಾಮು ಹೆಚ್., ಬಾಗೆಪಲ್ಲಿ

**ಸರ್, ನಾನು ಗಡಿನಾಡು ಕರ್ನಾಟಕದವನಾಗಿದ್ದು, ನಾನು**

**ಕನ್ನಡದಲ್ಲಿ Certificate ಕೋರ್ಸ್ ಮಾಡಲು ಅವಕಾಶವಿದೆಯೇ? ಇದ್ದಲ್ಲಿ ವಿವರಗಳೊಂದಿಗೆ ತಿಳಿಸಿ.**

ನೀವು ಅವಶ್ಯವಾಗಿ S.S.L.C.ಆಧಾರದ ಮೇಲೆ Certificate courses in Kannada ಮಾಡಬಹುದಾಗಿದೆ. ಇದು ಒಂದು ವರ್ಷ ಅವಧಿಯ ಕೋರ್ಸ್ ಆಗಿರುತ್ತದೆ. ಹೆಚ್ಚಿನ ವಿವರಗಳಿಗೆ ಬೆಂಗಳೂರು ವಿಶ್ವವಿದ್ಯಾಲಯವನ್ನು ಸಂಪರ್ಕಿಸಬಹುದು.

ಶಶಿಕಾಂತ, ಉಡುಪಿ.

**ಸರ್. ನಾನು ಬಿ.ಎಸ್ಸಿ ಪದವಿಯನ್ನು Computer Science ವಿಭಾಗದಲ್ಲಿ ಓದುತ್ತಿದ್ದು ಮುಂದೆ ಇದಕ್ಕೆ ಸಂಬಂದಪಟ್ಟ ಯಾವ ಕೋರ್ಸ್‌ನ್ನು ಮಾಡಬಹುದು? M.C.A. ಅಲ್ಲದೆ ಇತರ ಕೋರ್ಸ್‌ಗಳ ಬಗ್ಗೆ ತಿಳಿಸಿರಿ.**

ನಿಮಗೆ M.C.A. ಮಾಡಲು ಇಷ್ಟವಿಲ್ಲದಿದ್ದಲ್ಲಿ ನೀವು ಮಂಗಳೂರು ವಿಶ್ವವಿದ್ಯಾಲಯದವರು ನಡೆಸುವ M.Sc in Computer Software Course ಮಾಡಬಹುದು. ಇದಕ್ಕೆ ಅರ್ಹತೆ ಎಂದರೆ B.Sc ಪದವಿಯನ್ನು ಈ ವಿಶ್ವವಿದ್ಯಾಲಯದಿಂದಾಗಲಿ ಅಥವಾ ಯಾವುದೇ ಅಂಗಿಕೃತ ವಿಶ್ವವಿದ್ಯಾಲಯದಿಂದಾಗಲಿ ಕನಿಷ್ಠ 55% ಅಂಕಗಳೊಂದಿಗೆ Qualifiying ಪರೀಕ್ಷೆಯಲ್ಲಿ ತೇರ್ಗಡೆಯಾಗಿ Mathematics, Computer Science, Physics/Electronics/Statistics ವಿಷಯಗಳನ್ನು ಅಭ್ಯಾಸ ಮಾಡಿರಬೇಕು. (SC/ST 50% ಇದ್ದರೆ ಸಾಕು.)

ದೇವಕಿ ಎಫ್., ಚಿಂತಾಮಣಿ

**ಸರ್, ನಾನು ಪದವಿಯನ್ನು Library and Information Science ನಲ್ಲಿ ಓದುತ್ತಿದ್ದು ಮುಂದೆ ಈ ವಿಷಯದಲ್ಲಿ ಡಾಕ್ಟರೇಟ ಪದವಿಯನ್ನು ಪಡೆಯಬಹುದೆ? ಹಾಗಿದ್ದರೆ ಇದಕ್ಕೆ ಇರುವ ಅರ್ಹತೆಗಳು ಏನು? ಇದು ಎಷ್ಟು ವರ್ಷದ ಕೋರ್ಸ್ ಆಗಿರುತ್ತದೆ? ದಯವಿಟ್ಟು ಮಾರ್ಗದರ್ಶನ ನೀಡಿ.**

Ph.D. ಮಾಡಬೇಕಾದಲ್ಲಿ ನೀವು ಮುಂದೆ Master Degree in Library and Information Science ಮಾಡಬೇಕಾಗುವುದು. ಇದಾದ ನಂತರ ನೀವು Ph.Dಗೆ ಪ್ರವೇಶ ಪಡೆಯಬಹುದು. ಇದು ಸುಮಾರು ೩-೫ ವರ್ಷಗಳ ಕಾಲ ಆಗಬಹುದು. ಇದನ್ನು ನೀವು ಯಾವುದೆ ವಿಶ್ವವಿದ್ಯಾಲಯದಿಂದ ಮಾಡಬಹುದು. ನಿಮ್ಮ ಹತ್ತಿರದ ವಿಶ್ವವಿದ್ಯಾಲಯವನ್ನು ಸಂಪರ್ಕಿಸಿರಿ.

ವಿ.ಜ್ಯೋತಿ, ಬೆಂಗಳೂರು.

**ಸರ್, ನಾನು Chartered Accountancy Course ಮಾಡುತ್ತಿದ್ದು, ಮುಂದೆ ನಾನು ಅಮೇರಿಕಾಕ್ಕೆ ಹೋಗಬೇಕೆಂಬ ತುಂಬಾ ಆಸೆ ಇದ್ಕೆ, ಅಲ್ಲಿ ಯಾವುದಾದರು Certificate Course ಮಾಡಲು ಅವಕಾಶವಿದೆಯೇ? ಇದ್ದರೆ ವಿವರಗಳನ್ನು ತಿಳಿಸಿರಿ.**

ನೀವು ಇಂಡಿಯಾದಲ್ಲಿ ಇದ್ದುಕೊಂಡೇ ಅಮೆರಿಕಾದ American Certified Internal Auditor Course ನ್ನು ಮಾಡಬಹುದಾಗಿದೆ. ಈ ಕೋರ್ಸಿನ ಹೆಚ್ಚಿನ ವಿವರಗಳು ಹಾಗೂ Prospectus ಗಾಗಿ Institute of Chartered financial Analysts of India, Banjara Hills, Hyderabad - 560 034 ಇವರನ್ನು ಸಂಪರ್ಕಿಸಿರಿ.

ಕೆ.ಆರ್. ಶರಣಪ್ಪ, ತುಮಕೂರು.

**ಸರ್, ನನಗೆ ಮೊದಲಿನಿಂದಲೂ ಪ್ರಾಣಿಗಳ Physiology-ಯಲ್ಲಿ ಆಸಕ್ತಿ ಇದ್ದು, ನಾನು ಪದವಿಯನ್ನು B.Sc. in Animal Scienceನಲ್ಲಿ ಮಾಡಿದ್ದೇನೆ. ಮುಂದೆ ಸ್ನಾತಕೋತ್ತರವನ್ನು Animal Physiologyಲ್ಲಿ ಮಾಡಬಹುದೆ? ಇದ್ದರೆ ಅದರ ಸಂಪೂರ್ಣ ವಿವರಗಳನ್ನು ಹಾಗೂ ಅದರ ವಿಳಾಸವನ್ನು ತಿಳಿಸಬೇಕಾಗಿ ತಮ್ಮಲ್ಲಿ ವಿನಂತಿಸಿಕೊಳ್ಳುತ್ತೇನೆ.**

ನೀವು ಅವಶ್ಯವಾಗಿ ಸ್ನಾತಕೋತ್ತರ ಪದವಿಯನ್ನು Animal Physiology ವಿಷಯದಲ್ಲಿ ಮುಂದುವರಿಸಬಹುದು. ಇದಕ್ಕೆ B.Sc in Animal Sciences ಮಾಡಿದವರು ಅರ್ಹರಾಗಿರುತ್ತಾರೆ. ಲಿಖಿತ ಪರೀಕ್ಷೆಯ ಮೂಲಕ ಆಯ್ಕೆ ಮಾಡಲಾಗುವುದು. ಪದವಿಯಲ್ಲಿ ಕನಿಷ್ಠ ಶೇಕಡ ೬೦ ಅಂಕಗಳೊಂದಿಗೆ ತೇರ್ಗಡೆಯಾಗಿರಬೇಕು. ಲಿಖಿತ ಪರಿಕ್ಷಾ ಕೇಂದ್ರಗಳಲ್ಲಿ ಬೆಂಗಳೂರು ಕೂಡಾ ಒಂದು. ಅರ್ಹ ಅಭ್ಯರ್ಥಿಗಳಿಗೆ ತಿಂಗಳಿಗೆ ಸುಮಾರು ೧೨೦೦-೧೮೦೦ರವರೆಗೆ ವಿದ್ಯಾರ್ಥಿ ವೇತನ ನೀಡಲಾಗುವುದು. ಇದಲ್ಲದೆ ಪ್ರವೇಶ ಪಡೆದ ಎಲ್ಲಾ ವಿದ್ಯಾರ್ಥಿಗಳಿಗೆ ೩೦೦೦ ರೂ. ನೀಡಲಾಗುವುದು. ಹೆಚ್ಚಿನ ವಿವರಗಳಿಗಾಗಿ Joint Director, National Dairy Research Institute, No.7, Hosur Road, Adugodi Bangalore-30 ಇವರನ್ನು ಸಂಪರ್ಕಿಸಬಹುದು.

ರವಿಕುಮಾರ, ನೆಲಮಂಗಳ

**ಸರ್, ನಾನು P.U.C. ತರಗತಿಯಲ್ಲಿ ಓದುತ್ತಿದ್ದು, ಮುಂದೆ ಉದ್ಯೋಗಾವಕಾಶಗಳಿರುವ ಕೋರ್ಸ್ ಬಗ್ಗೆ ತಿಳಿಸಿರಿ. Physiotheraphy ಬಗ್ಗೆ ತಿಳಿಸಿದರೆ ಒಳ್ಳೆಯದು.**

ನೀವು ಅಗತ್ಯವಾಗಿ P.U.C. ಆಧಾರದ ಮೇಲೆ Bachelor Degree in Physiotheraphy Courseನ್ನು ಮಾಡಬಹುದು. ಇದಕ್ಕೆ ಕನಿಷ್ಟ ಶೇಕಡ ೫೦ರಷ್ಟು ಅಂಕಗಳೊಂದಿಗೆ Physics, Chemestry and Biology ವಿಷಯಗಳಲ್ಲಿ ತೇರ್ಗಡೆಯಾಗಿರಬೇಕು. ಇದರ ಅವಧಿ ೩ ವರ್ಷದ್ದಾಗಿರುತ್ತದೆ. ನೀವು ಮಂಗಳೂರು ಅಥವಾ ನಿಮ್ಮ ಹತ್ತಿರದ ವಿಶ್ವವಿದ್ಯಾಲಯದಲ್ಲಿ ಹೆಚ್ಚಿನ ಮಾಹಿತಿಗಾಗಿ ವಿಚಾರಿಸಿ.

ಜೆ.ವಿಲಾಸ, ಮಾನವಿ.

**ಮಾನ್ಯರೇ, ನಾನು M.B.A. ಪದವಿಯನ್ನು ಮುಗಿಸಿ ಒಳ್ಳೆಯ ಉದ್ಯೋಗದಲ್ಲಿ ಇದ್ದೇನೆ. ಆದರೆ ಮೊದಲಿನಿಂದಲು ನನಗೆ ಡಾಕ್ಟರೇಟ್ ಪಡೆಯುವ ಆಸೆ ತುಂಬ ಇತ್ತು. ಈಗ ಇದು ಸಾಧ್ಯವೆ? ದಯವಿಟ್ಟು ತಿಳಿಸಿರಿ.**

ನೀವು ಅವಶ್ಯವಾಗಿ ಡಾಕ್ಟರೇಟ್ ಪದವಿಯನ್ನು ಈ ವಿಷಯದಲ್ಲಿ ಪಡೆಯಬಹುದು. ಇದಕ್ಕೆ ಅರ್ಹತೆ ಎಂದರೆ ಸ್ನಾತಕೋತ್ತರದಲ್ಲಿ ಶೇಕಡ ೫೦ರಷ್ಟು ಅಂಕಗಳೊಂದಿಗೆ Business Administration ವಿಷಯವನ್ನು ಅಭ್ಯಸಿಸಿರಬೇಕು. ವಿವರಗಳಿಗೆ ಮಂಗಳೂರು ಅಥವಾ ನಿಮ್ಮ ಹತ್ತಿರದ ಯಾವುದೇ ವಿಶ್ವವಿದ್ಯಾಲಯವನ್ನು ಸಂಪರ್ಕಿಸಬಹುದು.

## ಕಿಲ ಕಿಲ
## ಕೂಪನ್ - ೪

ಹೆಸರು..................................

ತರಗತಿ..................................

ವಯಸ್ಸು..................................

ತಂದೆ..................................

ತಾಯಿ..................................

ವಿಳಾಸ..................................

..................................

..................................

..................................

## ಕ್ವಿಜ್ - ೪

೧. ಕನ್ನಡದ ಮೊದಲ ಪೂರ್ಣ ಬಣ್ಣದ ಚಲನಚಿತ್ರ ಯಾವುದು?

..........................................

೨. ಹುಟ್ಟು ಕುರುಡರಾಗಿದ್ದೂ ಸಂಗೀತದಲ್ಲಿ ಸಾಧನೆಗೈದ ವ್ಯಕ್ತಿ ಯಾರು?

..........................................

೩. ದಕ್ಷಿಣ ಕನ್ನಡದಲ್ಲಿ ಇತ್ತೀಚೆಗೆ ಉದಯಿಸಿದ ಹೊಸ ಜಿಲ್ಲೆ ಯಾವುದು?

..........................................

೪. ಅನಿಲ್ ಕುಂಬ್ಳೆ ಯಾವ ರಾಜ್ಯದವರು?

..........................................

೫. ಜೆ.ಎಚ್.ಪಟೇಲರ ಚುನಾವಣಾ ಕ್ಷೇತ್ರ ಯಾವುದು?

..........................................

ಹೆಸರು..........................................................................

ವಿಳಾಸ..........................................................................

..........................................................................

..........................................................................

ಪಿನ್ ಕೋಡ್.............................. ದೂರವಾಣಿ..............................

ಪ್ರವೇಶ ಪತ್ರಗಳನ್ನು ಕಳುಹಿಸಬೇಕಾದ ವಿಳಾಸ :

ಸಂಪಾದಕರು, **ಬಿಸಿಲ ಬದುಕು**, ಅಂಚೆ ಪೆಟ್ಟಿಗೆ ೭೯೫೧, ಬಸವೇಶ್ವರ ನಗರ, ಬೆಂಗಳೂರು-೭೯.

## ಮನೆ -೧

**ಮನೆ** ಎಂದರೆ..........................................

ಹೆಸರು :

ವಿಳಾಸ :

ಸಹಿ

## ಜಾಣ ವಿದ್ಯಾರ್ಥಿ -೧

ಹೆಸರು :..........................................

ತಂದೆ :..........................................

ಅಂಚೆ ವಿಳಾಸ :..........................................

..........................................

..........................................

ಶಾಲೆ / ಕಾಲೇಜು : ..........................................

ತರಗತಿ : ..........................................

೬೦ ರೂ. ಎಂ.ಓ. ಮಾಡಿದ ದಿನಾಂಕ :.................

ವಿದ್ಯಾರ್ಥಿ ಸಹಿ

ಮುಖ್ಯೋಪಾಧ್ಯಾಯರು / ಪ್ರಾಂಶುಪಾಲರ ಸಹಿ - ಸೀಲು

# ಇಗೋ ಇದು ಚನ್ನಗಿರಿ

- ಕರ್ನಾಟಕದ ಮುಖ್ಯಮಂತ್ರಿ ಜೆ.ಎಚ್.ಪಟೇಲರ ತವರೂರಾದ ಕಾರಿಗನೂರು ಚನ್ನಗಿರಿ ತಾಲೂಕಿನಲ್ಲಿದೆ. ಅವರ ಸಮಾಜವಾದಿ ಚಿಂತನೆ ಟಿಸಿಲೊಡೆದದ್ದೇ ಈ ನೆಲದಲ್ಲಿ.
- ಬೃಹತ್ ಬ್ರಿಟಿಷ್ ವಿರೋಧಿ ಬಂಡಾಯ ಸಂಘಟಿಸಿದ್ಧ ಧೋಂಡ್‌ಜಿ ವಾಘ್ (ಧೋಂಡಿಯಾ ಪವಾರ್) ಚನ್ನಗಿರಿಯವರು.
- ''ಶಿವಾಜಿ''ಯ ತಂದೆ ''ಷಹಜಿ ರಾಜನ'' ಸಮಾಧಿ ಇರುವ ಹೊದಿಗೆರೆ ಚನ್ನಗಿರಿ ತಾಲ್ಲೂಕಿನಲ್ಲಿದೆ.
- ''ಸೂಳೆಕೆರೆ'' (ಶಾಂತಿಸಾಗರ) ಎಂದು ಹೆಸರು ಪಡೆದ ದಕ್ಷಿಣ ಭಾರತದ ಎರಡನೆಯ ದೊಡ್ಡಕೆರೆ (ಸುತ್ತಳತೆ ೬೪ ಕಿ.ಮೀ.) ಚನ್ನಗಿರಿ ತಾಲ್ಲೂಕಿನಲ್ಲಿದೆ.
- ಐತಿಹಾಸಿಕ ''ಪುಷ್ಕರಣಿ'' ಇರುವ ಸಂತೇಬೇನ್ನೂರು ಚನ್ನಗಿರಿ ತಾಲ್ಲೂಕಿನಲ್ಲಿದೆ.
- ಚನ್ನಗಿರಿ ತಾಲ್ಲೂಕಿನ ಬಸವಾಪಟ್ಟಣ ''ಚತುರ್ಥ ಮಂತ್ರಾಲಯ''ವೆನಿಸಿದೆ. ಇಲ್ಲಿಯೇ ಹಾಲಸ್ವಾಮಿಗಳ ಮುಳ್ಳು ಗದ್ದಿಗೆ ಹಾಗೂ ಗವಿ ಇದೆ.
- ಜಿಲ್ಲೆಯ ಪ್ರಮುಖ ಕಾಡುಗಳಲ್ಲಿ ಒಂದಾದ ''ಜೋಳದಹಾಳು'' ಕಾಡು ಚನ್ನಗಿರಿ ತಾಲ್ಲೂಕಿನಲ್ಲಿದೆ.
- ಖ್ಯಾತ ಸಂಶೋಧಕ, ಲೇಖಕ, ''ಕನ್ನಡ ಶಕ್ತಿ ಕೇಂದ್ರದ ಅಧ್ಯಕ್ಷ'' ಡಾ. ಎಂ.ಚಿದಾನಂದಮೂರ್ತಿ ಚನ್ನಗಿರಿ ತಾಲ್ಲೂಕಿನ ಹಿರೇಕೋಗಲೂರಿನವರು.
- ಕವಿಗಳಾದ ಸಮತೀಂದ್ರ ನಾಡಿಗರ ದೇವರಹಳ್ಳಿ, ಹೆಚ್.ಎಸ್. ವೆಂಕಟೇಶಮೂರ್ತಿ ಅವರ ಹೊದಿಗೆರೆ ಇರುವುದೂ ಚನ್ನಗಿರಿ ತಾಲ್ಲೂಕಿನಲ್ಲಿ
- ಅನಕ್ಷರಸ್ಥ, ಜನಪ್ರಿಯ ಜಾನಪದ ಹಾಡುಗಾರ ''ಯುಗಧರ್ಮರಾಮಣ್ಣ'' ಚನ್ನಗಿರಿ ತಾಲ್ಲೂಕಿನ ''ಸಿದ್ಧನಮಠ'' ಗ್ರಾಮದವರು.
- ೧೯೯೫-೯೬ನೇ ಸಾಲಿನ ರಾಜ್ಯ ಪ್ರಶಸ್ತಿ ಪಡೆದ ಶಿಕ್ಷಕ ಎ.ಎಸ್.ಹನುಮಾನ್ ಚನ್ನಗಿರಿ ತಾಲ್ಲೂಕಿನ ದೊಡ್ಡಬ್ಬಿಗೆರೆಯವರು.
- ಚನ್ನಗಿರಿಯ ''ಮಾವಿನತವರು'' ದೊಡ್ಡಬ್ಬಿಗೆರೆ.

*(ಸಂಗ್ರಹ: **ಪುನಬಗಟ್ಟಿ ಕೊಟ್ರಯ್ಯ**)*

## ಬಿಸಿಲ ಬದುಕು ಓದುಗರಿಗೆ

# ವಿಶೇಷ ಕೊಡುಗೆ

# 25% ರಿಯಾಯಿತಿ ! ಅಂಚೆ ಉಚಿತ !!

ಬದುಕಿನ ಎಲ್ಲಾ ಮಗ್ಗುಲುಗಳ ಬಗೆಗೆ ಆಸಕ್ತಿ, ಆರೋಗ್ಯಕಾರಿ ದೃಷ್ಟಿಕೋನ, ರಚನಾತ್ಮಕ ಚಿಂತನೆ ಬೆಳೆಸುವ ನಿಟ್ಟಿನಲ್ಲಿ ನಿರತವಾಗಿರುವ ಈ ನಿಮ್ಮ ಪತ್ರಿಕೆ ತನ್ನ ಓದುಗರಿಗೆ ಸದಭಿರುಚಿಯ ಸಾಹಿತ್ಯ ಕೃತಿಗಳನ್ನು ಶೇ. 25ರಷ್ಟು ವಿಶೇಷ ರಿಯಾಯಿತಿ ದರದಲ್ಲಿ ಒದಗಿಸಲು ಮುಂದಾಗಿದೆ.

**ನೆನಪಿಡಿ** : ಇದು ಕೇವಲ ''**ಬಿಸಿಲ ಬದುಕು**'' ಓದುಗರಿಗೆ ಮಾತ್ರ ಲಭ್ಯವಿರುವ ಸೌಲಭ್ಯ.

**ನೀವು ಮಾಡಬೇಕಾದುದು ಇಷ್ಟು :**

- ❑ ಕೆಳಗಿನ ಪಟ್ಟಿಯಲ್ಲಿ ನಿಮಗೆ ಬೇಕಾದ ಪುಸ್ತಕಗಳನ್ನು ಆಯ್ಕೆ ಮಾಡಿ ಕೊಳ್ಳಿರಿ. ನೂರು ರೂಪಾಯಿಗಿಂತ ಹೆಚ್ಚು ಮೊತ್ತದ ಪುಸ್ತಕಗಳಿಗೆ ಬೇಡಿಕೆ ಸಲ್ಲಿಸುವವರಿಗೆ ಮಾತ್ರ ಈ ಸೌಲಭ್ಯ.
- ❑ ನೀವು ಆಯ್ಕೆ ಮಾಡಿಕೊಂಡ ಪುಸ್ತಕಗಳ ಒಟ್ಟು ಮೊತ್ತದಲ್ಲಿ ಶೇಕಡಾ 25 ರಿಯಾಯಿತಿ ಕಳೆದು ಉಳಿದ ಮೊತ್ತವನ್ನು ಎಂ.ಓ. ಅಥವಾ ''**ಅಂಕುರ ಪ್ರಕಾಶನ**''ದ ಹೆಸರಿನಲ್ಲಿ ಬೆಂಗಳೂರಿನಲ್ಲಿ ಸಂದಾಯವಾಗುವಂತೆ ಡಿ.ಡಿ. ಮೂಲಕ ಕಳಿಸಿಕೊಡಿ.
- ❑ ಹಣ ತಲುಪಿದ ತಕ್ಷಣ ರಿಜಿಸ್ಟರ್ಡ್ ಅಂಚೆ ಮೂಲಕ ಪುಸ್ತಕ ಕಳಿಸಲಾಗುವುದು.

## ಲಭ್ಯವಿರುವ ಪುಸ್ತಕಗಳು

| | | | | |
|---|---|---|---|---|
| 01. | ಒಳಗೆ ಬಾ, ಅತಿಥಿ! (ಕಾದಂಬರಿ) | - ಉಷಾ ನವರತ್ನರಾಮ್ | ರೂ. | 60.00 |
| 02. | ಶಿಬಿರದ ದಾರಿಯಲ್ಲಿ (ಅನು.ಕಥೆಗಳು) | - ಜಿ.ಎಸ್. ಸದಾಶಿವ | ರೂ. | 45.00 |
| 03. | ಮೊಕಾರ (ಕಥೆ) | - ಕುಕ್ಕರಹಳ್ಳಿ ಬಸವರಾಜ | ರೂ. | 40.00 |
| 04. | ನೀರು (ಕಾದಂಬರಿ) | - ನಾ. ಡಿಸೋಜ | ರೂ. | 48.00 |
| 05. | ಚಕ್ರತೀರ್ಥ (ಕವನ) | - ವಿವಿಧ ಕವಿಗಳು | ರೂ. | 12.00 |
| 06. | ನಾರಿಹಳ್ಳದ ದಂಡೆಯಲ್ಲಿ (ಕಥೆ) | - ಚಂದ್ರಕಾಂತ ವಡ್ಡು | ರೂ. | 15.00 |
| 07. | ನಕ್ಷತ್ರ ಕಡ್ಡಿ (ಹನಿಗವನ) | - ಗೋಪಾಲಕೃಷ್ಣ ವಂಡ್ಸೆ | ರೂ. | 35.00 |
| 08. | ಬಯಲು ಆಲಯ (ಕಾದಂಬರಿ) | - ರೇಖಾ ಕಾಖಂಡಕಿ | ರೂ. | 52.00 |
| 09. | ಪಯಣದ ಹಾದಿ (ಕಾದಂಬರಿ) | - ರೇಖಾ ಕಾಖಂಡಕಿ | ರೂ. | 38.00 |
| 10. | ಕಲ್ಲರಳಿ ಹೂವಾಗಿ (ಕಾದಂಬರಿ) | - ರೇಖಾ ಕಾಖಂಡಕಿ | ರೂ. | 45.00 |
| 11. | ಮಣ್ಣಿನ ಬಳೆ ಮತ್ತು ಇತರ ಕಥೆಗಳು (ಕಥೆ) | - ಶಾಂತಾರಾಮ ಸೋಮಯಾಜಿ | ರೂ. | 28.00 |
| 12. | ಮಾಂಡೋವಿ (ಕಾದಂಬರಿ) | - ರವಿ ಬೆಳಗೆರೆ | ರೂ. | 60.00 |
| 13. | ಅನಾಥ ಪಕ್ಷಿಯ ಕಲರವ (ಕಥೆ) | - ವೀರಭದ್ರ | ರೂ. | 125.00 |
| 14. | ಮಾತು (ಸೂಕ್ತಿ ಸಂಗ್ರಹ) | - ಟಿ.ವಿ. ವೆಂಕಟರಮಣಯ್ಯ | ರೂ. | 20.00 |
| 15. | ವಿವಾಹ (ಸೂಕ್ತಿ ಸಂಗ್ರಹ) | - ಟಿ.ವಿ. ವೆಂಕಟರಮಣಯ್ಯ | ರೂ. | 25.00 |
| 16. | ಆಧುನಿಕ ಗಾದೆಗಳು (ಗಾದೆ) | - ಟಿ.ವಿ. ವೆಂಕಟರಮಣಯ್ಯ | ರೂ. | 25.00 |
| 17. | ಕದಳೀವನ ಕರ್ಪೂರ (ಪರಿಸರ ಲೇಖನ) | - ವಿವಿಧ ಲೇಖಕರು | ರೂ. | 50.00 |
| 18. | ಕ್ಯಾಪ್ಸೂಲಗಿತ್ತಿ (ಲೇಖನ) | - ನಾಗೇಶ ಹೆಗಡೆ | ರೂ. | 30.00 |
| 19. | ನೀವು ಕಾಣರೆ ನೀವು ಕಾಣರೆ (ಕವನ) | - ಎಚ್.ಎಸ್.ಮುಕ್ತಾಯಕ್ಕ | ರೂ. | 35.00 |
| 20. | ಮಲ್ಲಿನಾಥನ ಧ್ಯಾನ (ಲೇಖನ) | - ವೈದೇಹಿ | ರೂ. | 80.00 |
| 21. | ಅಮೃತ ಬಳ್ಳಿ ಕಷಾಯ (ಕಥೆ) | - ಜಯಂತ ಕಾಯ್ಕಿಣಿ | ರೂ. | 60.00 |



**ಅಂಕುರ ಪ್ರಕಾಶನ**

473, 1ನೇ ಕ್ರಾಸ್, 1ನೇ ಬ್ಲಾಕ್, 3ನೇ ಸ್ಟೇಜ್, ವಾಟರ್ ಟ್ಯಾಂಕ್ ಬಸ್ ಸ್ಟಾಪ್ ಬಳಿ, ಬಸವೇಶ್ವರ ನಗರ, ಬೆಂಗಳೂರು-560 079.

# ಐ.ಎಫ್.ಎಸ್. ತೇರ್ಗಡೆಯಾದ ಹುಬ್ಬಳ್ಳಿಯ ನಂದಿನಿ

ಅಂದು ಗುರುವಾರ, ೭-೮-೧೯೯೭ ಮುಂಜಾನೆ ೧೦ ಗಂಟೆಯ ಸಮಯ. ಹುಬ್ಬಳ್ಳಿಯ ಮಧುರಾ ಕಾಲನಿಯ 'ಬಿ' ಕಟ್ಟಡದ ೧೨೪ ಸಂಖ್ಯೆಯ ಮನೆಯ ಮುಂದೆ ಪ್ರತೀಕ್ಷೆ ಮಾಡುತ್ತಾ ನಿಂತೆ.

೧೯೯೬-೯೭ರ ಅಖಿಲ ಭಾರತ ಸೇವೆಯ ಪರೀಕ್ಷೆಯಲ್ಲಿ ಪ್ರಥಮ ಪ್ರಯತ್ನದಲ್ಲಿಯೇ ಯಶಸ್ಸು ಗಳಿಸಿ, ೪೬ನೇ ಸ್ಥಾನ ಪಡೆದು, ಮಹಿಳೆಯರಲ್ಲಿ ಹನ್ನೊಂದನೆಯವರಾಗಿ ಘೋಷಿತರಾದ ಹುಬ್ಬಳಿಯ ಹೆಮ್ಮೆಯ ಹುಡುಗಿಯನ್ನು ಸಂದರ್ಶಿಸಿ ಅವರ ಮುಖಾಂತರ 'ಬಿಸಿಲ ಬದುಕು' ಓದುಗರಾದ ತರುಣ-ತರುಣಿಯರಿಗೆ ಸ್ಫೂರ್ತಿ ತುಂಬುವುದು ನನ್ನ ಉದ್ದೇಶವಾಗಿತ್ತು.

ಎರಡು ಲಕ್ಷ ಅಭ್ಯರ್ಥಿಗಳು ಪೂರ್ವಭಾವಿ ಪರೀಕ್ಷೆಗೆ ಕಟ್ಟಿದ್ದರೆ ಅವರಲ್ಲಿ ಮುಖ್ಯ ಪರೀಕ್ಷೆಗೆ ಅರ್ಹತೆ ಪಡೆದವರು ೬೦೦೦ ಅಭ್ಯರ್ಥಿಗಳು. ನವೆಂಬರ್ ೯೬ರಲ್ಲಿ ಜರುಗಿದ ಮುಖ್ಯ ಪರೀಕ್ಷೆಯಲ್ಲಿ ಉತ್ತೀರ್ಣರಾದವರು ೨೦೦೦ ಜನ. ಇವರನ್ನು ಸಂದರ್ಶಿಸಿದ ಕೇಂದ್ರ ಲೋಕಸೇವಾ ಆಯೋಗ ೩೩೩ ಅಭ್ಯರ್ಥಿಗಳನ್ನು ನೇಮಕಾತಿಗೆ ಅರ್ಹರೆಂದು ಘೋಷಿಸಿತು. ಇಷ್ಟೊಂದು ತುರುಸಿನ ಸ್ಪರ್ಧೆಯಲ್ಲಿ ಗೆದ್ದುಬಂದ ಕೆ. ನಂದಿನಿಯ ಸಾಧನೆ ನಿಜಕ್ಕೂ ಸಣ್ಣದಲ್ಲ.

ಬಾಗಿಲು ತೆರೆದುಕೊಂಡಾಗ ನಾನು ಕಂಡದ್ದು ನೆರೆಮನೆಯ ಹುಡುಗಿಯಂತಹ, ಸರಳ, ನಿರಾಡಂಬರ, ಮುಗ್ಧ ಮುಖದ ತರುಣಿಯನ್ನು. ನಾನೆಣಿಸಿದ, ತರುಣಿಗೆ ಸಹಜವಾದ, ಹಮ್ಮುಬಿಮ್ಮಿನ ಬಿಂಕ-ಬಿನ್ನಾಣದ, ವನಪು-ವೈಯಾರದ, ನಗರದ ಅಸಹಜ ನಯ-ನಾಜೂಕಿನ ತರುಣಿ ಅಲ್ಲಿರಲಿಲ್ಲವಾದುದರಿಂದ ಖಚಿತ ಪಡಿಸಿಕೊಳ್ಳಬೇಕಾಯಿತು: "ನೀವೇ ತಾನೇ ಕುಮಾರಿ ನಂದಿನಿ?" ಎಂದು. "ಪ್ರತಿ ಸಲ ಇದು ಹೀಗೇ ಆಗುತ್ತದೆ" ಎಂದು ಎಳ್ಳಷ್ಟು ಅಳುಕದೇ ಆ ತರುಣಿ ಹೇಳಿದಾಗ, ಸಮೃದ್ಧಿ ಸಂಕೇತವಾದ, ವಶಿಷ್ಠ ಋಷಿಗಳ ಹಸುವಿನ, ಪರರನ್ನು





'ಭಾರತೀಯ ವಿದೇಶ ಸೇವೆಗೆ ಉತ್ತರ ಕರ್ನಾಟಕದ ಪ್ರಪ್ರಥಮ ಕೊಡುಗೆಯಾದ ಹುಬ್ಬಳ್ಳಿಯ ಕೊತ್ತಗುಡಂ ನಂದಿನಿ ಯಶಸ್ಸು ಸವಿದದ್ದು ಹೇಗೆ?

ಪ್ರತಿಷ್ಠಿತ ಐ.ಎಫ್.ಎಸ್. ವಿಜೇತೆ 'ಬಿಸಿಲ ಬದುಕು' ಪತ್ರಿಕೆಯೊಂದಿಗಿನ ವಿಶೇಷ ಸಂದರ್ಶನದಲ್ಲಿ ತನ್ನ ಯಶಸ್ಸಿನ ಗುಟ್ಟನ್ನು ಬಿಟ್ಟುಕೊಟ್ಟಿದ್ದಾರೆ. ಅವರ ಸಾಧನೆ ಸ್ಪರ್ಧಾತ್ಮಕ ಪರೀಕ್ಷೆ ಕಟ್ಟುವ ಅಭ್ಯರ್ಥಿಗಳಿಗೆ ಸ್ಫೂರ್ತಿದಾಯಕವಾಗಿದೆ.

**○ ಡಾ. ಟಿ.ಕೆ. ತಾಪಸ್**



ಆನಂದದಲ್ಲಿ ಮುಳುಗಿಸುವ ಈ 'ನಂದಿನಿ' ಹೆಸರು ಇವರಿಗೆ ಅನ್ವರ್ಥಕವೆಂಬ ಭಾವನೆ ಮನದಲ್ಲಿ ಮಿಂಚಿತು. 'ದಯವಿಟ್ಟು ಒಳಗೆ ಬನ್ನಿ' ಎಂಬ ಆದರ.

ಇಷ್ಟು ಒಳ್ಳೆಯ ನಡತೆ ಇರಬೇಕಾದರೆ ಮನೆಯ ವಾತಾವರಣ ಇದಕ್ಕೆ ಮೊದಲ ಕಾರಣವಿರಲೇಬೇಕೆಂದು ಖಚಿತವಾಯಿತು. ಆಗ ಹಸನ್ಮುಖರಾದ ತಂದೆ ಕೆ. ಗುರುರಾಜರಾವ್ ಹಾಗೂ ತಾಯಿ ಪ್ರೇಮಲತಾ ಎದುರಾದರು. ಅವರೊಡನೆಯ ಮಾತುಕತೆಯಲ್ಲಿ ವಿವರಗಳು ಲಭ್ಯವಾದವು.

ಆಂಧ್ರಪ್ರದೇಶದ ಕಮ್ಮಾಮ್ ಜಿಲ್ಲೆಯ ಕೊತ್ತಗುಡಂ ಈ ಕುಟುಂಬದ ಮೂಲಸ್ಥಾನ. ರಾಜಕೀಯ ಶಾಸ್ತ್ರದಲ್ಲಿ ಎಂ. ಎ. ಮುಗಿಸಿದ ಗುರುರಾಜರಾಯರು ಭಾರತೀಯ ಜೀವ ವಿಮಾ ನಿಗಮದಲ್ಲಿ ಹಿರಿಯ ಶಾಖಾಧಿಕಾರಿಗಳಾಗಿ, ನಂತರ, ಅಧಿಕಾರಿಗಳ ತರಬೇತಿ ಸಂಸ್ಥೆಯಲ್ಲಿ ಬೋಧಕರಾಗಿ ಅನೇಕ ಸ್ಥಳಗಳಲ್ಲಿ ಸೇವೆ ಸಲ್ಲಿಸಿ, ವಿಶ್ರಾಂತ ಜೀವನವನ್ನು ಹುಬ್ಬಳ್ಳಿಯ ಸ್ವಂತ ಮನೆಯಲ್ಲಿ ಸಾಗಿಸುತ್ತಿರುವಾಗಲೂ ಹುಟ್ಟುಹಾಕಿದ್ದು ಅದರ ನಿರ್ದೇಶಕರಾಗಿದ್ದಾರೆ. ಮಾನವ ಸಂಪನ್ಮೂಲಗಳ ತರಬೇತಿಗೆ ತಮ್ಮನ್ನು ಸಮರ್ಪಿಸಿಕೊಂಡಿದ್ದಾರೆ.

ಮುಕ್ತ ವಿಶ್ವವಿದ್ಯಾಲಯದಿಂದ ಇತಿಹಾಸದಲ್ಲಿ ಬಿ.ಎ. ಪಡೆದ ಗೃಹಿಣಿ ಪ್ರೇಮಲತಾ ಬೆಂಗಳೂರಿನವರಾದರೂ ಬೆಳೆದುದು ಬಳ್ಳಾರಿಯಲ್ಲಿ. ದಂಪತಿಗಳಿಬ್ಬರ ಮಾತೃಭಾಷೆ ಕನ್ನಡ.

ನಂದಿನಿ ಮೂರು ಗಂಡು ಮಕ್ಕಳ ನಂತರ ಜನಿಸಿದವರು. ಎಂ.ಕಾಮ್., ಎಂ.ಬಿ.ಎ. ಮಾಡಿದ ಹಾಗೂ ಎಂ.ಕಾಮ್ ಮಾಡಿದ ಮೊದಲ ಮತ್ತು ಮೂರನೆಯ ಮಕ್ಕಳು ಅಬುಧಾಬಿಯಲ್ಲಿ ಉತ್ತಮ ನೌಕರಿಯಲ್ಲಿದ್ದರೆ, ಬಿ.ಈ. (ಮೆಕ್ಯಾನಿಕಲ್) ಪದವೀಧರರಾದ ಎರಡನೆಯ ಮಗ ಮುಂಬೈಯಲ್ಲಿ ಸೇವೆಯಲ್ಲಿದ್ದಾರೆ. ಈ ಕುಟುಂಬದ ಹೆಮ್ಮೆಯ ಕೊಡುಗೆ ಕುಮಾರಿ ನಂದಿನಿ. ಚಹದೊಡನೆ

ಸಂದರ್ಶನಕ್ಕೆ ಸಿದ್ಧರಾಗಿ ಆತ್ಮವಿಶ್ವಾಸದಿಂದ ಬೀಗುತ್ತಾ ಬಂದರು. ಸಂದರ್ಶನದ ಕೆಲ ತುಣುಕುಗಳು :

**ನೀವು ಉತ್ತರ ಕರ್ನಾಟಕದ ಕೊಡುಗೆ ಎಂದು ಹೇಳಬಹುದೇ?**

ನಿರ್ವಿವಾದವಾಗಿಯೂ. ಅಲ್ಲದೆ ಉತ್ತರ ಕರ್ನಾಟಕದ ಪ್ರಪ್ರಥಮ ಕೊಡುಗೆ ಎಂದೂ ಹೇಳಬಹುದು. ೧೯೬೩ರ ಪ್ರಜಾರಾಜ್ಯ ದಿನದ ಮಧ್ಯ ರಾತ್ರಿ ಆಂಧ್ರಪ್ರದೇಶದಲ್ಲಿ ನಾನು ಜನಿಸಿದ್ದರೂ ಸಹ ಪೂರ್ವಪ್ರಾಥಮಿಕ ಶಿಕ್ಷಣದಿಂದ ಪದವಿ ಪೂರ್ವ ಶಿಕ್ಷಣದವರೆಗೂ ಧಾರವಾಡ, ಗುಲಬರ್ಗಾ, ಬಾಗಲಕೋಟೆಗಳಲ್ಲೂ, ಸ್ನಾತಕ ಶಿಕ್ಷಣವನ್ನು ಹುಬ್ಬಳ್ಳಿಯ ಶ್ರೀ ಕಾಡಸಿದ್ಧೇಶ್ವರ ಮಹಾವಿದ್ಯಾಲಯದಲ್ಲೂ ಪೂರೈಸಿರುವೆ. ಪದವಿ ಪೂರ್ವ ಪರೀಕ್ಷೆಯಲ್ಲಿ ಶೇಕಡಾ ೮೪ ಗುಣಗಳನ್ನು ಪಡೆದು ರಾಜ್ಯಕ್ಕೆ ಪ್ರಥಮ ಸ್ಥಾನವನ್ನು; ಇತಿಹಾಸ, ರಾಜಕೀಯ ಶಾಸ್ತ್ರ ಮತ್ತು ಮನಃಶಾಸ್ತ್ರಗಳೊಡನೆ ಪಡೆದ ಸ್ನಾತಕ ಪದವಿಯ ಇತಿಹಾಸದಲ್ಲಿ ಚಿನ್ನದ ಪದಕದೊಡನೆ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಪ್ರಥಮ ಸ್ಥಾನವನ್ನು (೧೯೯೩) ಗಳಿಸಿರುವೆ.

**ನಂತರ?**

ಮುಂಬೈ ವಿಶ್ವವಿದ್ಯಾಲಯದಿಂದ ರಾಜಕೀಯ ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯಲ್ಲಿ (೧೯೯೫) ಪ್ರಥಮಸ್ಥಾನಗಳಿಸಿದ ನಂತರ, ದೆಹಲಿಯ ಜವಾಹರಲಾಲ್ ನೆಹ್ರು ವಿಶ್ವವಿದ್ಯಾಲಯದಲ್ಲಿ ಈಗ ತಾನೆ (೧೯೯೩) ಎಂ. ಫಿಲ್ ಪದವಿಗಾಗಿ 'ಶೀತಲ ಯುದ್ಧೋತ್ತರ ಅವಧಿಯಲ್ಲಿ ಭಾರತ ರಶಿಯಗಳ ಸಂಬಂಧ' ಎಂಬ ವಿಷಯ ಆಯ್ದು ಪ್ರೌಢ ಪ್ರಬಂಧ ಸಲ್ಲಿಸಿರುವೆ.

**ಮತ್ತಾವ ರಂಗಗಳಲ್ಲಿ ಅನುಭವ ಗಳಿಸಿರುವಿರಿ?**

ಶೀಘ್ರಲಿಪಿ, ಬೆರಳಚ್ಚು ಪರೀಕ್ಷೆಗಳನ್ನು, ಉಪನ್ಯಾಸಕರಿಗಾಗಿರುವ ರಾಷ್ಟ್ರೀಯ ಅರ್ಹತಾ ಪರೀಕ್ಷೆಯನ್ನು ಪೂರೈಸಿರುವೆ. ಎನ್.ಸಿ.ಸಿ.ಯಲ್ಲಿ 'ಸಿ' ಪ್ರಮಾಣ ಪತ್ರ ಗಳಿಸಿರುವೆ

**ನಿಮ್ಮ ಇನ್ನಿತರ ಸಾಧನೆಗಳ ಬಗೆಗೆ ಹೇಳುವಿರಾ?**

೧. ೧೯೮೯-೯೦ರಲ್ಲಿ ಜರುಗಿದ ವಿಶ್ವ ವಿದ್ಯಾಲಯದ ಯುವಜನ ಮೇಳದಲ್ಲಿ ಬಾಗಲುಕೋಟೆಯನ್ನು ಪ್ರತಿನಿಧಿಸಿ, ವಿಶ್ವ ವಿದ್ಯಾಲಯದ ವೈಯಕ್ತಿಕ ಸರ್ವೋತ್ಕೃಷ್ಟ ಸ್ಥಾನವನ್ನು ಗಳಿಸಿದೆ.
೨. ೧೯೯೦ರ ಪ್ರಜಾರಾಜ್ಯೋತ್ಸವ ಕವಾಯತಿಯಲ್ಲಿ ಪ್ರಧಾನ ಮಂತ್ರಿಗಳ ಅಖಿಲ ಭಾರತ ರಜತ ಪದಕ ಪಡೆದಿದ್ದೇನೆ.
೩. ೧೯೯೧-೯೨ರಲ್ಲಿ ಯುವಜನ ವಿನಿಮಯ ಕಾರ್ಯಕ್ರಮದಡಿಯಲ್ಲಿ ೬ ತಿಂಗಳು ಕೆನಡಾ ದೇಶದಲ್ಲಿ ವಾಸಿಸಿ ಬಂದಿದ್ದೇನೆ.
೪. ನಾನು ಕರ್ನಾಟಕ ಸರಕಾರದ ವಿದ್ಯಾರ್ಥಿ ವೇತನಕ್ಕಾಗಿ ಅರ್ಹತೆ ಪಡೆದದ್ದಲ್ಲದೆ, ದೆಹಲಿಯಲ್ಲಿದ್ದಾಗ ಮಾಸಿಕ ರೂ. ೨೫೦೦ರ ವಿಶ್ವವಿದ್ಯಾಲಯ ಧನಸಹಾಯ ಆಯೋಗದ ವಿದ್ಯಾರ್ಥಿ ವೇತನಿಯೂ ಆಗಿದ್ದೆ.

**ನಿಮ್ಮ ಹವ್ಯಾಸಗಳು?**

ಆದ್ಯತೆಯ ಮೇರೆಗೆ ಹೇಳಬೇಕೆಂದರೆ
೧. ಸಾಧ್ಯವಿದ್ದಷ್ಟು ಒಳ್ಳೆಯ ಸ್ನೇಹಿತರನ್ನು ಗಳಿಸುವುದು.
೨. ಓದಿನ ಹಸಿವನ್ನು ಹಿಂಗಿಸುವುದು.
೩. ಇಂಗ್ಲಿಷಿನಲ್ಲಿ ಲೇಖನ ಬರೆಯುವುದು.

ಅಖಿಲ ಭಾರತ ಸೇವೆಗಳಿಗೆ ನೀವು ಆಯ್ಕೆಯಾದುದು ತಿಳಿದಾಗ ನಿಮಗೆ ಏನನ್ನಿಸಿತು?

ಮೊದಲು ಸಂದೇಹ, ನಂತರ ಆಶ್ಚರ್ಯ, ಕೊನೆಗೆ ಆನಂದವೆನ್ನಿಸಿತು.

**ಹಾಗೇಕೆ?**

ಏಕೆಂದರೆ ಮೊದಲ ಪ್ರಯತ್ನದಲ್ಲಿಯೇ ಆಯ್ಕೆಯಾಗುವುದು ಅತಿ ವಿರಳ. ಹಾಗಾಗಿ ೨೮ ವರ್ಷ ಪೂರ್ತಿಗೊಳ್ಳುವವರೆಗೆ ನಾಲ್ಕೂ ಪ್ರಯತ್ನಗಳಿಗೆ ಅವಕಾಶ ಕೊಟ್ಟಿದ್ದಾರೆ. ಮುಖ್ಯ ಪರೀಕ್ಷೆಗೆ ವಿಷಯ ಆಯ್ದುಕೊಳ್ಳಲು ೨೦ ದಿನ ತೆಗೆದುಕೊಂಡ ನಾನು ಕೊನೆಗೂ ತೆಗೆದುಕೊಂಡುದು ನಾನು ಇನ್ನೂವರೆಗೂ ಅಭ್ಯಾಸ ಮಾಡದಿದ್ದ 'ಸಮಾಜ ಶಾಸ್ತ್ರ'. ನನಗೆ ಉತ್ತೀರ್ಣವಾಗುವ ಶಕ್ಯತೆಯೇ ಕಾಣದಿದ್ದುದರಿಂದ ೨೩ ದಿನಗಳಲ್ಲಿ ಆರಾಮವಾಗಿ ಅಭ್ಯಸಿಸಿದೆ. ೧೦೦ನೆಯ ಸ್ಥಾನ ಬರಬಹುದಾಗಿ ತಿಳಿದಿದ್ದೆ. ಪರಿಣಾಮ ಘೋಷಿತವಾದಾಗ ಸ್ವಾಭಾವಿಕವಾಗಿ ಸಂದೇಹ, ಆಶ್ಚರ್ಯ ನಂತರ ಆನಂದ ಉಂಟಾದವು. ಈ ಪರೀಕ್ಷೆಯ ಜೊತೆ ಜೊತೆಗೇ ಎಂ.ಫಿಲ್.ಗೆ ಸಹ ಕಟ್ಟುವುದಿತ್ತಲ್ಲ!

**ಸಂದರ್ಶನಕ್ಕಾಗಿ ಏನು ಸಿದ್ಧತೆ ಮಾಡಿದಿರಿ?**

ನಮಗೆಲ್ಲ ತಂದೆಯಿಂದ ಬಂದ ಬಳುವಳಿ ಓದಿನ, ಚರ್ಚೆಯ ಗೀಳು. ತಾಯಿಯಿಂದ ಉತ್ತೇಜನ. ತಮ್ಮ ಪ್ರತಿ ವೇತನ ದಿನದಂದು ಪುಸ್ತಕ ಖರೀದಿಸುವದು, ನಿರಂತರ ಓದುವದು, ನಮಗೆ ಓದುವಂತೆ ಪ್ರೇರೇಪಿಸುವುದು ಅವರು ಯಾವಾಗಲೂ ಮಾಡಿದ್ದಾರೆ. ಅವರ ಪುಸ್ತಕ ಸಂಗ್ರಹ ೩೦೦೦ ಗ್ರಂಥಗಳಷ್ಟಿದ್ದುದು ವರ್ಗಾವಣೆಗಳ ಬವಣೆಗೆ ಸಿಲುಕಿ ೧೦೦೦ಕ್ಕಿಳಿದಿದೆ. ಪ್ರತಿ ಮಧ್ಯಾಹ್ನ, ರಾತ್ರಿ ಊಟದ ಮೇಜಿನ ಸುತ್ತ ಊಟದ ನಂತರ ಒಂದು ಗಂಟೆ ನಿಯಮಿತ ಚರ್ಚೆಯಲ್ಲಿ ಅವರು ನಮ್ಮನ್ನು ತೊಡಗಿಸುತ್ತಿದ್ದುದರಿಂದ ಈ ಸಂದರ್ಶನಕ್ಕಾಗಿಯೇ ಎಂದು ನಾನು ವಿಶೇಷವಾಗಿ ಸಿದ್ಧವಾಗುವ ಅವಶ್ಯಕತೆ ಬೀಳಲಿಲ್ಲ. ಈ ಹವ್ಯಾಸಗಳು ನನ್ನ ಜೀವನದ ಅವಿಭಾಜ್ಯ ಅಂಗಗಳಾಗಿವೆ.

**ಸಂದರ್ಶನದಲ್ಲಿ ನೆನಪಿಡುವಂಥದೇನಾದರೂ...**

ಹೌದು, ಅಧ್ಯಕ್ಷರೊಡನೆ ಒಬ್ಬ ಮಹಿಳೆ ಸಹಿತ ಆರು ಜನ ಸದಸ್ಯರಿದ್ದರು. ನಮ್ಮ ವ್ಯಕ್ತಿತ್ವವನ್ನು ಬಯಲಿಗೆ ಎಳೆಯುವ ದೃಷ್ಟಿಯಿಂದ ತೀಕ್ಷ್ಣ ಪ್ರಶ್ನೆಗಳನ್ನು ಕೇಳುತ್ತಾರೆ; ಮೊನಚು ಮಾತುಗಳನ್ನಾಡುತ್ತಾರೆ; ಪ್ರಚೋದಿಸುತ್ತಾರೆ. ನನಗೆ ಪರಿಚಯವೇ ಇಲ್ಲದ ಗೋಲ್ಫ್ ಆಟಗಾರನ ಬಗೆಗೆ, ಸಂಪೂರ್ಣ ಗುಣಾತ್ಮಕ ಉಸ್ತುವಾರಿ (TQM) ಯ ಬಗೆಗೆ, ಉರುಗ್ವೆ ಮಾತುಕತೆಗಳ ಬಗೆಗೆ ಕೇಳಿದರು ನನಗೆ ಗೊತ್ತಿಲ್ಲ ಎಂಬುದರ ಪ್ರಾಮಾಣಿಕ ನಿವೇದನೆ ಅವರಿಗೆ ಹಿಡಿಸಿದಂತೆ ಕಂಡಿತು. ೨೦೦ರಲ್ಲಿ ೧೯೫ ಗುಣಗಳನ್ನು ಗಳಿಸಿದ ನನಗೆ ಸಂದರ್ಶನದಲ್ಲಿಯ ನನ್ನ ಪ್ರದರ್ಶನ ಪೂರ್ಣ ತೃಪ್ತಿ ತರಲಿಲ್ಲ.

**ನಿಮ್ಮ ಯಶಸ್ಸಿನ ಹಿಂದೆ ಯಾರ ಪಾತ್ರವಿದೆಯೆಂದು ನಿಮ್ಮ ಭಾವನೆ?**

ತಂದೆ-ತಾಯಿಗಳ ನಿರಂತರ ಮಾರ್ಗ ದರ್ಶನ, ಉತ್ತೇಜನ; ಸಹೋದರರ ಬೆಂಬಲ, ಸಹಾಯ, ಸಹಕಾರ; ಗುರುಗಳೆಲ್ಲರ ಸಮರ್ಥ ಸಕಾಲಿಕ ತರಬೇತಿ; ನನ್ನ ಪ್ರಯತ್ನ;

ದೈವಾನುಕೂಲತೆ.

ನಾನು ಎರಡನೇ ವರ್ಗದಲ್ಲಿದ್ದಾಗಲೇ ತಂದೆಯವರು 'ನಿನ್ನ ಜೀವನದ ಧ್ಯೇಯ- ಐ.ಎ.ಎಸ್. ಎಂದು ಹೇಳಿದ್ದು, ಅದಕ್ಕಾಗಿ ಎಲ್ಲರೂ ಶ್ರಮಿಸಿದ್ದಾರೆ. ಆದರೆ ನನಗೆ ಆತ್ಮವಿಶ್ವಾಸದ ಕೊರತೆಯಿದ್ದುದರಿಂದ ''ಎಂ. ಎ. ಐ. ಎನ್. ಈ .ಟ,'' ಮಾಡಿದ ನಂತರ ನನಗೆ ಖಚಿತವಾದದ್ದು; ನಾನು ತಂದೆಯವರು ಯೋಚಿಸಿದ ಹುದ್ದೆಗೆ ತಕ್ಕವಳೆಂದು.

**ಅಧಿಕಾರಶಾಹಿಯ ಇತಿ-ಮಿತಿಗಳಲ್ಲಿ ಸೇವೆಯ ನಿಮ್ಮ ಗುರಿಯನ್ನು ತಲುಪುವ ಭರವಸೆಯಿದೆಯೇ?**

'ಮಾನವ, ಪ್ರಾಣಿ ಮತ್ತು ನಿಸರ್ಗ ದಿಂದೊಡಗೂಡಿದ ಈ ಜಗತ್ತಿನಲ್ಲಿಯ ಎಲ್ಲದರಲ್ಲೂ ಈಶನಿದ್ದಾನೆ' ಎಂಬುದು ಎಷ್ಟು ಉತ್ತಮ ವಿಚಾರ! ಅಂತೆಯೇ, 'ನಾನು ಬದುಕಿರಬೇಕಾದುದು ಬೇರೊಬ್ಬರನ್ನು ಸಾಧ್ಯ ವಿದ್ದಷ್ಟು ಚೆನ್ನಾಗಿ ಬದುಕಲು ಸಹಾಯ ಮಾಡುವದಕ್ಕೇ ವಿನಾ ನನ್ನನ್ನು ಸುಖ- ಸಂತೋಷಗಳಿಂದ ತುಂಬಿಸಿಕೊಳ್ಳುವುದಕ್ಕಲ್ಲ' ಎಂಬ ವಿಚಾರವೂ ಸಹ. ಆದುದರಿಂದ 'ಈಗಾಗಲೇ ಬೆಳೆದೊಂದು ಹುಲ್ಲುಗರಿಕೆಗೆ ಇನ್ನೊಂದನ್ನು ಸೇರಿಸಬಲ್ಲೆಯಾದರೆ ಅದೇ ಸಾರ್ಥಕ' ಎಂಬರ್ಥದ ಕವಿವಾಣಿಯಲ್ಲಿ ನನಗೆ ಅಚಲ ನಂಬಿಕೆಯಿದೆ. ಭಾರೀ ಆಕಾಂಕ್ಷೆ ಗಳನ್ನಿರಿಸಿಕೊಂಡು ಸೋಲುವುದಕ್ಕಿಂತ ನನ್ನ ಬಾಯಿಯಲ್ಲಿ ಹಿಡಿಸುವ ತುತ್ತನ್ನಿರಿಸಿಕೊಂಡು ಅದನ್ನು ಆಸ್ವಾದಿಸುವ ಪ್ರಯತ್ನ ನನಗೆ ಹೆಚ್ಚು ಹಿಡಿಸುತ್ತದೆ. ಯಾವ ರಂಗದಲ್ಲಿಯ ಯಾವ ಇತಿ-ಮಿತಿಗಳ ಬಗೆಗೂ ತಲೆ ಕೆಡಿಸಿಕೊಳ್ಳುವ ಮನೋಭಾವ ನನ್ನದಲ್ಲ.

**ಭಾರತೀಯ ಸೇವೆಗೆ ಸೇರಬಯಸುವ ಆಕಾಂಕ್ಷಿಗೆ ನಿಮ್ಮ ಸಂದೇಶ?**

ಆಯ್ಕೆಯಾದ ಅಭ್ಯರ್ಥಿಗಳಲ್ಲಿ, ಪರೀಕ್ಷೆಗೆ ಕಟ್ಟುವವರಲ್ಲಿ ಕರ್ನಾಟಕದವರು ಇಲ್ಲವೇ ಇಲ್ಲ ಎಂಬಷ್ಟು ನಿರಾಶಾದಾಯಕ ಪರಿಸ್ಥಿತಿ ಇದೆ. ಇದನ್ನು ಸುಧಾರಿಸಲು ಆತ್ಮವಿಶ್ವಾಸವುಳ್ಳ ಪರಿಶ್ರಮಿಗಳಿಗೆ ಕೊರತೆಯಿಲ್ಲದ ಕರ್ನಾಟಕದ ಯುವಕ ಯುವತಿಯರಿಗೆ ಸಾಧ್ಯವಾಗುತ್ತದೆ ಯೆಂದು ಮನದುಂಬಿ ಹಾರೈಸುತ್ತೇನೆ.

●

# ಹರಿಹರರಾವ್ ಮೋಹರೀರ್

ಮುಂಬರುವ ಜನಾಂಗಕ್ಕೆ ನಮ್ಮ ಸಂಸ್ಕೃತಿಯು, ಇತಿಹಾಸವನ್ನು ಮನದಟ್ಟು ಮಾಡಿಕೊಡುವಲ್ಲಿ ಐತಿಹಾಸಿಕ ಸ್ಮಾರಕಗಳಷ್ಟೇ ಪ್ರಮುಖ ಪಾತ್ರವನ್ನು ಇತಿಹಾಸ ಪರಿಕರಗಳೂ ವಹಿಸುತ್ತವೆ. ಇತಿಹಾಸದ ಪರಿಕರ ಪಳೆಯುಳಿಕೆಗಳ ರಕ್ಷಕರು, ಈ ದೃಷ್ಟಿಯಿಂದ ಇತಿಹಾಸದ ರಕ್ಷಕರೂ ಹೌದು, ಇಂತಹ



ಪ್ರಮುಖ ಸಂಗ್ರಹಗಳಲ್ಲಿ ಅಫಜಲಪೂರದ ಎಪ್ಪತ್ತೆರಡರ ಪ್ರಾಯದ ವಿದ್ವಾಂಸ ಸ್ವಾತಂತ್ರ್ಯ ಹೋರಾಟಗಾರ ಹರಿಹರರಾವ್ ಮೋಹರೀರ್ ಅವರ ಮನೆ ಸೇರುತ್ತದೆ. ಇವರು ತಮ್ಮ ಯೌವನದಲ್ಲಿ ಖ್ಯಾತ ಇತಿಹಾಸ ತಜ್ಞ ಪಿ.ಬಿ.ದೇಸಾಯಿಯವರ ಜೊತೆ ಹೈದಾರಾ ಬಾದ ಸಂಸ್ಥಾನವೆಲ್ಲ ಸುತ್ತಾಡಿ ಅಣ್ಣಾರಾವ ಗುಣಮುಖಿಯವರ ಸಹಕಾರವನ್ನು ಪಡೆದು ತಮ್ಮ ಮನೆಯನ್ನೇ ವಸ್ತು ಸಂಗ್ರಹಾಲಯ ವನ್ನಾಗಿಸಿ ಅದೆಂದೋ ನಶಿಸಿ ಹೋಗಬಹು ದಾಗಿದ್ದ ಅದೆಷ್ಟೋ ಐತಿಹಾಸಿಕ ದಾಖಲೆಗಳನ್ನು ಸುರಕ್ಷಿತವಾಗಿ ಕಾಯ್ದಿರಿಸಿದ್ದಾರೆ.

ಬಿಳಿ ಕಚ್ಚೆ ಪಂಚೆ ಕರಿಕೋಟು ತಲೆ ಮೇಲೊಂದು ಕ್ಯಾನ್ವಾಸ್ ಕರಿಟೋಪಿ, ಕೈಯಲ್ಲಿರುವ ಕೊಡೆಯನ್ನೇ ಊರು ಗೋಲಾಗಿಸಿಕೊಂಡು ಇವರು ನಡೆದರೆ ಬೀದಿಯವರೆಲ್ಲ ಗುರುತಿಸುವುದು ಬಾಬಾಸಾಬ ಎಂದೇ. ಇದು ಇವರು ದುದ್ದಣಗಿಯಲ್ಲಿ ಕುಲಕರ್ಣಿಕೆ ಮಾಡುವಾಗಿನಿಂದಲೇ ಬಂದ ಹೆಸರು. ೧೯೨೪ರ ನವೆಂಬರ್‌ನಲ್ಲಿ ಜನಿಸಿದ ಹರಿಹರರಾವ್ ಮೋಹರೀರ್ ಅವರು ಆರು ಭಾಷೆಗಳನ್ನು ನಿರರ್ಗಳವಾಗಿ ಮಾತಾಡ ಬಲ್ಲರು. ಆಗಿನ ಮುಲ್ಕೀ ಪರೀಕ್ಷೆಯನ್ನು ಉರ್ದು ಮತ್ತು ಮರಾಠಿ ಮಾಧ್ಯಮಗಳಲ್ಲಿ ಪಾಸಾಗಿ ಫಾರ್ಸಿ ಸಂಸ್ಕೃತ ಭಾಷೆಗಳನ್ನು ಗೆಳೆಯರ ಒಡನಾಟದಿಂದ ಕಲಿತರು. ಕನ್ನಡದಲ್ಲಿ ಬರೆಯಲು ಪ್ರಾರಂಭಿಸಿದಾಗ ಕಲಬುರ್ಗಿಯ ಮೊದಲ ಕನ್ನಡ ಪತ್ರಿಕೆ ''ಗುಲಬರ್ಗಾ ಸಮಾಚಾರ'' ಮತ್ತು ಶೈಕ್ಷಣಿಕ ಪತ್ರಿಕೆ ''ಜೀವನ ವಿಕಾಸ''ದಲ್ಲಿ ಅನೇಕ ಲೇಖನಗಳು ಪ್ರಕಟವಾದವು.

ಅಫಜಲಪೂರ ತಾಲೂಕಿನ ಐತಿಹಾಸಿಕ ಗ್ರಾಮಗಳಾದ ದೇವಲ ಗಾಣಗಾಪೂರ, ಅತನೂರ, ಮಹಾಂತೇಶ್ವರ ಗುಡ್ಡ, ನೀಲೂರು ಇವುಗಳ ಜೊತೆಗೆ ಶಿಲ್ಪ ಕಲೆಗೆ ಜೀವಂತ ಸಾಕ್ಷಿಯಾಗಿರುವ ಚಿಣಮಗೇರಿ, ಮಣ್ಣೂರ ಮತ್ತು ಮಾಶ್ಯಾಳದ ಹತ್ತಿರವಿರುವ ಭಿಂಗೋಳಿ ಗ್ರಾಮಗಳಲ್ಲಿ ಶಿಲಾ ಶಾಸನಗಳ ಬಗ್ಗೆ ಪುರಾವೆಗಳನ್ನು ಸಂಗ್ರಹಿಸಿ ದಾಖಲೆಯನ್ನು ಜೋಪಾನವಾಗಿ ಇಟ್ಟಿದ್ದಾರೆ. ಅಫಜಲಪೂರ ತಾಲೂಕಿನ ಕಡಕೋಳ ಮಡವಾಳಪ್ಪ ಕಾರಭಾಸಗಿಯ ರೇವಣಸಿದ್ದ ಶಾಸ್ತ್ರಿಗಳು, ಭಾರತೀಯ ಪತ್ರಿಕಾ ಯುಗದ ದುರಿಣರಾಗಿದ್ದ ರಾಘು ಜಾಹಾಗೀರದಾರ ಮುಂತಾದವರ ಕುರಿತು ಅನೇಕ ಇತಿಹಾಸದ ನೆನಪುಗಳನ್ನು ಕಟ್ಟಿಕೊಡುವ ಛಾಯಾ ಚಿತ್ರ, ಲಿಖಿತ ದಾಖಲೆಗಳನ್ನು ಹೊಂದಿರುವ ಇವರ ಮನೆ ಇತಿಹಾಸಕ್ಕೆ ಬೆಳಕಿಂಡಿಯಂತಿದೆ.

ಇದರ ಅಮೂಲ್ಯ ಇತಿಹಾಸ ಭಂಡಾರದಲ್ಲಿ ಹೈದರಾಬಾದ ಸಂಸ್ಥಾನ ಮತ್ತು ಅದಕ್ಕೂ ಪೂರ್ವ ಪರಂಪರೆಯನ್ನು ಎತ್ತಿ ತೋರಿಸುವ ಅನೇಕ ತಾಮ್ರಪಟ, ಶಿಲಾಲೇಖ, ಕರುಡುಪ್ರತಿ, ನಗ-ನಾಣ್ಯ, ಲಿಖಿತದಾಖಲೆಗಳು ಮೌಖಿಕ ಜನಪದ ಸಾಹಿತ್ಯ ಮುಂತಾದ ಅನರ್ಘ್ಯ ಸಂಪತ್ತು ಅಡಗಿದೆ. ಸರಕಾರ ಸಾರ್ವಜನಿಕರು ಇತ್ತ ತೀವ್ರವಾಗಿ ಗಮನಹರಿಸಿ ಅವರ ಜೀವಿತಾವಧಿಯಲ್ಲೇ ಅವರು ಅನೇಕ ವರ್ಷಗಳಿಂದ ಇಟ್ಟುಕೊಂಡ ''ಸಾಹಿತ್ಯ ಮಂಡಳ''ದ ಆಸೆಯನ್ನು ಪೂರೈಸಬೇಕಾಗಿದೆ.

○ ಡಿ. ಎಂ. ನದಾಫ್

# ಕ್ಲಾಸ್ ರೂಂ

## ಪ್ರೀತಿ

ಒಂದು ದಿನ ನಮ್ಮ ವರ್ಗದ ಗುರುಗಳು ತರಗತಿಯಲ್ಲಿ ಪಾಠ ಹೇಳುತ್ತಿದ್ದರು. ಆಗ ಅವರು, ''ಪುಸ್ತಕ ಮೇಜಿನ ಮೇಲಿದೆ. ಮೇಜು ನೆಲದ ಮೇಲಿದೆ. ಅಂದರೆ ಪುಸ್ತಕ ನೆಲದ ಮೇಲಿದ್ದಂತಾಯಿತು. ಇದಕ್ಕೆ ಕೆಲವು ಉದಾಹರಣೆ ಕೊಡಿ?'' ಎಂದರು.

ಆಗ ನನ್ನ ಗೆಳೆಯ ಎದ್ದು ನಿಂತು, ''ಸರ್, ನೀವು ನಿಮ್ಮ ಮಗಳನ್ನ ಪ್ರೀತಿಸುತ್ತಿರಿ, ನಾನು ನಿಮ್ಮನ್ನು ಪ್ರೀತಿಸುತ್ತೇನೆ ಅಂದರೆ ನಾನು ನಿಮ್ಮ ಮಗಳನ್ನು ಪ್ರೀತಿಸಿದಂತಾಯಿತು'' ಎಂದು ಉದಾಹರಣೆ ಕೊಟ್ಟ! ಇಡೀ ತರಗತಿ ಗೊಳ್ ಎಂದು ನಕ್ಕಿತು.

**- ವಿನಾಯಕ ಮಾ. ಅರಳಿ**
ಹಿರೇಕೆರೂರ.

## ಬುದ್ಧಿ ಹಲ್ಲು

ನಾನು ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿರುವಾಗ ನನ್ನ ಸಹಪಾಠಿ ಒಬ್ಬ ಇದ್ದ. ಆತ ತುಂಬಾ ಸೋಮಾರಿ ಮತ್ತು ದಡ್ಡ, ಶಿಕ್ಷಕರು ಯಾವ ಪ್ರಶ್ನೆ ಕೇಳಿದರೂ ಉತ್ತರ ನೀಡುತ್ತಿರಲಿಲ್ಲ.

ಒಂದು ದಿನ ಗುರುಗಳು ಎಲ್ಲರಿಗೂ ಪ್ರಶ್ನೆ ಕೇಳ ತೊಡಗಿದರು. ಎಲ್ಲರ ಸರದಿ ಮುಗಿದು ಗುಂಡನ ಸರದಿ ಬಂತು. ಶಿಕ್ಷಕರು ಕೇಳಿದ ಎಲ್ಲ ಪ್ರಶ್ನೆಗಳಿಗೆ ಗುಂಡ ಉತ್ತರ ನೀಡಿದ. ಗುರುಗಳು ಆಶ್ಚರ್ಯಚಕಿತರಾಗಿ ನಿಂತರು. ಅವರಿಗೆ ಸಮಾಧಾನವಾಗಲೆಂದು ಗುಂಡನೇ ವಿವರಿಸಿದ : ''ಸರ್, ಮೊನ್ನೆ ನನಗೆ ಬುದ್ಧಿ ಹಲ್ಲು ಬಂತು!''

**- ವಾಣಿಶ್ರೀ ಹುರಳಿ,**
ಬದಾಮಿ

## ರಾಷ್ಟ್ರಧ್ವಜ

ನಾನು ಮುದ್ದೇಬಿಹಾಳದಲ್ಲಿ ಶ್ರೀರೇವಣಸಿದ್ದೇಶ್ವರ ಪ್ರೌಢ ಶಾಲೆಯಲ್ಲಿ ಮುಖ್ಯಾಧ್ಯಾಪಕನಾಗಿ ಕನ್ನಡ ಹಾಗೂ ಭೂಗೋಲ ವಿಷಯ ಬೋಧಿಸುತ್ತೇನೆ.

ಸ್ವಾತಂತ್ರ್ಯ ಸ್ವರ್ಣ ಮಹೋತ್ಸವಕ್ಕೆ ನಾಲ್ಕು ದಿನ ಮುಂದೆ ನಾನು ೧೦ನೇ ವರ್ಗದಲ್ಲಿ ವಿಷಯ ಬೋಧಿಸುವಾಗ ಪ್ರಾಸಂಗಿಕವಾಗಿ ವಿದ್ಯಾರ್ಥಿಗಳಿಗೆ ರಾಷ್ಟ್ರಧ್ವಜದ ಬಣ್ಣಗಳ ಬಗ್ಗೆ ಕೇಳಿದೆ. ಕೆಲವರು ಸರಿಯಾದ ಉತ್ತರಕೊಟ್ಟರು. ಹಿಂದಿನ ಬೆಂಚಿನಲ್ಲಿ ಕುಳಿತ ವಿದ್ಯಾರ್ಥಿಗೆ ಬೆದರಿಸಿ ಜೋರಾಗಿ ಇದೇ ಪ್ರಶ್ನೆ ಕೇಳಿದೆ. ಆಗ ಬೆದರಿದ ಆ ವಿದ್ಯಾರ್ಥಿ, ''ಸರ್ ಅವರೆಲ್ಲ ಹೇಳಿದ್ದು ತಪ್ಪು ಸರ್ ನಮ್ಮ ಧ್ವಜದಲ್ಲಿ ಕೆಂಪು, ಬಿಳಿ, ಹಸಿರು ಬಣ್ಣ ಇರುತ್ತವೆ'' ಎಂದಾಗ ನನಗೆ ಕೋಪ ಉಕ್ಕಿಬಂದಿತು.

**- ಶಿವಕುಮಾರ ಹಡಪದ**
ಮುದ್ದೇಬಿಹಾಳ

## ರಾಮ ಗರ್ಲ್

ಇದು ನಾನು ಕಾಲೇಜಿನಲ್ಲಿ ಓದುತ್ತಿದ್ದಾಗ ಜರುಗಿದ ಸಂಗತಿ. ನಮ್ಮ ತರಗತಿಯಲ್ಲಿ ರಮಾ ಎಂಬ ಹುಡುಗಿಯೊಬ್ಬಳಿದ್ದಳು. ಆದರೆ ಅವಳ ಹೆಸರನ್ನು ಹಾಜರಾತಿ ಪುಸ್ತಕದಲ್ಲಿ ಇಂಗ್ಲಿಷಿನಲ್ಲಿ ಬರೆಯುವಾಗ RAMA ಎಂದು ಆಗಿತ್ತು. ಏಕೆಂದರೆ, ಇಂಗ್ಲಿಷಿನಲ್ಲಿ ರಮಾ ಮತ್ತು ರಾಮ ಎರಡಕ್ಕೂ ಒಂದೇ ಅಕ್ಷರಗಳು. ಮೊದಲೆರಡು ದಿನ ರಮಾಳನ್ನು ರಾಮ ಎಂದೆ ಕೂಗಿದಾಗ ಕ್ಲಾಸಿನಲ್ಲಿ ನಗೆಯ ಹೊನಲೇ ಹರಿಯುತ್ತಿತ್ತು ಮತ್ತು ರಮಾ ಎದ್ದು ನಿಂತು ಪ್ರತಿಯೊಬ್ಬ ಲೆಕ್ಚರರ್‌ಗೆ ತನ್ನ ಸರಿಯಾದ ಹೆಸರನ್ನು ತಿದ್ದಿ ಹೇಳುವುದು ಮಾಮೂಲಾಗಿ ಹೋಯಿತು.

ಒಂದು ದಿನ ಒಬ್ಬ ಲೆಕ್ಚರರು ಅಟೆಂಡೆನ್ಸ್ ತೆಗೆದುಕೊಳ್ಳುವಾಗ 'ರಾಮ ಗರ್ಲ್' ಎಂದು ಕೂಗಿದರು. ಆಗ ಕ್ಲಾಸಿನಲ್ಲಿರುವವರೆಲ್ಲ ಮತ್ತೊಮ್ಮೆ ಬಿದ್ದು ಬಿದ್ದು ನಗಲಾರಂಭಿಸಿದರು. ರಮಾ ಎಂದು ಕರೆಯಲನುಕೂಲವಾಗಲೆಂದು ಸೂಚನಾತ್ಮಕವಾಗಿ ಅವಳ ಹೆಸರ ಪಕ್ಕದಲ್ಲಿ ಗರ್ಲ್ ಎಂದು ಯಾರೊ ಒಬ್ಬ ಲೆಕ್ಚರರು ಸೇರಿಸಿದ್ದರು. ಇದನ್ನರಿಯದ ಇನ್ನೊಬ್ಬ ಲೆಕ್ಚರರು 'ರಾಮ ಗರ್ಲ್' ಎಂದು ಕರೆದಿದ್ದರು!

**- ಎಲ್. ಪ್ರವೀಣ್‌ಕುಮಾರ್**
ಭದ್ರಾವತಿ



## ಚಲ್ ಮೇರೀ ಲೂನಾ

(ಪ್ರಬಂಧ ಸಂಕಲನ)

ಲೇ : **ಆರ್. ನಿರ್ಮಲ**

ಪ್ರ : ಅಭಿನವ, ೨೭೯೧, ೧೩ನೇ ಮುಖ್ಯ ರಸ್ತೆ, ರಾಜಾಜಿನಗರ, ೨ನೇ ಹಂತ, ಬೆಂಗಳೂರು-೧೦ ಮುದ್ರಣ: ೧೯೯೭, ಪುಟ: ೧೧೨, ಬೆಲೆ: ರೂ. ೫೦/-

**ಈ** ಸಂಕಲನದಲ್ಲಿರುವ ಇಪ್ಪತ್ತೆರಡು ಪ್ರಬಂಧಗಳಲ್ಲಿರುವ ನಾಸ್ಟಾಲ್ಜಿಯಾ, ವಿಷಾದ ತೆಳುಹಾಸ್ಯ ಮೊದಲು ನಮ್ಮ ಗಮನ ಸೆಳೆಯುತ್ತವೆ. ಲಾಲಿತ್ಯವನ್ನು ಮೀರಿ ಗ್ರಹಿಸಲು ಅಲ್ಲಲ್ಲಿ ಪ್ರಯತ್ನಿಸಿದ್ದಾರೆ. ಮುಖ್ಯ ಪ್ರಬಂಧಗಳಲ್ಲಿ ಚಿಕ್ಕಂದಿನ ನೆನಪುಗಳು ಬಂದಿವೆ. ಇಷ್ಟಾದರೂ ನಿರ್ಮಲಾ ಅವರು ಕನ್ನಡ ಪ್ರಬಂಧಕಾರರ Mediocrity ಯನ್ನು ಮೀರಿದಂತಿಲ್ಲ. ಬರವಣಿಗೆಯ ಮಂದಗತಿ ಮಾತ್ರ ಇದಕ್ಕೆ ಕಾರಣವಲ್ಲ. ಶ್ರೇಷ್ಠ ಪ್ರಬಂಧಕಾರ ಎರಡು ಮುಖ್ಯ ಕಾರಣಗಳಿಗಾಗಿ ನಮ್ಮ ಪ್ರೀತಿ ಗಳಿಸುತ್ತಾನೆ. ಆತನಲ್ಲಿ ಅಪಾರ ಏಕಾಗ್ರತೆ ಮತ್ತು ಅರ್ಥಪೂರ್ಣ ಚಂಚಲತೆ ಇರುತ್ತವೆ; ಏಕಾಗ್ರತೆ ಆತನಿಗೆ ವಸ್ತುವಿನ ತಳಕ್ಕೆ ಹೋಗಲು ನೆರವಾಗುತ್ತದೆ, ಚಂಚಲತೆ ಅವನನ್ನು ಅನಿರೀಕ್ಷಿತ ಸತ್ಯಗಳ ಹತ್ತಿರ ಕೊಂಡೊಯ್ಯುತ್ತದೆ. ಮಾರ್ಕ್‌ಟ್ವೇನ್‌ನ ಕಾದಂಬರಿ 'ಹಕಲ್‌ಬಲಿ ಫಿನ್' ಅನ್ನು ಅಭ್ಯಸಿಸಿದರೆ ನನ್ನ ಮಾತು ಅರ್ಥವಾಗುತ್ತದೆ. ಮೇಲುನೋಟಕ್ಕೆ ಅದು ಹುಡುಗಾಟದ ಕತೆ; ನಿಜಕ್ಕೂ ಅದು ಅಮೆರಿಕಾದ ಕರಾಳ ಮುಖದ ಕತೆ; ಹಾಗೆಯೇ ಮಾಂಟೇನ್, ಹ್ಯಾಸ್‌ಲಿಟ್, ಆರ್.ಎಲ್.ಸ್ಟೀವನ್ಸನ್ ಮುಂತಾದವರ ಪ್ರಬಂಧಗಳು. ಇತ್ತೀಚಿನ ಅರ್ಥಪೂರ್ಣ ಪ್ರಬಂಧ ಸಂಕಲನದಲ್ಲಿ ಲಿಂಡ್, ಗಾರ್ಡಿಯರ್, ಬೆಲ್ಲಕ್ ಮುಂತಾದವರ ಬರಹಗಳು ಸೇರಿಲ್ಲ. ಇದನ್ನು ಅರಿತರೆ ನಿರ್ಮಲಾ 'ಲಲಿತ ಪ್ರಬಂಧ'ವನ್ನು ತಾವು ಬರೆಯುತ್ತಿರುವುದನ್ನು ಮರೆತು ಅನ್ನಿಸಿದ್ದನ್ನು ಬರೆಯಲು ಶುರುಮಾಡಬಹುದು. ಅಂದರೆ ಸಣ್ಣಕತೆಯ ನಿಯಮಗಳು ಸಣ್ಣಕತೆಯನ್ನು ಮಾಡುವುದಿಲ್ಲ. ಪ್ರತಿಭಾವಂತ ಹೊಸ ಗ್ರಹಿಕೆಗಳು ಸಣ್ಣಕತೆಗೆ ಜೀವ ತರುತ್ತವೆ. ಹಾಗೆಯೇ ಪ್ರಬಂಧ.

**- ಪಿ. ಲಂಕೇಶ್**

## ಪರಿಮಳಾ

(ಕವನ ಸಂಕಲನ)

ಲೇ : **ಎಂ.ಎಸ್.ಮಂಜುಳಾ**

ಪ್ರ: ಸಂಪರ್ಕ ಪ್ರಕಾಶನ ಜಯವಿಭವ ನಿಲಯ, ಜೋಗಿಮಟ್ಟಿ ರಸ್ತೆ, ಚಿತ್ರದುರ್ಗ. ಮುದ್ರಣ : ೧೯೯೭ ಪುಟ: ೪೪ ಬೆಲೆ : ರೂ.೧೫

**ಬ**ಯಲುಸೀಮೆಯ ಬಿಳಿಚೋಡುವಿನಲ್ಲಿ ಉಪನ್ಯಾಸಕಿಯಾಗಿ ಸೇವೆ ಸಲ್ಲಿಸುತ್ತಿರುವ ಶ್ರೀಮತಿ ಮಂಜುಳಾ ಅವರು ತಮ್ಮ ಚೊಚ್ಚಲು ಕೃತಿ 'ಪರಿಮಳಾ'ದಲ್ಲಿ ಮುಗ್ಧ ಮನಸ್ಸುಗಳ ಭಾವನೆಗಳ ಸೂಕ್ಷ್ಮ ಗ್ರಹಿಕೆಯ ಪ್ರಯತ್ನ ಮಾಡಿದ್ದಾರೆ.

ಸ್ತ್ರೀ ಪರವಾದ ತಮ್ಮ ವಿಚಾರಧಾರೆಯನ್ನು ಈ ಕೃತಿಯ ಮೂಲಕ ಹರಿಬಿಟ್ಟಿದ್ದಾರೆ. ವೃತ್ತಿಪ್ರವೃತ್ತಿಗಳನ್ನು ಸಮಾನವಾಗಿ ನೋಡುವ ಶ್ರೀಮತಿ ಮಂಜುಳಾ ಅವರು ಈಗಾಗಲೇ ಕಾವ್ಯದ ಮೂಲಕ ಎಲ್ಲವನ್ನು ಅರ್ಥೈಸಿಕೊಳ್ಳುತ್ತಾ ಕಾವ್ಯದ ನೆಲೆಯನ್ನು ರೂಪಿಸಿಕೊಂಡವರು. ತಮ್ಮ ಕಾವ್ಯದಲ್ಲಿ ಸಮಾಜದಲ್ಲಿ ನಡೆಯುತ್ತಿರುವ ಶೋಷಣೆಯನ್ನು ವಿವರಿಸುತ್ತಾರೆ.

Democracy ಕಾವ್ಯದಲ್ಲಿ ಸಂಪೂರ್ಣ ಭಾರತದ ಸ್ವಾತಂತ್ರ್ಯದ ಸಾಗುವಿಕೆಯ ದಾರಿಯನ್ನು ಪ್ರಶ್ನಿಸುತ್ತಾರೆ. ಮಹಿಳೆಯರು ಮಕ್ಕಳು ಹಾಗೂ ಪರಿಸರದ ಬಗ್ಗೆ ತಮ್ಮ ಭಾವನಾತ್ಮಕ ಸಂಬಂಧಗಳನ್ನು ತಮ್ಮ ಕೃತಿಯಲ್ಲಿ ಮಂಡಿಸಿದ್ದಾರೆ. ಅವರಿಂದ ಇನ್ನೂ ಹೆಚ್ಚಿನ ಕೃತಿಗಳು ಹೊರಬರಲಿ ಎಂದು ಅವರ ಉತ್ಸಾಹದ ಪರಿಚಯವಿರುವ ನಾನು ನಂಬುತ್ತೇನೆ.

**- ನರೇನಹಳ್ಳಿ ಅರುಣಕುಮಾರ್**

## ನಕ್ಷತ್ರಗಳು

(ಹನಿಗವನಗಳ ಸಂಕಲನ)

ಲೇ: **ಜಿ. ಪ್ರೇಮಾನಂದ**

ಪ್ರ: ಶ್ರೀ ರಾಘವೇಂದ್ರ ಪ್ರಕಾಶನ,



## ಮುನ್ನುಡಿಯಿಂದ

ಅಂಬಾರಕೊಡ್ಲ, ಅಂಕೋಲಾ. ಮುದ್ರಣ : ೧೯೯೬, ಪುಟ: ೬೪ ಬೆಲೆ: ರೂ.೨೦/-

**ಪ್ರ**ಸ್ತುತ ಸಂಕಲನದ ಹನಿಗವನಗಳ ಒಂದು ವೈಶಿಷ್ಟ್ಯವೆಂದರೆ ಅವುಗಳ ಸರಳತೆ. ಈ ಸರಳತೆ ಸಹಜತೆಗೆ ಮಾರ್ಗ ಮಾಡಿಕೊಟ್ಟಿದೆ. 'ಕವಿ ಕಲ್ಪನೆಯಕಲ್ಲಲ್ಲಿ ಕಡೆದ ಕಲೆಯೆ ಕವನ' ಎಂದು ಕವಿ ಭಾವಿಸುವನು. ಪ್ರೇಮದಿಂದ ಮೊದಲಾಗಿ ಚುನಾವಣೆಯವರೆಗೆ ಹತ್ತು ಹಲವು ಅನಿಸಿಕೆಗಳು ಇಲ್ಲಿ ನಯವಾಗಿ ಮೈ ತುಂಬಿಕೊಂಡಿವೆ. ಸುತ್ತಲಿನ ನಿಸರ್ಗ, ಜಿಲ್ಲೆಯ ಪರಿಸರ, ಬದುಕಿನ ಆಗುಹೋಗುಗಳು ಇಲ್ಲಿ ಹನಿಗವನಗಳಾಗಿ ಅರಳಿವೆ. ಕವಿ ಮೋಡಗಳನ್ನು 'ಅಪೂರ್ವ ಕಲಾಕಾರನ ಬಣ್ಣದ ಚಿತ್ತಾರಗಳು' ಎಂದು ಕಲ್ಪಿಸುವನು. ಹಾಲು ಅಕ್ಕಿಗಳಿಗಾಗಿ ನಿರಂತರ ಬೆವರು ಸುರಿಸುತ್ತಿರುವ ಶ್ರಮಜೀವಿ ಹಾಲಕ್ಕಿಗಳಿಗಾಗಿ ಕವಿ ಅನುಕಂಪ ತೋರುವನು. ಆದರೆ ಇಲ್ಲಿಯ ಕೆಲವು ಹನಿಗವನಗಳು ತೀರ ಸರಳವಾಗಿ, ಅರ್ಥವಂತಿಕೆ ಕಳೆದುಕೊಂಡಿವೆ. ಕವನಗಳ ಶೀರ್ಷಿಕೆ ಇನ್ನಷ್ಟು ಅರ್ಥಪೂರ್ಣವಾಗಿದ್ದರೆ ಒಳಿತು. ತರುಣ ಕವಿ ತನ್ನ ಕವನಗಳ ಲೋಪ-ದೋಷಗಳನ್ನು ಸರಿಪಡಿಸಿಕೊಂಡು ಬೆಳೆಯುವನೆಂಬ ಭರವಸೆ ಅವನನ್ನು ಬಲ್ಲವರಿಗೆ ಇದೆ.

**- ಪ್ರೊ. ವಿ.ವ್ಹಿ. ಜೋಶಿ**

## ಮುದ್ದು ಕಂದ

(ಮಕ್ಕಳ ಸಚಿತ್ರ ಕವಿತೆಗಳು)

ಸಂಪಾದಕ : **ಬ. ಈ. ದೇವರ**

ಪ್ರ: ಬ.ಈ. ದೇವರ, ಶ್ರೀ ಈಶ್ವರ ಪ್ರಕಾಶನ

ಸಾರವಾಡ, ಜಿಲ್ಲೆ ಬಿಜಾಪುರ. ಮುದ್ರಣ : ೧೯೯೬, ಪುಟ: ೫೦ ಬೆಲೆ: ರೂ. ೧೮/-

**ಮ**ಕ್ಕಳ ಸಾಹಿತಿಗಳ ತವರು ಜಿಲ್ಲೆಯಾದ ವಿಜಾಪುರದ ಸಾರವಾಡ ಗ್ರಾಮದವರಾದ ಬಸವರಾಜ 'ಮುದ್ದು ಕಂದ'ದಲ್ಲಿ ಮಕ್ಕಳ ಕವನಗಳನ್ನು ಚೊಕ್ಕಟವಾಗಿ ರಚಿಸಿದ್ದಾರೆ. ಕವನಗಳಿಗೆ ವಸ್ತುಗಳ ಆಯ್ಕೆಯಲ್ಲಿ ಅನುಕರಣೆ ಕಂಡು ಬಂದಂತೆನಿಸಿದರೂ ನಿರೂಪಣೆಯಲ್ಲಿ ತಮ್ಮತನ ತೋರಿದ್ದಾರೆ.

ಕಸದಲ್ಲಿ ರಸ ತೆಗೆಯುವ ಸಾಮರ್ಥ್ಯ ಇರುವ ಇವರು ಲಯ ಮಾಧುರ್ಯ ನೀಡುವ ಪ್ರಾಸಗಳಿಂದ ಮಕ್ಕಳ ಮನ ಗೆಲ್ಲುತ್ತಾರೆ.

ವಿಜಾಪುರ ಜಿಲ್ಲೆಯ ಮಕ್ಕಳ ಸಾಹಿತಿಗಳ ಮುತ್ತಿನಹಾರಕ್ಕೆ ಬ.ಈ.ದೇವರ ಮತ್ತೊಂದು ಮುತ್ತಾಗಿ ಸೇರಿ ಅದರ ಸೌಂದರ್ಯ ಹೆಚ್ಚಿಸುವರೆಂಬುದರಲ್ಲಿ ಯಾವ ಸಂಶಯವಿಲ್ಲ.

**- ಜಯವಂತ ಕಾಡದೇವರ**

## ವೇದನೆಗಳೊಂದಿಗೆ

(ಕವನ ಸಂಕಲನ)

ಲೇ: **ಮಹಾಂತೇಶ ಮಸ್ಕಿ**
ಪ್ರ: ಚೇತನ ಪ್ರಕಾಶನ, ರಾಯಚೂರು
ಮುದ್ರಣ: ೧೯೯೬, ಪುಟ: ೮೨,
ಬೆಲೆ: ರೂ ೩೦/-

**ಪ್ರಾ**ಣಿಶಾಸ್ತ್ರ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದ ನಂತರ ಬಿ.ಎಡ್. ಮಾಡಿ ಈಗ ಅರಕೇರಿಯ ಸರಕಾರಿ ಪ್ರೌಢ ಶಾಲೆಯಲ್ಲಿ ಶಿಕ್ಷಕರಾಗಿರುವ ಮಹಾಂತೇಶರ ಈ ಸಂಗ್ರಹದಲ್ಲಿ ಸಾಕಷ್ಟು ಪರಿಣತಿ ಅಥವಾ ಪಕ್ವತೆಯನ್ನು ಅಪೇಕ್ಷಿಸುವುದು ತಪ್ಪಾಗುತ್ತದೆ. ದೇವದುರ್ಗದಂಥ ಪ್ರದೇಶದಲ್ಲಿ ನಡೆಯುವ ಸಾಹಿತ್ಯಿಕ ಚಟುವಟಿಕೆಗಳು ಇಂಥ ಆಸಕ್ತಿಯುಳ್ಳ ಯುವ ಕವಿ-ಸಾಹಿತಿಗಳಿಗೆ ಪ್ರೋತ್ಸಾಹಕವಾಗಿರುವ ಅವಕಾಶಗಳೂ ಕಡಿಮೆ. ಹೀಗಾಗಿ ಮಹಾಂತೇಶರಂಥವರು ತಾವಾಗಿ ತಮ್ಮನ್ನು ರೂಪಿಸಿಕೊಳ್ಳುವ, ತಿದ್ದಿಕೊಳ್ಳುವ, ಬೆಳೆಸಿಕೊಳ್ಳುವ ಪ್ರಯತ್ನ ಮಾಡಬೇಕಾಗುತ್ತದೆ. ಇದಕ್ಕಾಗಿ ಅಧ್ಯಯನ ಮನನ ಗಮನ ಪ್ರಯತ್ನಗಳು ಅನಿವಾರ್ಯ. ಆ ನಿಟ್ಟಿನಲ್ಲಿ ಇಂಥ ಹೊಸ ಬರಹಗಾರರು ಬಹಳ ದೂರದ ದಾರಿಯನ್ನು ಕ್ರಮಿಸಬೇಕಾಗುತ್ತದೆ.

**- ಡಾ. ಸಿದ್ದಲಿಂಗ ಪಟ್ಟಣಶೆಟ್ಟಿ**

## ನನ್ನ ಶೈಕ್ಷಣಿಕ ಬದುಕು

(ಆತ್ಮ ಚರಿತ್ರೆ)

ಲೇ: **ಷಡಕ್ಷರಪ್ಪ**
ಪ್ರ: ಶತಮಾನೋತ್ಸವ ಸಮಿತಿ
ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ಮಸ್ಕಿ.
ರಾಯಚೂರು ಜಿಲ್ಲೆ. ಪುಟ: ೫೮,
ಬೆಲೆ: ರೂ ೨೦/-

"**ನ**ನ್ನ ಶೈಕ್ಷಣಿಕ ಬದುಕು" ಷಡಕ್ಷರಪ್ಪನವರ ಆತ್ಮಚರಿತ್ರೆ. ಐವತ್ತೆಂಟು ಪುಟದ ಈ ಚಿಕ್ಕ ಹೊತ್ತಗೆ ಶೈಕ್ಷಣಿಕ, ಸಾಂಸ್ಕೃತಿಕ ಬದುಕಿನ ಒಂದು ಸುಂದರ ಚಿತ್ರ. ಸತ್ಯಶುದ್ಧ ಹಿರಿಯ ಜೀವದ ಗಾಥೆ.

ಸರಳ, ನೇರ ಆತ್ಮೀಯ ಶೈಲಿಯ ಈ ಚರಿತ್ರೆಯನ್ನು ಓದಲು ಪ್ರಾರಂಭಿಸಿದರೆ ಮುಗಿಸುವವರೆಗೂ ನಿಲ್ಲಿಸುವ ಮನಸ್ಸಾಗುವುದಿಲ್ಲ. ಎಲ್ಲಿಯೂ ವೈಭವೀಕರಣವಿಲ್ಲ; ಕೃತಕತೆಯಿಲ್ಲ. ಇದ್ದುದನ್ನು ಇದ್ದಂತೆ ಬರೆಯುವುದು ಪ್ರಾಮಾಣಿಕರಿಗೆ ಮಾತ್ರ ಸಾಧ್ಯ; ಅಲ್ಲಿ ಸೊಗಸಿರುತ್ತದೆ, ಸವಿಯಿರುತ್ತದೆ, ಜೀವರಸವಿರುತ್ತದೆ.

**- ಶಾಂತರಸ**

## ಮಾಂಡೋವಿ

(ಒಂದು ಪ್ರೇಮ ಪುಸ್ತಕವು)

ಲೇ: **ರವಿ ಬೆಳಗೆರೆ** ಪ್ರ: ಧಾರಿಣಿ ಗ್ರಾಫಿಕ್ಸ್, ೨೭೯೧, ೧೩ನೇ ಮುಖ್ಯ ರಸ್ತೆ, 'ಇ' ವಿಭಾಗ, ರಾಜಾಜಿನಗರ, ೨ನೇ ಹಂತ, ಬೆಂಗಳೂರು. ಎರಡನೇ ಮುದ್ರಣ: ೧೯೯೭, ಪುಟ: ೨೦೮, ಬೆಲೆ: ರೂ ೬೦/-

**ಈ** ತರಹದ ಇನ್ನೊಂದು ಕಾದಂಬರಿ ನನ್ನಿಂದ ಬರೆಯಲು ಸಾಧ್ಯವಾದರೆ, ಅದಕ್ಕಿಂತ ಸಂತೋಷವಿರಲಾರದು. ಅಷ್ಟು ಪ್ರೀತಿಯಿಂದ ಇದನ್ನು ಬರೆದೆ. ನಿಮಗೆ ಗೊತ್ತು; ಪ್ರೀತಿಯ ಬಗ್ಗೆ ಮಾತಿಗೆ ಕೂತರೆ ನಾನು ಮೈಯೆಲ್ಲ ಮಾತಾಗುತ್ತೇನೆ.

ಮನುಷ್ಯನನ್ನು ದುಃಖ, ಅಸಹನೆ, ನಿರಾಸೆ, ವಿಕಾರ, ಆತ್ಮನಿಂದೆ, ಲೌಕಿಕ ಸಂಕಟ ಇವೆಲ್ಲವುಗಳಿಂದಲೂ ಬಿಡುಗಡೆ ಮಾಡಬಲ್ಲಂತಹ ಅದ್ಭುತ ಚೈತನ್ಯವೇ-ಪ್ರೇಮ! ಎಷ್ಟು ಬೊಗಸೆ ಕುಡಿದರೂ ಸಾಲದು. ಇದೊಂದು ವಿಷಯದಲ್ಲಿ ಮನುಷ್ಯ ನಿರಂತರ ದಾಹಿ. ಒಂದೇ ಒಂದು ಹಿಡಿ ಪ್ರೀತಿ ದೊರೆತ ಮನುಷ್ಯ ಬದುಕಿನ ಯಾವ ಹೋರಾಟದಲ್ಲೂ ಕೈ ಸೋತು ಮಲಗಲಾರ. ಹಾಗಂತ ನಂಬಿರುವವನು ನಾನು; ನಿಮ್ಮಂತೆಯೇ.

'ಮಾಂಡೋವಿ'ಯ ಬಗ್ಗೆ ಈತನಕ ಯಾವುದೇ ಪತ್ರಿಕೆಯಲ್ಲಿ ವಿಮರ್ಶೆ ಪ್ರಕಟವಾಗಲಿಲ್ಲ. ಕನ್ನಡದ ವಿಮರ್ಶಕ ಜಾತಿ, ಅಂತಸ್ತು, ಹುದ್ದೆ ಮತ್ತು ಲಾಬಿಗಳನ್ನು ಮೊದಲು ಸ್ಟಡಿ ಮಾಡಿ ಆಮೇಲೆ ಪುಸ್ತಕ ಕೈಗೆತ್ತಿಕೊಳ್ಳುತ್ತಾನೆ. ಜಗತ್ಪ್ರಸಿದ್ಧ ಲೇಖಕ, ನೊಬೆಲ್ ವಿಜೇತ ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ್‌ನ ಅಪರೂಪದ ಕೃತಿಯೊಂದು ಕನ್ನಡಕ್ಕೆ ಬಂದರೆ ಆ ಬಗ್ಗೆ ಸಣ್ಣದೊಂದು ಚರ್ಚೆ ಕೂಡ ಆಗುವುದಿಲ್ಲವೆಂದರೆ - ಅದಕ್ಕೇನನ್ನಬೇಕೋ ಅರ್ಥವಾಗುತ್ತಿಲ್ಲ.

**- ರವಿ ಬೆಳಗೆರೆ**

# ಚಿಕ್ಕೋಡಿ ಜಿಲ್ಲೆ : ಕೆಲವು ಸಮಸ್ಯೆಗಳು

**ಬೆ**ಳಗಾವಿ ಜಿಲ್ಲೆಯನ್ನು ವಿಭಜಿಸಿ ಬೆಳಗಾವಿ, ಗೋಕಾಕ ಹಾಗೂ ಚಿಕ್ಕೋಡಿ ಜಿಲ್ಲೆಯನ್ನಾಗಿ ಮಾಡುವ ನಿರ್ಧಾರವನ್ನು ಸರಕಾರ ಕೈಕೊಂಡರೆ ವಿಕೇಂದ್ರೀಕರಣದ ದೃಷ್ಟಿಯಿಂದ ಸ್ವಾಗತಾರ್ಹ. ಆದರೆ ಜಿಲ್ಲೆಯ ಪುನರ್ವಿಂಗಡಣೆ ಕೆಲವು ಹೊಸ ಸಮಸ್ಯೆಗಳನ್ನು ಹುಟ್ಟು ಹಾಕುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ.

ಬೆಳಗಾವಿ ಪ್ರದೇಶ ಮೊದಲಿನಿಂದಲೂ ಗಡಿ ಸಮಸ್ಯೆಯಿಂದಾಗಿ ಸಾಕಷ್ಟು ವಾದ ವಿವಾದಕ್ಕೆ ಗ್ರಾಸವನ್ನೊದಗಿಸಿದ ಅತ್ಯಂತ ಪ್ರಕ್ಷುಬ್ಧ ಪ್ರದೇಶ. ಈ ಜಿಲ್ಲಾ ವಿಭಜನೆಯಿಂದಾಗಿ ಮರಾಠಿ ಸಂಘಟನೆಗಳು ಮತ್ತೆ ಪ್ರಬಲಗೊಳ್ಳುವ ಸಾಧ್ಯತೆಯಿದೆ. ಖಾನಾಪುರ, ಬೆಳಗಾವಿ ತಾಲೂಕುಗಳು ಒಂದಾಗಿ ಪಂಚಾಯಿತಿ ಚುನಾವಣೆಯಿಂದ ಹಿಡಿದು ಲೋಕಸಭಾ ಚುನಾವಣೆಯವರೆಗೆ ತಮ್ಮದೇ ಹಿಡಿತ ಬಲಪಡಿಸುವ ಪ್ರಯತ್ನದಲ್ಲಿ ತೊಡಗಿದರೆ ಅಚ್ಚರಿ ಪಡಬೇಕಿಲ್ಲ. ಚಿಕ್ಕೋಡಿ ಜಿಲ್ಲೆಯ ಬೇಡಿಕೆಯ ಜೊತೆಗೆ ನಿಪ್ಪಾಣಿಯ ಜನ ನಿಪ್ಪಾಣಿಯನ್ನು ತಾಲೂಕನ್ನಾಗಿ ಮಾಡಬೇಕೆಂಬ ಬೇಡಿಕೆಯನ್ನು ಮುಂದಿಟ್ಟು ಪತ್ರಿಕೆಗಳ ಮುಖಾಂತರ ಹೋರಾಟ ನಡೆಸಿದ್ದಾರೆ. ಹೀಗಾದಲ್ಲಿ ಮೊದಲೇ ನಗರಪಾಲಿಕೆ ಮೇಲೆ ಸಂಪೂರ್ಣ ಹಿಡಿತವಿಟ್ಟುಕೊಂಡ ಮರಾಠಿ ಭಾಷಿಕರಿಗೆ ಬೇರೆ ತಾಲೂಕಿನ ಬೆಂಬಲ ಸಿಗುವದಂತೂ ನಿಶ್ಚಿತ. ಜಿಲ್ಲೆಯ ಗಡಿ ಪ್ರದೇಶ ಆರಂಭದಿಂದಲೂ ಮಹಾರಾಷ್ಟ್ರದ ಕೈಗಾರಿಕಾಭಿವೃದ್ಧಿ, ವ್ಯಾಪಾರ-ವಾಣಿಜ್ಯೋದ್ಯಮ ಕಂಡು ಬರುತ್ತಿತ್ತು. ಅಲ್ಲದೆ ನಿಪ್ಪಾಣಿ ಸಾಂಸ್ಕೃತಿಕವಾಗಿ, ಭಾಷಿಕವಾಗಿ ಎಂದೂ ಚಿಕ್ಕೋಡಿಯೊಂದಿಗೆ ಹೊಂದಿಕೊಂಡೇ ಇಲ್ಲ. ತಾಲ್ಲೂಕು ದರ್ಜೆಯಿಂದಾಗಿ ಅದೊಂದು ಪ್ರತ್ಯೇಕ ಸ್ವಾಯತ್ತತೆಯನ್ನು ಗಳಿಸಿ ಮತ್ತೊಮ್ಮೆ ಗಟ್ಟಿಯಾಗುತ್ತದೆ.

ಚಿಕ್ಕೋಡಿ ಪ್ರದೇಶವು ಗಡಿ ಪ್ರದೇಶಗಳಿಂದಲೇ (ಭೌಗೋಲಿಕವಾಗಿ) ಆವರಿಸಿಕೊಂಡ, ಮೊದಲಿನಿಂದಲೂ ತೀರಾ ನಿರ್ಲಕ್ಷ್ಯಕ್ಕೊಳಗಾದ ಭಾಗ. ಈ ನಗರದ ಕುಡಿಯುವ ನೀರಿನ ಸಮಸ್ಯೆ ಇವತ್ತಿಗೂ ಒಂದು ಚಿದಂಬರ ರಹಸ್ಯವಾಗಿದೆ. ಈ ಪ್ರದೇಶದ ಗಡಿ ಭಾಗದ ಜನರ ಸಂಪರ್ಕ ಹೆಚ್ಚಾಗಿ ಸಾಂಗ್ಲಿ, ಕೊಲ್ಲಾಪುರದೊಂದಿಗೆ ನಡೆಯುತ್ತಿರುವದು ಸರ್ವವಿದಿತ. ಅಷ್ಟೇ ಅಲ್ಲ ಮದುವೆಯಂತಹ ಸಾಂಸ್ಕೃತಿಕ ಸಂಬಂಧವೂ ಮರಾಠಿ ಜನ ಸಮುದಾಯದೊಂದಿಗೆ ಇದೆ. ಈಗ ರಾಯಬಾಗ, ಅಥಣಿ, ಚಿಕ್ಕೋಡಿ ಮೂರು ತಾಲೂಕು ಸೇರಿಸಿ ಜಿಲ್ಲೆಯನ್ನಾಗಿ ನಿರ್ಣಯ ಕೈಕೊಳ್ಳುವ ವದಂತಿ ಇದೆ. ಈ ಹಿನ್ನಲೆಯಲ್ಲಿ ಮೂರು ತಾಲೂಕದ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಹೊಂದಾಣಿಕೆ ಅಗತ್ಯ. ಗಡಿ ಪ್ರದೇಶದ ಅಭಿವೃದ್ಧಿ ಕಾರ್ಯ ಚುರುಕುಗೊಳಿಸಬೇಕು. ಇಲ್ಲಿಯ ಜನಕ್ಕೆ ಸಾಹಿತ್ಯ, ಭಾಷೆಯ ಬಗ್ಗೆ ಮೊದಲಿನಿಂದಲೂ ಅನಾಸಕ್ತಿ. ಮರಾಠಿಗೆ ಪರವಾಗಿದ್ದವರೇ ಲೋಕಸಭಾ ಸದಸ್ಯರಾಗಿರುವುದು ಮತ್ತೊಂದು ಆತಂಕದ ವಿಷಯ. ಇಲ್ಲಿ ದೂದಗಂಗಾ, ಪಂಚಗಂಗಾ, ಕೃಷ್ಣ ಹರಿಯುತ್ತಿದ್ದರೂ, ಅತ್ಯಂತ ಫಲವತ್ತಾದ ಕರೀ ನೆಲವಿದ್ದರೂ ಸರಿಯಾದ ವಿದ್ಯುತ್ ಪೂರೈಕೆಯಿಲ್ಲದೆ ಇಲ್ಲಿಯ ರೈತಾಪಿ ಜನ ಕಂಗಾಲಾಗಿದ್ದಾರೆ. ನೀರಿದ್ದೂ ನೀರಾವರಿ ಯೋಜನೆಯಿಲ್ಲದೆ, ಕಾರ್ಯರೂಪಕ್ಕೆ ಬರದೆ ಕೆಲಪ್ರದೇಶ ಬೆಂಗಾಡಾಗಿದ್ದು ಸತ್ಯ. ರಸ್ತೆ, ಸಾರಿಗೆ, ಮಾರುಕಟ್ಟೆ ಎಲ್ಲವೂ ಅಚ್ಚುಕಟ್ಟಾಗಿಸಬೇಕು. ಮಹಾರಾಷ್ಟ್ರಕ್ಕೆ ಹರಿದು ಹೋಗುವ ಹಣ ಚಿಕ್ಕೋಡಿ ಜಿಲ್ಲೆಯಲ್ಲಿ ಉಳಿಯುವಂತಾಗಬೇಕು. ತಂಬಾಕು, ಕಬ್ಬು ಬೆಳೆದ ಈ ಪ್ರದೇಶ ಆರ್ಥಿಕವಾಗಿ, ಪ್ರಾದೇಶಿಕವಾಗಿ ಏಕೆ ವಿಕಾಸಗೊಳ್ಳುತ್ತಿಲ್ಲ? ಯೋಚಿಸುವಂತಾಗಬೇಕು. ಇಲ್ಲಿಯ ಕನ್ನಡ ಭಾಷಿಕರ ಶೈಕ್ಷಣಿಕ ಸಮಸ್ಯೆಯಂತೂ ಎಂದೂ ಬಗೆಹರಿಯಲಾಗದೆ ಅತ್ಯಂತ ಹೀನ ಸ್ಥಿತಿಗಿಳಿದಿದೆ. ಇದಕ್ಕೆಲ್ಲ ಹೊಸ ಜೀವ ತುಂಬುವ ಕೆಲಸವಾಗಬೇಕು.

ಚಿಕ್ಕೋಡಿ ಜಿಲ್ಲೆಯ ಒಟ್ಟು ಪ್ರದೇಶದಲ್ಲಿ ಪಶ್ಚಿಮ ಭಾಗ, ಉತ್ತರದ ಗಡಿ ಪ್ರದೇಶ ಎಲ್ಲವೂ ಮರಾಠಿಮಯ. ನನ್ನ ಅಂದಾಜಿನ ಪ್ರಕಾರ ಕನ್ನಡ ೩೦ ರಷ್ಟು, ಮರಾಠಿ ೭೦ ರಷ್ಟಿದೆ. ಇಲ್ಲಿ ಕನ್ನಡ ಬದುಕಿದ್ದರೆ ಅದು ಕೇವಲ ಜೈನ ಹಾಗೂ ವೀರಶೈವ ಸಮುದಾಯದವರಿಂದ. ಪ್ರಾಯಶಃ ಉಳಿದವರೆಲ್ಲ ಮರಾಠಿ ಸಂಸ್ಕೃತಿಗೆ ಒಗ್ಗಿಕೊಂಡವರು.

ಒಂದು ಪ್ರದೇಶವನ್ನು ಜಿಲ್ಲೆಯನ್ನಾಗಿ ಘೋಷಿಸಿ ಸರಕಾರ ಕೈತೊಳೆದುಕೊಂಡು ಬಿಡಬಹುದು. ಆದರೆ ಆ ಪ್ರದೇಶವನ್ನು ವಿಕಾಸಗೊಳಿಸುವ ಕೆಲಸ ಆ ಪ್ರದೇಶದ ಪ್ರಜ್ಞಾವಂತ ಜನರದ್ದು. ಯಾವ ರಾಜಕೀಯ ಭಾಷಿತ, ಜಾತಿ-ಜನಾಂಗ ಗೊಂದಲಕ್ಕೆ ಸಿಕ್ಕಿಕೊಳ್ಳದೇ ಇಲ್ಲಿ ಜಿಲ್ಲೆಯನ್ನು ಹೇಗೆ ಅಭಿವೃದ್ಧಿಗೊಳಪಡಿಸಬಹುದು ಎಂಬುದರ ಬಗ್ಗೆ ಈಗ ಜನ ಚಿಂತನಶೀಲರಾಗ ಬೇಕಾಗಿರುವುದೂ ಅಗತ್ಯ.

**○ ಚಂದ್ರಕಾಂತ ಪೋಕಳೆ**
ಬೇಡಕಿಹಾಳ



# ಕಿಲ ಕಿಲ



○ ಗೋಪಾಲಕೃಷ್ಣ ವಂಡ್ಸೆ

## ಒಂದು ದಿನ

ಮಕ್ಕಳೇ,

ನೀವು ಬೆಳಿಗ್ಗೆ ಎದ್ದಾಗಿನಿಂದ ರಾತ್ರಿ ಮಲಗುವ ತನಕ ಏನೇನೋ ಮಾಡುತ್ತಿರುತ್ತೀರಿ. ನೀವು ಮಾಡುವ ಕೆಲಸಗಳಲ್ಲಿ ಕೆಲವು ನಿಮಗೆ ಬಹಳ ಇಷ್ಟವಾಗಿರುತ್ತವೆ. ಉಳಿದವನ್ನು ಹಿರಿಯರ, ಗುರುಗಳ ಹೆದರಿಕೆಯಿಂದ ಮಾಡುತ್ತಿರುತ್ತೀರಿ. ಅಲ್ಲವೆ? ಈ ತಿಂಗಳು ನಿಮಗೆ ಬರೆಯಲು ಇದೇ ವಿಷಯ. ಒಂದು ದಿನದಲ್ಲಿ ನೀವು ಮಾಡುವ ಕೆಲಸಗಳಾವುವು? ನಿಮಗಿಷ್ಟವಿಲ್ಲದೆ ಮಾಡುವ ಕೆಲಸಗಳಾವುವು? ಆರು ವಾಕ್ಯಗಳಲ್ಲಿ ಬರೆಯಿರಿ.

- ❑ ನಿಮ್ಮ ವಯಸ್ಸು ೧೫ ವರ್ಷ ಮೀರಿರಬಾರದು.
- ❑ ನಿಮ್ಮ ಅನಿಸಿಕೆಯನ್ನು ಬಿಳಿ ಹಾಳೆಯಲ್ಲಿ ಬರೆದು ಇದೇ ಸಂಚಿಕೆಯ ೬೫ನೇ ಪುಟದಲ್ಲಿರುವ ಕಿಲಕಿಲ ಕೂಪನ್-ಅನ್ನು ಲಗತ್ತಿಸಿ ಈ ಕೆಳಗಿನ ವಿಳಾಸಕ್ಕೆ ಅಂಚೆಯಲ್ಲಿ ಕಳಿಸಿ.
- ❑ ನಿಮ್ಮ ಬರಹ ನಮಗೆ ತಲುಪಲು ಕೊನೆಯ ದಿನಾಂಕ : ೧-೧೦-೧೯೯೭.

ಸಂಪಾದಕರು, **ಬಿಸಿಲ ಬದುಕು** ಅಂಚೆ ಪೆಟ್ಟಿಗೆ ೭೯೫೧,
ಬಸವೇಶ್ವರನಗರ, ಬೆಂಗಳೂರು-೭೯.

**ಚಿಣ್ಣರೆ,**
**ಈ ತಿಂಗಳ ಪುಟಾಣಿ ಪದ್ಯಗಳಲ್ಲಿ ಆರು ಸಾಕು ಪ್ರಾಣಿಗಳು ನಿಮ್ಮ ಮುಂದೆ ಬಂದಿವೆ. ಓದುತ್ತಿರುವಾಗಲೇ ಅವುಗಳ ಹೆಸರು ಊಹಿಸುವುದರೊಂದಿಗೆ ನಿಮ್ಮ ಜಾಣತನವನ್ನು ಪ್ರದರ್ಶಿಸುವಿರಿ ತಾನೇ!?**

೧

ನನಗೆ ಹೇಳ್ವರು
ಮರು ಭೂಮಿ ಹಡಗು
ಹುಲ್ಲನು ಕಂಡರೆ
ಮಾಡುವೆ ತುಡುಗು
ಗೋಣಲಿ ತೋರುವೆ
ಬಳುಕುವ ಬೆಡಗು
ಜಾಣೆಯೆ ತಕ್ಷಣ
ಉತ್ತರ ಮಡಗು !

೨

ಉಷಾಗೂ ಮೇಲು
ನನ್ನ ಓಟ
ನಾನು ಓಡಿದರೆ
ಆಡ್ವರು ಆಟ
ಓದುವ ಮೊದಲು
ಶಾಲೆಯ ಪಾಠ
ಹೇಳಿರೆ ಕೊಡಿಸುವೆ
ಬಣ್ಣದ ಪೇಟ !

೩

ನಾನು ಬಹಳ
ಮುಗ್ಧನಂತೆ
ನನ್ನ ಮೈಯು
ಉಣ್ಣೆಯಂತೆ
ನನ್ನ ಕಡಿದು
ತಿನ್ನುವರಂತೆ
ನಾನ್ಯಾರು ನೀವು
ಮಾಡ್ವಿರಾ ಚಿಂತೆ?

೪

ಮನೆಯ ಒಳಗೆ
ನನ್ನ ಇರುವು
ಹುಲಿಯ ಹಾಗೆ
ನನ್ನ ಮೊಗವು
ಇಲಿಗಳ ಕಂಡರೆ
ಮಾಡಿಸುವೆ ತೆರವು
ನೋಡೋಣ ಜಾಣರೆ
ಹಿಡಿಯಿರಿ ಸುಳಿವು !

೫

ನಾನು ತಿನ್ನದ
ಸೊಪ್ಪು ಇಲ್ಲ
ನನ್ನಷ್ಟು ಚುರುಕು
ಯಾರೂ ಇಲ್ಲ
ನಾನು ಯಾರೆಂದು
ಹೇಳಿರೆ ಮೆಲ್ಲ
ಕುಡಿಯಲು ಕೊಡುವೆ
ಹಾಲನು ಎಲ್ಲ !

೬

ನಿಷ್ಠೆಯ ಇಟ್ಟು
ಮನೆಯ ಕಾಯುವೆ
ಕಳ್ಳರು ಬಂದರೆ
ಬೊಬ್ಬೆ ಇಡುವೆ
ಪೊಲೀಸರಿಗೆ ಅವರ
ಸುಳಿವು ನೀಡುವೆ
ಏನೇ ಜಾಣೆ
ಯಾರೆಂದು ಹೇಳುವೆ?

**ಉತ್ತರ :**

| | |
|---|---|
| ೧. ಒಂಟೆ | ೪. ಬೆಕ್ಕು |
| ೨. ಕುದುರೆ | ೫. ಆಡು |
| ೩. ಕುರಿ | ೬. ನಾಯಿ |

# ನಾನು ಏನಾಗುವೆ?

**ಕಳೆದ ಸಂಚಿಕೆಯಲ್ಲಿ "ನಾನು ಏನಾಗುವೆ?" ಎಂಬ ವಿಷಯದ ಬಗ್ಗೆ ಅಭಿಪ್ರಾಯ ಕಳುಹಿಸಲು ೧೫ ವರ್ಷದೊಳಗಿನ ಮಕ್ಕಳಿಗೆ ಸೂಚಿಸಿದ್ದೆವು. ನಾಡಿನ ಮೂಲೆ ಮೂಲೆಗಳಿಂದ ನಮ್ಮ ಕಚೇರಿಗೆ ಹರಿದುಬಂದ ಕಾಗದಗಳ ರಾಶಿ ಬಹಳ ದೊಡ್ಡದು. ಅವುಗಳಲ್ಲಿ ಆಯ್ದ ಕೆಲವನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ.**

## ಪತ್ರಿಕೋದ್ಯಮಿ

ಅಂಕಲ್, ನಾನೂ ನಿಮ್ಮ ಹಾಗೆ ಪತ್ರಿಕೋದ್ಯಮಿಯಾಗಿ ಜನರ ಹಕ್ಕನ್ನು ಅವರಿಗೆ ಕೊಡಿಸಲು ಹೋರಾಡುತ್ತೇನೆ. ಪತ್ರಿಕೆಯ ಮೂಲಕ ಅವರಿಗೆ ಉದ್ಯೋಗಾವಕಾಶಗಳನ್ನು, ಸ್ವಂತ ಉದ್ಯೋಗಕ್ಕೆ ಬೇಕಾಗುವ ಸೌಲಭ್ಯಗಳನ್ನು ತಿಳಿಸುವೆನು. ಸರಕಾರದ ಯೋಜನೆಗಳನ್ನು ಅವರಿಗೆ ಲಭ್ಯವಾಗುವಂತೆ ಮಾಡುವೆನು.

-ರವಿ ಬಸಕ್ರಿ (೮ನೇ ತರಗತಿ)
ಬೆಳಗಾವಿ

## ದಕ್ಷ ರಾಜಕಾರಣಿ

ನಾನು ದೊಡ್ಡವನಾದ ಮೇಲೆ ರಾಜಕೀಯ ಕ್ಷೇತ್ರಕ್ಕೆ ಪ್ರವೇಶಿಸುತ್ತೇನೆ. ನಾನು ಒಬ್ಬ ನಿಷ್ಠಾವಂತ ರಾಜಕಾರಣಿಯಾಗಿ, ನನ್ನ ಕ್ಷೇತ್ರದ ಸರ್ವಾಂಗೀಣ ಅಭಿವೃದ್ಧಿಗಾಗಿ ಪ್ರಾಮಾಣಿಕತೆಯಿಂದ ದುಡಿದು, ನನ್ನ ಕ್ಷೇತ್ರದ ಜನರ ಪ್ರೀತಿಗೆ ಪಾತ್ರನಾಗಿ, ಜನಪ್ರಿಯ ರಾಜಕಾರಣಿಯಾಗುತ್ತೇನೆ.

- **ಗುಂಡಾನಾಯ್ಕ** (೪ನೇ ತರಗತಿ)
ದೂಪದಹಳ್ಳಿ ತಾಂಡ

## ಕನ್ನಡ ಪ್ರಾಧಿಕಾರದ ಅಧ್ಯಕ್ಷನಾಗುವೆ

ನಾನು ಪ್ರಾಥಮಿಕ ಶಾಲೆಯಿಂದ ಹಿಡಿದು ಪದವಿಯವರೆಗೂ ನನ್ನ ಶಿಕ್ಷಣವನ್ನು ಕನ್ನಡ ಮಾಧ್ಯಮದಲ್ಲಿಯೇ ಮುಗಿಸುವೆ. ಆಡಳಿತದ ಎಲ್ಲ ವಿಭಾಗದಲ್ಲಿ ಕನ್ನಡ ಆಡಳಿತ ಭಾಷೆಯಾಗಬೇಕಾಗಿದೆ, ಏಕೆಂದರೆ ಇಂದು ದೊಡ್ಡ ಪಟ್ಟಣಗಳಾದ, ಬೆಳಗಾವಿ, ಕೊಡಗು, ಅಷ್ಟೆ ಏಕೆ ನಮ್ಮ ರಾಜ್ಯದ ರಾಜಧಾನಿಯಾದ ಬೆಂಗಳೂರಿನಲ್ಲಿಯೇ ನಮ್ಮ ಕನ್ನಡದ ಭಾಷಾ ಪ್ರೇಮ ಕಡಿಮೆಯಾಗುತ್ತಿದೆ. ಆದ್ದರಿಂದ ಎಲ್ಲ ಹಂತದಲ್ಲೂ ಕನ್ನಡ ಬಳಕೆಯಲ್ಲಿ ಬರುವಂತೆ ನೋಡಿಕೊಳ್ಳಲು ನಾನು ಕನ್ನಡ ಪ್ರಾಧಿಕಾರದ ಅಧ್ಯಕ್ಷನಾಗುವೆ.

- **ಹಾಲಪ್ಪ** (೪ನೇ ತರಗತಿ)
ನಾಗರಮಡುವು

## ಸಬ್ ಇನ್‌ಸ್ಪೆಕ್ಟರ್

ನಾನು ದೊಡ್ಡವನಾದ ಮೇಲೆ ಸಮಾಜದಲ್ಲಿ ಒಬ್ಬ ಶ್ರೇಷ್ಠ ವ್ಯಕ್ತಿಯಾಗಬೇಕೆಂದಿರುವೆ. ನಾನು ಪೊಲೀಸ್‌ವೃತ್ತಿಯನ್ನು ಕೈಗೊಂಡು ಸಬ್ ಇನ್‌ಸ್ಪೆಕ್ಟರ್ ಆಗಬೇಕೆಂದಿರುವೆ. ಸಮಾಜದಲ್ಲಿ ಈಗ ಹೆಚ್ಚಾಗುತ್ತಿರುವ ಲಂಚಗುಳಿತನ, ಭ್ರಷ್ಟಾಚಾರ, ಅನ್ಯಾಯ, ಅಕ್ರಮಗಳನ್ನು ತಡೆಯಬೇಕೆಂದಿರುವೆ. ದೇಶಕ್ಕೆ ಅಪಾಯ ತರುವಂತಹ ವ್ಯಕ್ತಿಗಳನ್ನು ಸೆರೆಹಿಡಿದು ದೇಶದ ರಕ್ಷಣೆ ಮಾಡಬೇಕೆಂಬ ಛಲ ತೊಟ್ಟಿರುವೆ.

- **ಗುರುರಾಜ** (೩ ನೇ ತರಗತಿ)
ಮಸ್ಕಿ

## ಟೀಚರ್

ನಾನು ದೊಡ್ಡವಳಾದ ಮೇಲೆ ಟೀಚರ ವೃತ್ತಿಯನ್ನು ಮಾಡುತ್ತೇನೆ. ಮುಂದೆ ಬರುವ ವಿದ್ಯಾರ್ಥಿಗಳನ್ನು ಪ್ರೀತಿಯಿಂದ ನೋಡಿಕೊಳ್ಳುವೆನು. ಅವರಿಗೆ ಒಳ್ಳೆಯ ಶಿಕ್ಷಣ ನೀಡುವೆನು. 'ಉತ್ತಮ ಶಿಕ್ಷಕಿ' ಎಂಬ ಗೌರವ ಪಡೆಯಬೇಕೆಂಬುದೇ ನನ್ನ ಆಸೆ.

**ಅನಿತಾ ಅ. ಡಂಬಳ** (೪ನೇ ತರಗತಿ)
ಕಲಾದಗಿ

## ಡಾಕ್ಟರ್

ಡಾಕ್ಟರ್ ಆಗಬೇಕೆಂಬುದು ನನ್ನ ಆಸೆ. ನಾನು ಡಾಕ್ಟರ್ ಆಗಿ ಬಡವರನ್ನು ಕಮ್ಮಿ ಫೀಜ್‌ನಿಂದ ನೋಡಿ ರಕ್ಷಿಸಬೇಕೆಂಬುದು ನನ್ನ ಗುರಿ.

**ಎಂ. ಝುಡ್. ಮಹಮ್ಮದ್** (೯ನೇ ತರಗತಿ)
ಬಳ್ಳಾರಿ.

## ಕುಟುಂಬ ಯೋಜನೆಗೆ ಒತ್ತು

ನಾನು ಪ್ರತಿಭಾವಂತ ಡಾಕ್ಟರ್ ಆಗಿ ಹಳ್ಳಿಯಲ್ಲಿ ದವಾಖಾನೆ ತೆಗೆದು ಬಡಬಗ್ಗರಿಗೆ ಸಹಾಯ ಮಾಡುವೆ. ಪ್ರತಿಯೊಬ್ಬರಿಗೂ ಕುಟುಂಬ ಯೋಜನೆ ಸೂತ್ರ ತಿಳಿಸಿ, ಆರೋಗ್ಯದ ಅರಿವು ಮೂಡಿಸುತ್ತೇನೆ.

- ***ಸಂತೋಷಿಣಿ ಹುಲಿಕಂತಿಮಠ*** (*೫ನೇ ತರಗತಿ*)
ಬ್ಯಾಡಗಿ

## ತಮ್ಮನ ಕಾಳಜಿ

ದೊಡ್ಡವಳಾದ ಮೇಲೆ ವೈದ್ಯಳಾಗಿ ಸ್ನೇಹಿತರಿಗೆ, ಬಡವರಿಗೆ ಸಹಾಯ ಮಾಡುವೆ. ತಮ್ಮನಿಗೆ ಚೆನ್ನಾಗಿ ಓದಲು ಹಚ್ಚುವೆ.

**- ಪ್ರಿಯಾಂಕ ಬಿ.ಎಂ** (೩ನೇ ತರಗತಿ)
ಹರಪನಹಳ್ಳಿ

## ಪರಮವೀರ ಚಕ್ರ

ನಾನು ಚೆನ್ನಾಗಿ ಓದಿ ಒಳ್ಳೆಯ ವ್ಯಕ್ತಿಯಾಗಿ ದೇಹವನ್ನು ಚೆನ್ನಾಗಿ ಬೆಳೆಸಿ ಮಿಲಿಟರಿ ಸೇರಿ ಈ ದೇಶವನ್ನು ಶತ್ರುಗಳಿಂದ ರಕ್ಷಿಸುತ್ತೇನೆ. ದೇಶ ರಕ್ಷಣೆಗಾಗಿ ಪ್ರಾಣವನ್ನೇ ನೀಡಿ ಮರಣೋತ್ತರ 'ಪರಮವೀರ ಚಕ್ರ' ಪ್ರಶಸ್ತಿ ಪಡೆಯಬಯಸುವೆ.

**- ಮಕ್ತಮ್‌ಸಾಬ ಮರಗಲ್** (೯ನೇ ತರಗತಿ)
ಮೋರಟಗಿ

## ಹಳ್ಳಿ ಮೇಷ್ಟ್ರು

ಹಳ್ಳಿಗಳಲ್ಲಿ ಶಿಕ್ಷಕರಿಲ್ಲದೆ ಶಾಲಾವಿದ್ಯಾರ್ಥಿಗಳು ಹಿಂದುಳಿಯುತ್ತಿದ್ದಾರೆ. ನಾನು ಶಿಕ್ಷಕನಾಗಿ ಅವರ ಏಳಿಗೆಗಾಗಿ ದುಡಿಯುವೆ.

**-ಎ. ವೀರೇಶ** (೭ನೇ ತರಗತಿ)
ಬಾದನ ಹಟ್ಟಿ

## ಮೊದಲು ಪದವಿ

ಪತ್ರಿಕೆ, ದೂರದರ್ಶನಗಳಲ್ಲಿ ಬರುವುದನ್ನು ಓದಿದಾಗ, ನೋಡಿದಾಗ ನಾನು ಹಾಗೇ ಆಗಬೇಕು ಅನ್ನಿಸುತ್ತದೆ. ಮೊದಲು ಉನ್ನತ ಪದವಿ ಪಡೆದು ನಂತರ ಅಂತಹ ಹುದ್ದೆ ಗಿಟ್ಟಿಸುವ ಚಲ ನನ್ನದು.

**- ಎ. ಎಸ್. ಆಶಾ** (೮ನೇ ತರಗತಿ)
ಕೊಂಡಜ್ಜಿ

## ಕಲಾವಿದ

ನನಗೆ ಚಿತ್ರಕಲೆಯಲ್ಲಿ ತುಂಬಾ ಆಸಕ್ತಿ. ಮುಂದೆ ನಾನೊಬ್ಬ ಚಿತ್ರಕಲಾವಿದನಾಗಬೇಕೆಂಬ ಹಿರಿಯಾಸೆ ಇದೆ. ಆ ನಿಟ್ಟಿನಲ್ಲಿ ಶ್ರದ್ಧೆಯಿಂದ ಚಿತ್ರಕಲೆಯನ್ನು ಕಲಿತು, ನಮ್ಮ ನಾಡಿನ ಭವ್ಯ ಪರಂಪರೆಯನ್ನು ಚಿತ್ರದಲ್ಲಿ ತೋರಿಸಲು ಶ್ರಮಿಸುವೆ. ಕಲಾವಿದರಾದ ಕೆ.ವೆಂಕಟಪ್ಪ, ಕೆ.ಕೆ. ಹೆಬ್ಬಾರ್, ಎಸ್. ಎಂ. ಪಂಡಿತ್, ಪಿ. ಆರ್. ತಿಪ್ಪೇಸ್ವಾಮಿಯರಂತೆ ನಾಡಿನ ಕೀರ್ತಿ ಮೆರೆಸುವ ಕಲಾವಿದನಾಗಲು ಪ್ರಯತ್ನಿಸುವೆ.

**- ನಾಭಿರಾಜ ಡಿ. ಅಕ್ಕಿ** (೯ನೇ ತರಗತಿ)
ಗೋಗಿ

## ಬಡವರ ವೈದ್ಯೆ

ನಾನು ದೊಡ್ಡವಳು ಆದ ಮೇಲೆ ಡಾಕ್ಟರ್ ಆಗುವೆ. ಒಂದು ದೊಡ್ಡ ದವಾಖಾನೆಯನ್ನು ಕಟ್ಟಿಸುವೆ. ಬಡವರಿಗೆ ಹೆಚ್ಚು ರೊಕ್ಕಾ ಕೇಳುವುದಿಲ್ಲ. ರೋಗ ಲಗೂ ಕಡಿಮೆ ಆಗುವ ಔಷಧವನ್ನು ಕೊಡುವೆ.

**- ಕೀರ್ತಿ ಲದವಾ** (೨ನೇ ತರಗತಿ)
ಗದಗ

## ಇಂಜಿನಿಯರ್

ನಾನು ಇಂಜನೀಯರ್ ಆಗಿ ಕರ್ತವ್ಯಕ್ಕೆ ಒತ್ತುಕೊಟ್ಟು ಉತ್ತಮ ಕಾರ್ಯ ನಿರ್ವಹಿಸುವೆ. ಹಣವನ್ನು ದುರುಪಯೋಗ ಪಡಿಸಿಕೊಳ್ಳದೇ ಉತ್ತಮ ಸೇತುವೆ, ರಸ್ತೆ ಮತ್ತು ಕಟ್ಟಡಗಳನ್ನು ನಿರ್ಮಿಸಲು ಶ್ರಮಿಸುವೆ. ಸರ್ಕಾರಿ ವಾಹನಗಳನ್ನು ದುರುಪಯೋಗಪಡಿಸಿಕೊಳ್ಳುವವರನ್ನು ಮತ್ತು ಹಣವನ್ನು ದುರುಪಯೋಗಪಡಿಸಿಕೊಳ್ಳುವವರನ್ನು ಕಾನೂನಿಗೆ ಒಪ್ಪಿಸುವೆ. ನಮ್ಮ ರಾಜ್ಯದಲ್ಲಿಯೇ ಉತ್ತಮ ಕಾರ್ಯ ನಿರ್ವಾಹಕ ಇಂಜಿನಿಯರ್ ಎನಿಸಿಕೊಳ್ಳುವೆ.

**- ಚಂದ್ರಮಣಿ ವಿ.ಡಿ** ( ೧೦ ನೇ ತರಗತಿ)
ಭೀಮರಾಯನಗುಡಿ

## ಮಹಿಳಾ ಜಿಲ್ಲಾಧಿಕಾರಿ

**ನಾನು ಸರಿಯಾಗಿ ಓದಿ ದೇಶದ ಅತ್ಯುನ್ನತ ಪರೀಕ್ಷೆಯಾಗಿರುವ I.A.S ಪಾಸಾಗಿ ಜಿಲ್ಲಾಧಿಕಾರಿಯಾಗಲೂ ದಿಟ್ಟ ಮನಸ್ಸನ್ನು ಮಾಡಿದ್ದೇನೆ. ಕಾರಣ ಕರ್ನಾಟಕದಲ್ಲಿ ೪-೫ ಮಹಿಳಾ ಜಿಲ್ಲಾಧಿಕಾರಿಗಳಿದ್ದಾರೆ. ಅವರು ದಕ್ಷ ಆಡಳಿತಗಾರರು ಎಂದು ಮುಖ್ಯಮಂತ್ರಿ ಜೆ. ಎಚ್. ಪಟೇಲರು ಹೇಳಿದ್ದಾರೆ. ಅಂದರೆ ಮಹಿಳೆಯರು ಅಚ್ಚುಕಟ್ಟಾಗಿ ಕಾರ್ಯನಿರ್ವಹಿಸುತ್ತಾರೆಂದಾಯಿತು.**

**- ಎಸ್. ವಿಜಯಲಕ್ಷ್ಮಿ** (೯ನೇ ವರ್ಗ)
ಹುಲಗಿನಾಳ

## ಹಣಕ್ಕಾಗಿ ಅಲ್ಲ

ನಾನು ಚೆನ್ನಾಗಿ ಅಭ್ಯಸಿಸಿ ಡಾಕ್ಟರ್ ಆಗಬಯಸುತ್ತೇನೆ. ಈಗ ಜನಸಂಖ್ಯೆ ಹೆಚ್ಚಾಗುತ್ತಿರುವುದರಿಂದ ನಾನು ಡಾಕ್ಟರ್ ಆಗುವಷ್ಟರಲ್ಲಿ ಇನ್ನೂ ಹೆಚ್ಚಿನ ಭಯಂಕರ ರೋಗಗಳು ಬರುವ ಸಾಧ್ಯತೆ ಇದೆ. ನಾನು ಡಾಕ್ಟರ್‌ನಾಗಿ ಗ್ರಾಮದಲ್ಲಿ ವಾಸಿಸಿ ಬಡ ಜನರ ಸೇವೆ ಮಾಡುತ್ತೇನೆ. ನಾನು ಡಾಕ್ಟರನಾಗಬಯಸುವುದು ಹಣ ಸಂಪಾದನೆಗೆ ಅಲ್ಲ.

**- ಮನಮೋಹನ ಇಟಕಂಪಳ್ಳಿ** (೬ನೇ ತರಗತಿ)
ಬೀದರ್

## ಜಿಲ್ಲಾಧಿಕಾರಿ

ನಾನು ದೊಡ್ಡವಳಾದ ಮೇಲೆ ಜಿಲ್ಲಾಧಿಕಾರಿಯಾಗಬೇಕೆಂದು ಬಯಸಿದ್ದೇನೆ. ನಾನು ಜಿಲ್ಲಾಧಿಕಾರಿಯಾದ ಮೇಲೆ ನನ್ನ ಜಿಲ್ಲೆಯನ್ನು ಶುಚಿಯಾಗಿಡುತ್ತೇನೆ. ನನ್ನ ಜಿಲ್ಲೆಯಲ್ಲಿಯ ಭ್ರಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ರಕ್ಷಿಸಿ ಸ್ವಚ್ಛ ಆಡಳಿತಕ್ಕೆ ನಾಂದಿ ಹಾಕುತ್ತೇನೆ. ನನ್ನ ಜಿಲ್ಲೆಯಲ್ಲಿ ನೀರಿನ ಅಥವಾ ಯಾವುದೇ ತೊಂದರೆ ಬರದಂತೆ ನೋಡಿಕೊಳ್ಳುತ್ತೇನೆ. ನನ್ನ ಜಿಲ್ಲೆಯ ಪರಿಸರವನ್ನು ಕಲುಷಿತವಾಗದಂತೆ ನೋಡಿ ಕೊಳ್ಳುತ್ತೇನೆ.

ನನ್ನ ಕರ್ತವ್ಯವೇ ನನಗೆ ದೇವರು.

**- ಹರ್ಷಾ ಕ್ಯಾಲಕೊಂಡ** (೪ ನೇ ತರಗತಿ)
ಹುಬ್ಬಳ್ಳಿ

# ಇವರಿಬ್ಬರು

## ಶ್ರೀಕಾಂತ ಕುಲಕರ್ಣಿ

ಸಿನಿಮಾರಂಗದಲ್ಲಿ ಮಹಾತ್ವಾಕಾಂಕ್ಷಿಗಳಿಗಷ್ಟೇ ಜಾಗ ಎನ್ನುವುದು ಸಾಬೀತಾಗಿದೆ. ಅದರಲ್ಲೂ ನಿರ್ದೇಶನದಂಥ ತಾಂತ್ರಿಕ ಕೌಶಲ್ಯ, ಸೃಜನಶೀಲ ಯೋಚನೆ ಇವೆರಡನ್ನೂ ಬೇಡುವ ಕ್ಷೇತ್ರದಲ್ಲಿ ಮಹಾತ್ವಾಕಾಂಕ್ಷೆಗೆ ಭಂಡ ಧೈರ್ಯವೂ ಸಂಗಾತಿಯಾಗಿರಲೇಬೇಕು. ಇವೆರಡೂ ಇಲ್ಲದೆ ಎನ್ನ ಪಾಡೆನಗಿರಲಿ ಎನ್ನುವವರು ಎತ್ತರಕ್ಕೆ ಏರಲಾರರು ಎನ್ನುವುದಕ್ಕೆ ಇಲ್ಲಿ ಇಬ್ಬರು ಉದಾಹರಣೆಯಾಗಿ ನಿಂತಿದ್ದಾರೆ. ಶ್ರೀಕಾಂತ ಕುಲಕರ್ಣಿ ಹಾಗೂ ಶಂಕರಲಿಂಗ ಸುಗ್ನಳ್ಳಿ. ಇವರಿಬ್ಬರೂ ಚಿತ್ರರಂಗದಲ್ಲಿ ತಮ್ಮ ಹೆಸರು ನೋಂದಾಯಿಸಿಕೊಂಡು ೧೦ ವರ್ಷಗಳೇ ಕಳೆದಿವೆ. ಸಾಧನೆಯ ಪಟ್ಟಿಯಲ್ಲಿ ಇತರೇ ವಿವರಗಳೇ ಜಾಸ್ತಿ.

ನರಗುಂದದ ರಾಮಚಂದ್ರ ಕುಲಕರ್ಣಿ ಹಾಗೂ ಇಂದುಮತಿ ದಂಪತಿಗಳ ಪುತ್ರನಾಗಿ ಜನಿಸಿದ ಶ್ರೀಕಾಂತ.. ಎಂಬಲ್ಲಿಂದ ಒಬ್ಬರ ಬಯೋಡಾಟ ಶುರುವಾಗುತ್ತದೆ. ಅಪ್ಪ ಕೆ ಎಸ್ ಆರ್‌ಟಿಸಿ ಉದ್ಯೋಗಿ, ಮಗನಿಗೆ ಎಂದಿನಂತೆ ನಾಟಕದ ಗೀಳು, ಆರಂಭದಲ್ಲಿ ಮಾಡಿದ್ದು ಮಿಮಿಕ್ರಿ. ಆನಂತರ ಧಾರವಾಡ-ಹಾವೇರಿಯಲ್ಲಿ ಕಾಲೇಜ್ ಓದುತ್ತಿದ್ದಾಗ ನಾಟಕ ನಿರ್ದೇಶನ. ೮೫-೮೬ರಲ್ಲಿ ಬೆಂಗಳೂರಿನ ಆದರ್ಶ ಫಿಲಂ ಇನ್‌ಸ್ಟಿಟ್ಯೂಟ್‌ನಲ್ಲಿ ತರಬೇತಿ. ಅಲ್ಲಿ ಹಲವಾರು ನಿರ್ದೇಶಕರ ಪರಿಚಯವಾಯಿತು. ತಾನೂ ಅವರಂತೆ ನಿರ್ದೇಶಕನಾಗಬೇಕು ಎಂಬ ಛಲ ಮೂಡಿತು ಎನ್ನುತ್ತಾರೆ ಕುಲಕರ್ಣಿ.

ಮೊದಲ ಪರಿಚಿತ ಕಟ್ಟೆ ರಾಮಚಂದ್ರ. ಅವರ ಬೀದಿನಾಟಕದಲ್ಲಿ ಚಿಕ್ಕ ಪಾತ್ರ ಪ್ರಾಪ್ತಿ. ಆನಂತರ ಅವರ ನಿರ್ದೇಶನದ ಸಾಕ್ಷ್ಯ ಚಿತ್ರಗಳಲ್ಲಿ ಸಹಾಯಕನ ಪಾತ್ರ. ಡಾಕ್ಯುಮೆಂಟರಿ ಚಿತ್ರವೊಂದರ ಡವಲಪಿಂಗ್ ಹಾಗೂ ೧೬ಎಂ.ಎಂ.ನಿಂದ ೩೫ ಎಂ.ಎಂಗೆ ಬ್ಲೋಅಪ್ ಮಾಡುವುದಕ್ಕಾಗಿ ತನ್ನನ್ನು ಕಟ್ಟೆ ಮದ್ರಾಸಿಗೆ ಕಳುಹಿಸಿದಾಗ ತನ್ನ ಸಾಮರ್ಥ್ಯ ಮೊದಲಬಾರಿ ತನಗೇ ಪರಿಚಯವಾಯಿತು ಎನ್ನುತ್ತಾರೆ ಶ್ರೀಕಾಂತ್. ಯಾಕೆಂದರೆ ಇವರಿಗೆ ತೆಲುಗು-ತಮಿಳು ಭಾಷೆ ಅಪರಿಚಿತ. ಮದ್ರಾಸಿ ಸಂಕಲನಕಾರನಿಗೆ ಕನ್ನಡ ಗೊತ್ತಿಲ್ಲ. ಆದರೂ ಹೇಳಿದ ಕೆಲಸವನ್ನು ಅಚ್ಚುಕಟ್ಟಾಗಿ ಪೂರೈಸಿಕೊಂಡು ಬಂದೆ ಎಂಬ ಹೆಮ್ಮೆ ಇವರದು.



ಬಿ.ಸಿ.ಗೌರಿಶಂಕರ್‌ರ ಏಳುಸುತ್ತಿನ ಕೋಟೆ ಚಿತ್ರದ ಮೂಲಕ ಶ್ರೀಕಾಂತ್ ಸಹಾಯಕ ನಿರ್ದೇಶಕನಾಗಿ ಬೆಳಕಿಗೆ ಬಂದರು. ಅನಂತರ ಎಂ.ಎಸ್.ರಾಜಶೇಖರ್, ಪೇರಾಲ, ವಿಜಯಾರೆಡ್ಡಿ, ದತ್ತು, ರಾಮಮೂರ್ತಿ ಮೊದಲಾದ ಕಮರ್ಷಿಯಲ್ ಚಿತ್ರ ನಿರ್ದೇಶಕರ ಗರಡಿಯಲ್ಲಿ ಪಳಗಿದರು.

ನಟ-ನಿರ್ದೇಶಕ ಟೈಗರ್ ಪ್ರಭಾಕರ್ ಸಾಮೀಪ್ಯ ದೊರೆತ ಬಳಿಕ ಶ್ರೀಕಾಂತ್ ಬೇರೆ ಕಡೆ ತಿರುಗಿಯೂ ನೋಡಲಿಲ್ಲ. ಹಲವಾರು ನಟ-ನಿರ್ದೇಶಕರಿಗೆ ಆಶ್ರಯದಾತನಾಗಿರುವ ಪ್ರಭಾಕರ್ ಇವರನ್ನು ತಮ್ಮ ಖಾಯಂ ಸಹಾಯಕನಾಗಿ ಇಟ್ಟುಕೊಂಡರು. ಆದರೆ ಟೈಗರ್ ಜೊತೆಗೆ ದುಡಿದವರ್‍ಯಾರೂ ಒಂದು ಹಂತಕ್ಕಿಂತ ಮೇಲೇರಿದ ಉದಾಹರಣೆಗಳಿಲ್ಲ. ತಮ್ಮ ಶಿಷ್ಯನಿಗೆ ತಮ್ಮದೇ ನಾಯಕತ್ವದ ವಿಕ್ರಮ್ ಚಿತ್ರವನ್ನು ನಿರ್ದೇಶಿಸಲು ಟೈಗರ್ ಅವಕಾಶ ಕೊಟ್ಟಿದ್ದೇನೋ ಖರೆ. ಆದರೆ ಚಿತ್ರ ಕ್ಲಿಕ್ ಆಗಲಿಲ್ಲ. ಅದರ ಪರಿಣಾಮವೋ ಎಂಬಂತೆ ನಾಲ್ಕು ತಿಂಗಳ ನಿರುದ್ಯೋಗ.

ದೇವರಾಜ್ ನಾಯಕತ್ವದಲ್ಲಿ ಶ್ರೀಕಾಂತ್ ನಿರ್ದೇಶಿಸಿದ ಸೂರ್ಯಕಿರಣ ಹಲವಾರು ವರ್ಷಗಳೇ ಕಳೆದರೂ ಸೂರ್ಯಕಿರಣವನ್ನು ಕಾಣದೇ ಡಬ್ಬದಲ್ಲಿ ಕುಳಿತಿದೆ. ಅನಂತರ ಯಥಾಪ್ರಕಾರ ಪ್ರಭಾಕರ್ ಜೊತೆ ಸಹಾಯಕನಾಗಿ ಮಿಸ್ಟರ್ ಮಹೇಶ್‌ಕುಮಾರ್, ಯಮಕಿಂಕರ, ಬೊಂಬಾಟ್ ಬ್ರದರ್ಸ್ ಚಿತ್ರಗಳಿಗೆ ಸೇವೆ. ಶಿವರಾಜ್‌ಕುಮಾರ್ ನಾಯಕನಾಗಿದ್ದ ಶಿವಸೈನ್ಯಕ್ಕೂ ಇವರೇ ಸಹನಿರ್ದೇಶಕ.

ಸಹಾಯಕ ನಿರ್ದೇಶಕನೊಬ್ಬ ಸ್ವತಂತ್ರ

**ಹಲವಾರು ನಟ-ನಿರ್ದೇಶಕರಿಗೆ ಆಶ್ರಯದಾತನಾಗಿರುವ ಪ್ರಭಾಕರ್ ಇವರನ್ನು ತಮ್ಮ ಖಾಯಂ ಸಹಾಯಕನಾಗಿ ಇಟ್ಟುಕೊಂಡರು. ಆದರೆ ಟೈಗರ್ ಜೊತೆಗೆ ದುಡಿದವರ್‍ಯಾರೂ ಒಂದು ಹಂತಕ್ಕಿಂತ ಮೇಲೇರಿದ ಉದಾಹರಣೆಗಳಿಲ್ಲ.**

ನಿರ್ದೇಶಕನಾಗಿ ಬಡ್ತಿ ದೊರೆತ ಬಳಿಕ ಮತ್ತೆ ಕೆಳಗೆ ಜಾರಲು ಇಷ್ಟಪಡೋಲ್ಲ. ಆದರೆ ಶ್ರೀಕಾಂತ್ ವಿಷಯದಲ್ಲಿ ಅದು ಅನಿವಾರ್ಯವಾಗಿತ್ತು, ಅವಮಾನವನ್ನು ನುಂಗಿಕೊಂಡೇ ದುಡಿದರು. ಇವರ ದುರಾದೃಷ್ಟ ಹೇಗಿದೆಯೆಂದರೆ ಬಹಳ ದಿನಗಳ ನಂತರ ಇವರು ನಿರ್ದೇಶಿಸಿದ ಕಿಂಗ್ ಚಿತ್ರವೂ ಅರ್ಧದಲ್ಲೇ ನಿಂತಿದೆ. ಅಲ್ಲೂ ಪ್ರಭಾಕರ್ ನಾಯಕ.

ಟ.ವಿ.ಮಾಧ್ಯಮ ಜನಪ್ರಿಯವಾದ ನಂತರ ಶ್ರೀಕಾಂತ್‌ನಂಥ ನತದೃಷ್ಟ ನಿರ್ದೇಶಕರಿಗೆ ನೆಲೆ ದೊರಕಿರುವುದಂತೂ ನಿಜ. ರಾಗಲಹರಿ, ಬಾಳತರಂಗ, ಭರ್ಮ, ನೆರೆಕರೆ, ಹೀಗೊಂದು ಕಥೆ, ಖಾದಿಹಾದಿ ಮೊದಲಾದ ಸೀರಿಯಲ್‌ಗಳನ್ನು ಇವರು ನಿರ್ದೇಶಿಸಿದ್ದಾರೆ. ಇನ್ನೂ ಹಲವಾರು ಕೈಲಿವೆಯಂತೆ.

ಒಂದು ಒಳ್ಳೆಯ ಚಿತ್ರ ನಿರ್ಮಾಣದ ಹಿಂದೆ ದುಡಿಯುವ ಅಂಶ ಯಾವುದು ಎಂಬ ಪ್ರಶ್ನೆಗೆ ಶ್ರೀಕಾಂತ್ ಬಳಿ ಉತ್ತರವಿದೆ. 'ನಿರ್ದೇಶಕ ಬುದ್ಧಿವಂತನಾಗಿದ್ದರೆ ಸಾಲದು, ನಿರ್ಮಾಪಕನಿಗೆ ಒಳ್ಳೆ ಟೇಸ್ಟ್ ಬೇಕು, ನಿರ್ದೇಶಕ ಕೇಳುವ ಸವಲತ್ತುಗಳನ್ನು ಒದಗಿಸಬೇಕು'. ಮುಂದೊಂದು ದಿನ ಶ್ರೀಕಾಂತ್ ನಿರ್ಮಾಪಕನಾಗಬಹುದೇನೋ!

# ಇವರಿಬ್ಬರು

## ಶಂಕರಲಿಂಗ ಸುಗ್ನಳ್ಳಿ



**ಶ**ಂಕರಲಿಂಗ ಸುಗ್ನಳ್ಳಿ ನಿರ್ದೇಶಕನಾಗಿದ್ದರ ಹಿಂದೆ ಒಂದು ಸ್ವಾರಸ್ಯದ ಕಥೆ ಇದೆ. ಎ.ಟಿ.ರಘು ನಿರ್ದೇಶನದ ಚಿತ್ರವೊಂದರಲ್ಲಿ ಇವರು ಸಹ ನಿರ್ದೇಶಕನಾಗಿ ದುಡಿಯುತ್ತಿದ್ದರು. ಶೂಟಿಂಗ್ ಸಂದರ್ಭದಲ್ಲಿ ತಮ್ಮ ಸೂಚನೆಯನ್ನು ಪಾಲಿಸದೆ ಹಗಲುಗನಸುಕಾಣುತ್ತಿದ್ದ ಸುಗ್ನಳ್ಳಿಯನ್ನು ಕಂಡು ಕೋಪಾವಿಷ್ಟರಾದ ರಘು ಕಪಾಳಮೋಕ್ಷ ಮಾಡಿಯೇಬಿಟ್ಟರು. ನೂರಾರು ಜನರ ಮುಂದೆ ತನಗಾದ ಅವಮಾನದಿಂದ ರೊಚ್ಚಿಗೆದ್ದ ಸುಗ್ನಳ್ಳಿ ಪಕ್ಕಾ ಸಿನಿಮಾ ಹೀರೋ ಸ್ಟೈಲ್‌ನಲ್ಲಿ ಶಪಥ ಮಾಡಿದರಂತೆ. 'ಒಂದಲ್ಲ ಒಂದು ದಿನ ನಾನು ನಿರ್ದೇಶಕನಾಗಿ ನಿಮ್ಮನ್ನು ಮೀರಿಸ್ತೇನೆ, ನೋಡ್ತಾ ಇರಿ'.

ಮುಂದೊಂದು ದಿನ ಸುಗ್ನಳ್ಳಿ ಶಪಥ ಈಡೇರಿತು ಎನ್ನೋದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ನಾಟಕದ ಕುಟುಂಬದಿಂದ ಬಂದವರು ಶಂಕರಲಿಂಗ. ಅಪ್ಪ ಡ್ರಾಮಾ ಕಂಪೆನಿಯಲ್ಲಿ ಸಂಗೀತದ ಮೇಷ್ಟ್ರು. ದೊಡ್ಡಮ್ಮ ಪಾರ್ವತಿ ಹೊಂಬಾಳೆ ಗುಲ್ಬರ್ಗ ವಿಶ್ವವಿದ್ಯಾಲಯದಲ್ಲಿ ಸಂಗೀತದ ಪ್ರೊಫೆಸರ್. ದೊಡ್ಡಪ್ಪ ಶಂಕರಜೀ ಹೊಂಬಾಳೆ ಭೋಪಾಲ್‌ನಲ್ಲಿ ಡ್ಯಾನ್ಸ್ ಶಾಲೆ ಸ್ಥಾಪಿಸಿದವರು. ಬಡರೈತ ಕುಟುಂಬದಲ್ಲಿ ಶಂಕರಲಿಂಗರೇ ಹಿರಿಮಗ. ಬಡತನದಲ್ಲೇ ಓದು ಮುಗಿಸಿದ ಇವರು ಕನ್ನಡ ಜಾನಪದದಲ್ಲಿ ಎಂ.ಎ. ಪದವೀಧರನಾದರು. ಆಗ ಕರೆಯಿತು ನಾಟಕ.

ಮಲತಾಯಿ, ಸತಿ ಸಂಸಾರ ಜ್ಯೋತಿ ಮೊದಲಾದ ೫೦ ನಾಟಕಗಳಲ್ಲಿ ಇವರೇ ಹೀರೋ ಆಗಿ ನಟಿಸಿದರು. ಕೃಶಕಾಯದ, ಪುಟ್ಟಮುಖದ ಸುಗ್ನಳ್ಳಿ ಸಿನಿಮಾದಲ್ಲಿ ಹೀರೋ ಆಗುವ ಸಾಧ್ಯತೆಯಂತೂ ಇರಲಿಲ್ಲ. ಇರಲಿ, ನಾಟಕ ಮಾಡ್ತಾ ಶಂಕರಲಿಂಗರಿಗೆ ಮೈಲಾರಲಿಂಗನ ಮೇಲೆ ವಿಪರೀತ ಭಕ್ತಿ ಮೂಡಿತು. ಅದನ್ನೇ ನಾಟಕವನ್ನಾಗಿ ಆಡಿದರು.

ಮೈಲಾರಲಿಂಗ ಭಕ್ತನ ಕೈಬಿಡಲಿಲ್ಲ. ನಾಟಕವಾಡುತ್ತಿದ್ದ ಸಂದರ್ಭದಲ್ಲೇ ನಟ ಸುಧೀರ್ ಪರಿಚಯವಾಯಿತು. ದೋಸ್ತಿ ಬೆಳೀತು. ಸುಧೀರ್ ಮೂಲಕವೇ ಸುಗ್ನಳ್ಳಿ ಬೆಂಗಳೂರಿಗೆ ಬಂದರು. ಅದು ೮೦ರ ಆರಂಭದ ದಿನಗಳು. ಅಮೃತಂ ನಿರ್ದೇಶನದ ಮಧುರ ಬಾಂಧವ್ಯ ಚಿತ್ರದಲ್ಲಿ ಸಹನಿರ್ದೇಶಕನಾಗುವ ಅವಕಾಶ ದೊರಕಿತು. ಅನಂತರ ಸೋಮಶೇಖರ್ ನಿರ್ದೇಶನದ ಮೃಗಾಲಯ, ಈ ಜೀವ ನಿನಗಾಗಿ, ಮಿಸ್ಟರ್ ರಾಜ, ಬೇಟೆ, ಬೇಡಿ ಚಿತ್ರಗಳಲ್ಲಿ ಸಹಾಯಕನಾಗಿ ದುಡಿದರು. ಎ.ಟಿ.ರಘು

○ ಕೇಶವ ನಾಡಕರ್ಣಿ

**ಉತ್ತರ ಕರ್ನಾಟಕದ ಜನಪ್ರಿಯ ಕಥೆಯಾದ ಕಡ್ಲಿಮಟ್ಟಿ ಸ್ಟೇಶನ್‌ಮಾಸ್ತರ್ ಸುಗ್ನಳ್ಳಿ ಕೈಗೆ ಸಿಕ್ಕಿ ನರಳುವಂತಾಯ್ತು ಎಂದು ಕೊರಗುವವರೂ ಇದ್ದಾರೆ. ಆದರೆ ಸುಗ್ನಳ್ಳಿಗೆ ಇದರ ಯೋಚನೆಯೇ ಇಲ್ಲ.**

ಅವರ ಅಂತಿಮ ತೀರ್ಪು, ಇನ್‌ಸ್ಪೆಕ್ಟರ್ ಕ್ರಾಂತಿಕುಮಾರ್ ಚಿತ್ರಗಳಿಗೂ ಇವರದ್ದೇ ಸಹನಿರ್ದೇಶನ. ಈ ಹಂತದಲ್ಲಿ ನಿರ್ದೇಶನದಲ್ಲಿ ಒಂದಿಷ್ಟು ಅನುಭವ ಜಮೆಯಾಗಿತ್ತು. ಸ್ವತಂತ್ರ ನಿರ್ದೇಶಕನಾಗಬೇಕೆಂಬ ಆಸೆ ಶುರುವಾಯಿತು. ಆದರೆ ನಿರ್ಮಾಪಕರು ಸಿಗಬೇಕಲ್ಲ. ತಾನೇ ನಿರ್ಮಾಪಕನಾಗೋಣ ಎಂದು ಇನ್ನೊಬ್ಬ ಸ್ನೇಹಿತರ ಜೊತೆ ಸೇರಿ ಮಹಾದಾಸೋಹಿ ಶರಣಬಸವ ಚಿತ್ರವನ್ನು ನಿರ್ಮಿಸಿದರು. ಈ ಚಿತ್ರ ಬೆಂಗಳೂರಲ್ಲಿ ಮೂರೇ ದಿನ ನಡೆದರೂ ಉತ್ತರ ಕರ್ನಾಟಕದೆಲ್ಲೆಡೆ ಜಯಭೇರಿ ಬಾರಿಸಿತು. ಭಕ್ತರೆಲ್ಲಾ ಪ್ರೇಕ್ಷಕರಾದರು. ಗುಲ್ಬರ್ಗದಲ್ಲಿ ೨೫ ವಾರ, ಇಳಕಲ್, ಹುಬ್ಬಳ್ಳಿ, ಗದಗ, ಬಸವಕಲ್ಯಾಣದಲ್ಲಿ ಶತದಿನೋತ್ಸವ ಆಚರಿಸಿತು. ತಾಂತ್ರಿಕವಾಗಿ ತುಂಬಾ ದುರ್ಬಲವಾಗಿದ್ದ ಈ ಚಿತ್ರದಲ್ಲಿ ಕನ್ನಡದ ಪ್ರಸಿದ್ಧ ನಟರೆಲ್ಲಾ ಅತಿಥಿಗಳಾಗಿ ನಟಿಸಿದ್ದು ಸುಗ್ನಳ್ಳಿಗೆ ಅನುಕೂಲವಾಗಿ ಪರಿಣಮಿಸಿತು. ಜೊತೆಗೆ ಭಕ್ತಿಪ್ರಧಾನ ಕಥೆಯನ್ನು ಹೊಂದಿರುವ ಚಿತ್ರ ಹೇಗೇ ಇರಲಿ ಆಯಾ ದೇವರ ಭಕ್ತರು ಅದನ್ನು ಮೆಚ್ಚುತ್ತಾರೆ ಎಂಬ ಸತ್ಯದ ಅರಿವೂ ಸುಗ್ನಳ್ಳಿಗೆ ಆಯಿತು.

ಶರಣಬಸವನ ನಂತರ ಸುಗ್ನಳ್ಳಿ ಕಣ್ಣಿಗೆ ಬಿದ್ದಿದ್ದು ಬ್ರಹ್ಮಾಂಡ ಪುರಾಣ ಗ್ರಂಥ. ಅದನ್ನೇ ಆಧರಿಸಿ ಏಳುಕೋಟೆ ಮಾರ್ತಾಂಡಭೈರವ ಎಂಬ ಪೌರಾಣಿಕ ಚಿತ್ರವನ್ನು ನಿರ್ಮಿಸಿದರು. ಅದು ಬೆಂಗಳೂರಲ್ಲಿ ತೆರೆಕಾಣದಿದ್ದರೂ ಗದಗನಲ್ಲಿ ಶತದಿನೋತ್ಸವವನ್ನು ಆಚರಿಸಿತು. ಆ ಸಂದರ್ಭದಲ್ಲಿ ಸುಗ್ನಳ್ಳಿ ಮನಸ್ಸು ಬದಲಾಯಿತು. ಇತರ ನಿರ್ದೇಶಕರಂತೆ ತಾನೂ ಸ್ಟಾರ್‌ಗಳನ್ನು ಹಾಕಿಕೊಂಡು ಚಿತ್ರ ಮಾಡ್ಬೇಕು ಎಂಬ ಆಸೆ ಮೊಳಕೆಯೊಡೆಯಿತು. ೯೩ರಲ್ಲಿ ವಿಜಯ ಕಂಕಣ ಚಿತ್ರ ಶುರುಮಾಡಿದರು. ಅಂಬರೀಶ್, ಸುಧಾರಾಣಿ, ದೇವರಾಜ್ ಮೊದಲಾದ ಸ್ಟಾರ್‌ಗಳು ಚಿತ್ರದಲ್ಲಿದ್ದರೂ ಶೂಟಿಂಗ್ ಕುಂಟುತ್ತಾ ನಡೆಯಿತು. ಕೊನೆಗೂ ಚಿತ್ರ ಹೊರಬಂದಾಗ ಪ್ರೇಕ್ಷಕರು ಬರಲೇ ಇಲ್ಲ. ಇದೀಗ ಅವರು ನಿರ್ದೇಶಿಸುತ್ತಿರುವ ಕಥೆಯೂ ಅದೇ. ಶೂಟಿಂಗ್ ಶುರುವಾಗಿ ವರ್ಷವೇ ಕಳೆದಿದ್ದು ಇನ್ನೂ ಮುಕ್ತಾಯಗೊಂಡಿಲ್ಲ. ತಾರಾಗಣದಲ್ಲೂ, ಮಾರುಕಟ್ಟೆ ದೃಷ್ಟಿಯಿಂದ ಆಗಾಗ ಹೊಸ ಸೇರ್ಪಡೆಯಾಗುತ್ತಲೇ ಇದೆ. ಉತ್ತರ ಕರ್ನಾಟಕದ ಜನಪ್ರಿಯ ಕಥೆಯಾದ ಕಡ್ಲಿಮಟ್ಟಿ ಸ್ಟೇಶನ್‌ಮಾಸ್ತರ್ ಸುಗ್ನಳ್ಳಿ ಕೈಗೆ ಸಿಕ್ಕಿ ನರಳುವಂತಾಯ್ತು ಎಂದು ಕೊರಗುವವರೂ ಇದ್ದಾರೆ. ಆದರೆ ಸುಗ್ನಳ್ಳಿಗೆ ಇದರ ಯೋಚನೆಯೇ ಇಲ್ಲ. ಅವರು ಈಗಾಗಲೇ ತಮ್ಮ ಮುಂದಿನ ಯೋಜನೆಯ ಕನಸು ಕಾಣುತ್ತಿದ್ದಾರೆ: ಕನ್ನಡ ಹಾಗೂ ಹಿಂದಿ ಭಾಷೆಯಲ್ಲಿ ಹೋಲಿ ಎಂಬ ಹೆಸರಲ್ಲಿ ಚಿತ್ರವೊಂದನ್ನು ನಿರ್ದೇಶಿಸುವುದು. ಟೈಟಲ್ ಏನೋ ಚೆನ್ನಾಗಿದೆ, ಆದರೆ ಸುಗ್ನಳ್ಳಿಯಂಥಾ ನಿರ್ದೇಶಕರಿಗೆ ಬೇಕಾಗಿರುವುದು ತಾಂತ್ರಿಕ ತರಬೇತಿ ಹಾಗೂ ಸೃಜನಶೀಲತೆ. ಒಂದಷ್ಟು ಉತ್ತಮ ಚಿತ್ರಗಳನ್ನು ದಿನಾ ನೋಡುತ್ತಿದ್ದರೆ ಸುಗ್ನಳ್ಳಿ ಬೆಳೆಯಬಹುದು.

ವಿಳಾಸ:

**ಶ್ರೀಕಾಂತ್‌ಕುಲಕರ್ಣಿ,**
ನಂ.೬೨೭, ೯ನೇ ಮುಖ್ಯರಸ್ತೆ, ೫ನೇ ಕ್ರಾಸ್,
ಬನಶಂಕರಿ ಮೊದಲ ಹಂತ, ಎರಡನೇ ಬ್ಲಾಕ್,
ಬೆಂಗಳೂರು - ೫೦

**ಶಂಕರಲಿಂಗ ಸುಗ್ನಳ್ಳಿ,**
ಮಾರುತಿ ಸರ್ಕಲ್, ೨ನೇ ಎ ಕ್ರಾಸ್,
ನೇಕಾರನಗರ, ಹುಬ್ಬಳ್ಳಿ

## ನಿಮಗಿದು ಗೊತ್ತೇ?

ಅಪ್ರಮಾಣಿಕ ಕಾರ್ಯ ಮಾಡಿದ್ದಕ್ಕಾಗಿ ಒಬ್ಬನಿಗೆ ಮಲೇಷಿಯಾದ ನ್ಯಾಯಾಲಯವು ಶಿಕ್ಷೆ ವಿಧಿಸಿತು.

ಪೋಲೀಸ್ ಅಧಿಕಾರಿಗಳಿಗೆ ಲಂಚ ಕೊಡುವ ಉದ್ದೇಶದಿಂದ ಕೊಟ್ಟಿದ್ದ ೭೦ ಡಾಲರ್‌ಗಳನ್ನು ತನ್ನ ಸ್ವಂತಕ್ಕೆ ಬಳಸಿಕೊಂಡದ್ದೇ ಅವನ ಅಪರಾಧ.

**- ಜಾನ್ ಟೋಮಿ**

ಅಮೇರಿಕದ ಬೀದಿಗಳಲ್ಲಿ ಸುಂದರಿಯೋರ್ವಳನ್ನು ಕಂಡು ಸಂಧಿಸಿದರೆ ಪೋಲೀಸ್ ಬಂಧಿಸುತ್ತಾನೆ.

ಆದರೆ ಪ್ಯಾರಿಸ್ಸಿನಲ್ಲಿ ಪೋಲೀಸ್ ಅವಳ ಪರಿಚಯವನ್ನೇ ಮಾಡಿಸುತ್ತಾನೆ.

**- ಜಾಕ್ವೀಸ್ ಬಾರ್**

ನನ್ನನ್ನು ಕೇಳಿದರೆ ವರ್ಷದ ಹನ್ನೆರಡು ತಿಂಗಳೂ ಶಾಲೆಗಳನ್ನು ನಡೆಸಬೇಕು. ಏಕೆಂದರೆ ನಮ್ಮ ಮಕ್ಕಳು ರಸ್ತೆಗಳಲ್ಲಿ ಸುರಕ್ಷಿತವಾಗಿರುವುದಕ್ಕಿಂತ ಶಾಲೆಗಳಲ್ಲಿ ಹೆಚ್ಚು ಸುರಕ್ಷಿತರಾಗಿರುತ್ತಾರೆ.

**- ಡಾ. ಬ್ರೌನ್‌ವೆಲ್**

ನನಗೆ ಚರ್ಚ್‌ಗಿಂತ ಗುಡ್ಡ ಬೆಟ್ಟಗಳ ಮೇಲೆ ಹೋಗಿ ಕೂಡುವುದರಲ್ಲಿಯೇ ಹೆಚ್ಚು ಮನಃಶಾಂತಿ ಸಿಕ್ಕುತ್ತದೆ. ಮನುಕುಲದ ಮನಃಶಾಂತಿಗಾಗಿ ಮಾನವರಿಂದಲೇ ನಿರ್ಮಿತವಾಗಿರುವ ಚರ್ಚ್‌ಗಳೆಲ್ಲಿ? ಸೃಷ್ಟಿಯೇ ನಿರ್ಮಿಸಿರುವ ಬೆಟ್ಟ ಗುಡ್ಡಗಳೆಲ್ಲಿ?

**- ರಾಬರ್ಟ್ ಟೊಮಿ ಸ್ಟೀವನ್ ಸನ್**

ಅವು ಗಗನಚುಂಬಿ ಕಟ್ಟಡಗಳಾಗಿರಬಹುದು. ಆದರೆ ಅವು ನೆಲದಿಂದ ತಾನೇ ಮೇಲೆದ್ದದ್ದು.

ಬಂಗಾರವನ್ನು ಬೆಂಕಿಯಿಂದ ಪರೀಕ್ಷಿಸಲಾಗುತ್ತದೆ. ಆದರೆ ಮನುಷ್ಯನನ್ನು ಪರೀಕ್ಷಿಸುವುದು ಬಂಗಾರದಿಂದ ತಾನೇ.

**- ಚೀನಿ ಗಾದೆಗಳು**

ನಾನು ತಾರುಣ್ಯಕ್ಕೆ ಕಾಲಿರಿಸಿದಾಗ ನನ್ನ ತಂದೆ ಹೇಳಿದ ಮಾತಿದು - ''ಮಗನೇ! ನೀನು ದೊಡ್ಡವನಾದ ಮೇಲೆ ಭೂಮಿ ಕೃಷಿ ಮಾಡು. ಏಕೆಂದರೆ ಈಗ ದೇವರು ಭೂಮಿ ಕೃಷಿ ಮಾಡುವುದನ್ನು ಬಿಟ್ಟು ಮಾನವನ ಕೃಷಿ ಮಾಡಲು ಹೊರಬಿದ್ದಾನೆ''

**- ಲಾಂಗ್ ಆಂ**

ಜಗತ್ತಿನಲ್ಲಿ ಮಾದಕ ಪೇಯಗಳ ಸೇವನೆಯಿಂದ ಸಾಯುವವರ ಸಂಖ್ಯೆ - ದೇಶ ಮತ್ತು ಧರ್ಮಕ್ಕಾಗಿ ಹೋರಾಡಿ ಸಾಯುವವರ ಸಂಖ್ಯೆಗಿಂತ ಎಷ್ಟೋ ಜಾಸ್ತಿ.

**- ಅಲಸ್ ಹಕ್ಸಲೇ.**

ಸಂಗ್ರಹ: **ಜಗದೀಶ ಶ. ದುದ್ಗಿ**















ಸರಕಾರ

ಬೆಲೆಗಳು

ವಿರೋಧ ಪಕ್ಷ

# ಜಾಣ ವಿದ್ಯಾರ್ಥಿ ಯೋಜನೆ !

## ಕೇವಲ 90 ರೂಪಾಯಿಗೆ 12 ಸಂಚಿಕೆಗಳು !

ಮನೆಯಲ್ಲಿ ಎಲ್ಲರಿಗೂ ಇಷ್ಟವಾಗುವ ವಿಶಿಷ್ಟ ಮಾಸಪತ್ರಿಕೆಯಾಗಿ ಜನಪ್ರಿಯವಾಗಿರುವ 'ಬಿಸಿಲ ಬದುಕು' ವಿದ್ಯಾರ್ಥಿಮಿತ್ರರ ವಿಶೇಷ ಅಭಿಮಾನಕ್ಕೆ ಪಾತ್ರವಾಗಿದೆ. ಇದಕ್ಕೆ ಈ ಪತ್ರಿಕೆಯಲ್ಲಿರುವ ವಿದ್ಯೆ-ಉದ್ಯೋಗ ವಿಭಾಗದ ಉಪಯುಕ್ತ ಮಾಹಿತಿಯೂ ಒಂದು ಕಾರಣ. ನಾಡಿನ ಸಾವಿರಾರು ವಿದ್ಯಾರ್ಥಿಗಳಿಗೆ ಅಪ್ಪನಂತೆ, ಗುರುವಿನಂತೆ, ತಾಯಿಯಂತೆ, ಹಿರಿಯಣ್ಣನಂತೆ ಮಾಹಿತಿ-ಸ್ಫೂರ್ತಿ-ಮಾರ್ಗದರ್ಶನ ನೀಡುತ್ತಿರುವ 'ಬಿಸಿಲ ಬದುಕು' ಮಾಸಿಕ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಇನ್ನಷ್ಟು ಹತ್ತಿರವಾಗಲು ಈ ವಿಶೇಷ ರಿಯಾಯಿತಿ ಯೋಜನೆ ಘೋಷಿಸುತ್ತಿದೆ.

- ಜಾಣ ವಿದ್ಯಾರ್ಥಿ ಯೋಜನೆಯಡಿ ನೀವು ಕೇವಲ 90 ರೂಪಾಯಿ ಕಳುಹಿಸಿದರೆ ಸಾಕು. ಒಂದು ವರ್ಷ ಕಾಲ 12 ಸಂಚಿಕೆಗಳು ಅಂಚೆ ಮೂಲಕ ನಿಮ್ಮ ಮನೆ ತಲುಪುತ್ತವೆ.
- ಈ ಯೋಜನೆಯ ಪ್ರಯೋಜನ ಪಡೆಯಲು ಇದೇ ಸಂಚಿಕೆಯ 65ನೇ ಪುಟದಲ್ಲಿರುವ 'ಜಾಣ ವಿದ್ಯಾರ್ಥಿ' ಕೂಪನ್‌ನ್ನು ಭರ್ತಿ ಮಾಡಿ ನಿಮ್ಮ ಶಾಲೆ ಅಥವಾ ಕಾಲೇಜು ಮುಖ್ಯಸ್ಥರ ಸೀಲು-ಸಹಿ ಹಾಕಿಸಿ ನಮಗೆ ಕಳುಹಿಸಿ.
- 90 ರೂಪಾಯಿಗಳನ್ನು ಎಂ.ಓ. ಮೂಲಕವೇ ಕಳಿಸಬೇಕು. ಎಂ.ಓ. ಫಾರ್ಮ್‌ನಲ್ಲಿ ನಿಮ್ಮ ಪೂರ್ಣ ಅಂಚೆ ವಿಳಾಸ ಬರೆಯಲು ಮರೆಯಬೇಡಿ.

ಬಿಸಿಲ ಬದುಕು

•ವಾಣಿಜ್ಯ •ವಿಕಾಸ •ಮಾಹಿತಿ •ಸಂಪರ್ಕ

ಬಿಸಿಲ ಬದುಕು ಮಾಸ ಪತ್ರಿಕೆ

ಅಂಕುರ ಪ್ರಕಾಶನ, ಅಂಚೆ ಪೆಟ್ಟಿಗೆ : 7951, ಬಸವೇಶ್ವರನಗರ, ಬೆಂಗಳೂರು - 560 079

BISILA BADUKU Kannada Monthly No.MAG (2) PRB.DECL / 3 / 97-98 OCTOBER 1997 Regd. BGW/394

# ನಿಮ್ಮ ಬಿಸಿಲ ಬದುಕು ಓದುಗರ ಸಂಖ್ಯೆ 50,000 !










## ಅಭಿನಂದನೆಗಳು

ಬಿಸಿಲ ಬದುಕು ಓದುಗರ ಸಂಖ್ಯೆ ಅರ್ಧ ಲಕ್ಷ ತಲುಪಿದ ಈ ಸಂದರ್ಭದಲ್ಲಿ ಚತುರ ಓದುಗ ಬಳಗಕ್ಕೆ, ಪ್ರಾಮಾಣಿಕ ಏಜೆಂಟರಿಗೆ, ಕ್ರಿಯಾಶೀಲ ಪ್ರತಿನಿಧಿಗಳಿಗೆ ಹಾಗೂ ಜಾಹೀರಾತುದಾರ ಬಂಧುಗಳಿಗೆ ನಮ್ಮ ತುಂಬು ಹೃದಯದ ಕೃತಜ್ಞತೆಗಳು. ಈ ನಿಮ್ಮ ಮಾಸಪತ್ರಿಕೆ ಅಲ್ಪ ಕಾಲದಲ್ಲೇ ಅಪೂರ್ವ ಯಶಸ್ಸು ಗಳಿಸಿ ಕನ್ನಡ ಪತ್ರಿಕೋದ್ಯಮದಲ್ಲಿ ನೂತನ ದಾಖಲೆ ಸ್ಥಾಪಿಸಲು ನಿಮ್ಮ ಬೆಂಬಲವೇ ಕಾರಣ. ನಿಮಗೆ ಮತ್ತೊಮ್ಮೆ ವಂದನೆಗಳು, ಅಭಿನಂದನೆಗಳು.

– ಬಿಸಿಲ ಬದುಕು ಬಳಗ

## ಜಾಹೀರಾತುದಾರರ ಗಮನಕ್ಕೆ

**ಬಿಸಿಲ ಬದುಕು** ಡಿಸೆಂಬರ್ ಸಂಚಿಕೆಯೊಂದಿಗೆ **'ಲಾಭದಾಯಕ ಕೃಷಿ'** ಎಂಬ ವಿಶೇಷ ಉಚಿತ ಪುಸ್ತಕವನ್ನು ನೀಡಲಾಗುವುದು. ರಾಸಾಯನಿಕ ಗೊಬ್ಬರ, ಕ್ರಿಮಿನಾಶಕ, ಬೀಜ, ನೀರಾವರಿ ಪದ್ಧತಿಗಳು, ಹೈನುಗಾರಿಕೆ, ಕೋಳಿ ಸಾಕಾಣಿಕೆ, ಮೀನುಗಾರಿಕೆ, ಆಧುನಿಕ ಕೃಷಿ ಯಂತ್ರೋಪಕರಣಗಳು ಮುಂತಾದ ಕೃಷಿಗೆ ಸಂಬಂಧಿಸಿದ ಉದ್ಯಮ-ವ್ಯಾಪಾರದಲ್ಲಿ ತೊಡಗಿರುವ ವ್ಯಕ್ತಿಗಳು ಸಂಘ-ಸಂಸ್ಥೆ ತಮ್ಮ ವಸ್ತು ಹಾಗೂ ಸೇವೆಯ ಬಗ್ಗೆ ನಾಡಿನಾದ್ಯಂತ ಕೃಷಿಕರ ಗಮನ ಸೆಳೆಯಲು ಇದೊಂದು ಸುವರ್ಣಾವಕಾಶ. ಈ ನಿಟ್ಟಿನಲ್ಲಿ ನೀವು ನಿಮ್ಮ ಚಟುವಟಿಕೆಗಳ ವಿವರಗಳನ್ನು ವಿವಿಧ ಜಾಹೀರಾತುಗಳ ಮೂಲಕ ಸಾವಿರಾರು ಓದುಗರಿಗೆ ತಲುಪಿಸಬಹುದು.

ಕೃಷಿ ಚಟುವಟಿಕೆಗಳಲ್ಲಿ ನಿರತರಾದವರ ಕೈಪಿಡಿಯಾಗಿ ಅವರ ಖಾಯಂ ಸಂಗಾತಿಯಾಗಲಿರುವ ಈ ಪುಸ್ತಕದ ಜಾಹೀರಾತು ವಿವರಗಳಿಗೆ ನಮ್ಮ ಹತ್ತಿರದ ಏಜೆಂಟರು, ಪ್ರತಿನಿಧಿಗಳನ್ನು ಸಂಪರ್ಕಿಸಿ ಅಥವಾ ಕೆಳಗಿನ ವಿಳಾಸಕ್ಕೆ ಬರೆಯಿರಿ.

**ಬಿಸಿಲ ಬದುಕು** ಮಾಸ ಪತ್ರಿಕೆ

ಅಂಕುರ ಪ್ರಕಾಶನ, ಅಂಚೆ ಪೆಟ್ಟಿಗೆ : 7951, ಬಸವೇಶ್ವರನಗರ, ಬೆಂಗಳೂರು - 560 079 ✆ 3358198 ಫ್ಯಾಕ್ಸ್ : 080 5091136